ಕೊಂಡು ಆ ರಸದಲ್ಲಿ ಮೊಲೆ ಹಾಲು, ನಿಂಬೆಯ ಹುಳಿ, ಔಡಲದ ಎಣ್ಣೆ, ಈ ಮೂರನ್ನು ಬಿಟ್ಟು ಚೆನ್ನಾಗಿ ಜಾಲಿಸಿ ಒಡಲಿಗೆ ಒಂದಿಷ್ಟು ಕುಡಿಯಲು ಕೊಟ್ಟು ಮಿಕ್ಕದ್ದನ್ನು ಮೈಕೈಗೆ ಒತ್ತುವುದು.

ಅಮರದವಳ್ಳಿ, ಭದ್ರಮುಸ್ತೆ, ಬಿಳಿಯದುರುಚೆ, ಶುಂಠಿ, ಈ ನಾಲ್ಕನ್ನು ಕಷಾಯವಂ ಕಾಸಿ ಕುಡಿಯುವುದು. ವಾತಜ್ವರ, ಪಿತ್ತಜ್ವರ, ಶ್ಲೇಷ್ಮಜ್ವರ ಇವು ಹರವಹುದು.

ಬಿಳಿಯದುರುಚೆ, ಪರ್ಪಾಟಕ, ಭದ್ರಮುಸ್ತೆ, ನೆಲಬೇವು ಇವುಗಳ ಕಷಾಯವಂ ಕೊಳ್ಳಲು ಜ್ವರ ಹರ.

ಭದ್ರಮುಸ್ತೆ, ಆಡುಸೋಗೆ, ಶುಂಠಿ, ಬಿಳಿಯದುರುಚೆ, ಎಂಬಿವುಗಳ ಕಷಾಯವಂ ಕೊಳ್ಳಲು ಶ್ಲೇಷ್ಮಜ್ವರಹರ.

ಹಿಡುಕೆ, ಕಟುಕರೋಹಿಣಿ, ಭದ್ರಮುಸ್ತೆ, ಪಡವಲ, ನೆಲಬೇವು, ಇವುಗಳು ಕೂಡಿದ ಕಷಾಯವಂ ಕಾಸಿ ಕೊಡಲು ವಾತಜ್ವರಹರ. ಪಿತ್ತಜ್ವರ, ಶ್ಲೇಷ್ಮಜ್ವರ ದೀಪನ.

ಪಂಚದ್ರವಕ್ಕೆ—ಬಿಳಿದು ನೆಲಗುಳ್ಳ, ಅಮರದವಳ್ಳಿ, ಶುಂಠಿ, ಗಣಿಗಿಲ, ಕೋಷ್ಠ ಎಂಬಿವುಗಳ ಕಷಾಯವಂ ಕಾಸಿ ಕುಡಿಯಲು ಶ್ಲೇಷ್ಮವಾತವಂ ಕೂಡಿ ನೆಗ್ಗಳವಾದ ಜ್ವರ, ಕಾಸ, ಕೆಮ್ಮ, ಅರೋಚಕ, ಇವಕ್ಕೆ ಒಳ್ಳೆಯದು.

ಕಷಾಯಕ್ಕೆ :—ಕಕ್ಕೆಯ ಹಣ್ಣು, ಹಿಪ್ಪಲಿಮೂಲ, ಕಟುಕರೋಹಿಣಿ, ಭದ್ರ ಮುಸ್ತೆ, ಅಳಲೇಕಾಯಿ, ಇವೆಲ್ಲವಂ ಕೂಡಿ ಕಷಾಯವಂ ಕುಡಿಯಲು ಶೂಲೆ, ಶ್ಲೇಷ್ಮ ವಾತದಿಂ ಕೂಡಿದ ಜ್ವರ ದೀಪನವಹುದು. ಕಕ್ಕೆಹಣ್ಣು, ಅಮರವಳ್ಳಿ, ಪರ್ಪಾಷ್ಟಕ, ಭದ್ರ ಮುಸ್ತೆ, ಕಟುಕರೋಹಿಣಿ, ಎಂಬಿವಂ ಕಷಾಯವಂ ಕಾಸಿ ಕಕ್ಕೆಯ ಹಣ್ಣಂ ಕಲಸಿ ಕುಡಿಸಲು ಚಳುಕುಹರ. ಮೂರ್ಛೆ, ಮರವೆ, ಭ್ರಾಂತಿ, ದಾಹ, ಶ್ಲೇಷ್ಮಜ್ವರ ಹರ.

ನೆಲಗುಳ್ಳ, ಶುಂಠಿ, ಅಮರದವಳ್ಳಿ, ಇವುಗಳ ಕಷಾಯವಂ ಕಾಯಿಸಿ, ಹಿಪ್ಪಲಿಯ ಚೂರ್ಣದೊಳು ಕೂಡಿದುದಂ ಕುಡಿಯಲು ಅಜೀರ್ಣಜ್ವರ, ಹಳೆಯ ಜ್ವರ, ಅರೋಚಕ ಎಂಬಿವಕ್ಕೆ ಒಳ್ಳೆಯದು.

ಭದ್ರಮುಸ್ತೆ, ಪರ್ಪಾಷ್ಟಕ, ಲಾಮಂಚ, ಚಂದನ, ಶ್ರೀಗಂಧ, ಮುಡಿವಾಳ ಎಂಬಿ ವುಗಳ ಕಷಾಯವಂ ಕಾಸಿದ ನೀರಂ ಆರಿಸಿ ಕುಡಿಯಲು ನೀರಡಿಕೆ, ಕಾರುವುದು, ಭ್ರಮೆಗಳು, ಜ್ವರಂ ಮೊದಲಾದ ಎಲ್ಲಕ್ಕೂ ಒಳ್ಳೆಯ ದು.

ಅಳಲೇಕಾಯಿ, ನೆಲ್ಲಿಯಕಾಯಿ, ತಾರೇಕಾಯಿ, ಮರದರಿಸಿನ, ಹಾವುಮೆಕ್ಕೆ, ಭದ್ರ ಮುಸ್ತೆ, ಎಂಬಿವುಗಳ ಕಷಾಯವಂ ಕಾಯಿಸಿ ಮರಳಿಸಿದ ನೀರಂ ಅರಿಸಿನದ ಪುಡಿಯಂ ಕಲಸಿ

ಕುಡಿಯಲು, ಕಷಾಯವನ್ನು ಜೇನುತುಪ್ಪ ಬೆರಸಿದುದಂ ಕುಡಿಯಲು ಎಲ್ಲಾ ಪ್ರಮೇಹಂಗಳು ಮಾಣುವುವು.

ಕೊಡಸಿಗೆ, ಅತಿಬಜೆ, ಬೆಲ್ಲವತ್ತದಕಾಯಿ, ಮುಡಿವಾಳ, ಭದ್ರಮುಸ್ತೆ, ಎಂಬಿವುಗಳ ಕಷಾಯವಂ ಕಾಸಿ ಕುಡಿಯಲು ನೆತ್ತರು, ಹಲವುಕಾಲದ ಅತಿಸಾರ, ಎಲ್ಲಾ ಬಸಿರುಸೂತಕಂಗಳಿಗೂ ಒಳ್ಳೆಯದು.

ಶುಂಠಿ, ಭದ್ರಮುಸ್ತೆ, ಅತಿಬಜೆ, ಅಮರದವಳ್ಳಿ, ಎಂಬಿವುಗಳನ್ನು ನೀರಿಂದ ಮರಳಿಸಿದ್ದನ್ನು ಸಮಾನಂಗೊಂಡು ಕುಡಿಯುವುದು. ಹಸಿವಲ್ಲದಿದಕುಂ, ಗ್ರಹಣಿಗುಂ, ಉಂಡುಂಡ ಹಾಗೆ ತೋರ್ಪ ಹೊಟ್ಟೆಬೇನಗುಂ ಒಳ್ಳೆಯದು.

ಬಿಳಿಯದುರುಚೆ, ಪರ್ಪಾಷ್ಟಕ, ನೆಲಬೇವು, ಆಡುಸೋಗೆ, ಕಟುಕರೋಹಿಣಿ, ಎಂಬಿವುಗಳು ಮರಳಿಸಿದ ಕಷಾಯವಂ ಕಾಯಿಸಿ ಸಕ್ಕರೆ ಬೆರಸಿ ಕುಡಿಯಲು ರಕ್ತ ಬೆರಸಿದ ಪಿತ್ತಹರ.

ಮೆಣಸು, ಜೀರಿಗೆ, ಓಮು, ಎಲವದ ಅಗಿಲು, ಜಾಯಿಕಾಯಿ, ಲವಂಗ, ಧಾತಕೀ ಕುಸುಮ, ಮಾವಿನ ಬೀಜ, ನೇರಳೆಯ ಬೀಜ, ಇಷ್ಟೂ ಸಮಾನಂಗೊಂಡು ದಾಳಿಂಬದ ಕಾಯೊಳಗೆ ಪುಟವನಿಕ್ಕಿ ತೆಗೆದು ಅರೆದುದಂ ಗುಳಿಗೆಯಂ ಮಾಡಿ ಇರಿಸಿಕೊಂಡು ಆ ಗುಳಿಗೆಯನ್ನು ಮೊಸರಿನ ನೀರಿಂದ ಅರೆದು ಗಟ್ಟಿಮೊಸರೊಳಗೆ ಕೊಂಬುದು. ಪಥ್ಯ ಮೊಸರೋಗರ, ತೊಗರೀಬೇಳೆ. ಅಜಾಮೋದವಾಗಲೀ, ಓಮುವಾಗಲೀ, ಎರಡರಲ್ಲಿ ಒಂದು, ಎಲವದ ಅಗಿಲು, ಶುಂಠಿ, ಧಾತಕೀಕುಸುಮ, ಇಷ್ಟನ್ನೂ ಮಜ್ಜಿಗೆಯೊಳಗರೆದು ಕೊಂಬುದು. ಗಂಗಾಪ್ರವಾಹದ ಹಾಗೆ ಹೋಗುವ ಅತಿಸಾರ ತೀರ್ಗುಂ.

ಗಣಜಿಲೆಯ ಬೇರು, ದೇವದಾರು, ಅಳಲೇಕಾಯಿ, ಅಮರದವಳ್ಳಿ ಎಂಬಿವಂ ಗೋಮೂತ್ರದಲ್ಲಿ ಕಾಯಿಸಿದುದಂ ಗುಗ್ಗುಳ ಬೆರಸಿ ಕುಡಿಯಲು ದುಶ್ಚರ್ಮ, ಮಹೋದರ, ಪಾಂಡುರೋಗ, ಬಾಯಲ್ಲಿ ನೀರು ಸುರಿಯುವುದು, ಉದರಶೋಷೆ, ಶ್ಲೇಷ್ಮಾದಿಗಳೆಲ್ಲವೂ ಮಾಣುವುವು.

ಭದ್ರಮುಸ್ತೆ, ಬಿಳಿಯಹರುವೆ, ತ್ರಿಫಲೆ, ದೇವದಾರು, ಸುಗ್ಗಿಯ ಬೇರು, ಎಂಬಿವಂ ಸಮಾನಂಗೊಂಡು ಮರಳಿಸಿದ ನೀರಂ ಹಿಪ್ಪಲಿ ಬೆರಸಿ ಆವಿಯೊಳಗೆ ಪುಡಿಮಾಡಿ ಪ್ರತಿಪಾಕವಿಕ್ಕಿ ಕುಡಿಯಲು ಕೀಳುಶೋಧನೆ, ಮೇಲುಶೋಧನೆ, ಹಲವುಕಾಲ ನಡೆದಂತಹ ರೋಗಗಳು ಕ್ರಿಮಿಗಳು ಎಲ್ಲವನ್ನೂ ಕೆಡಿಸುವುದು.

ಕರಿಯದ ಬೇರು, ಕೊಡಸಿಗೆಬೀಜ, ಬೇವು, ಬಜೆ, ಶುಂಠಿ, ಮೆಣಸು, ಹಿಪ್ಪಲಿ, ಅಣಿಲೇಕಾಯಿ, ತಿಗಡೆ, ಎಂಬಿವುಗಳೊಳು ಮಾಡಿದುದಂ ಆಡಿನ ಮೂತ್ರದೊಳು ಕೂಡಿರುವುದನ್ನು ಏಳು ದಿನಗಳು ಕುಡಿಯೆ ಕ್ರಿಮಿಶತಸಹಸ್ರಕೋಟಿಯನ್ನು ಕೆಡಿಸುವುದು.

ಏಲಕ್ಕಿ, ಹಿಪ್ಪಲಿ, ಅಷ್ಟಮಧುಕ, ಪಾಷಾಣದಬೇಧಿ, ರೇಣುಕ, ನೆಗ್ಗಿಲುಬೇರು, ಆಡುಸೋಗೆ, ಔಡಲಿಕೆಯ ಬೇರು, ಎಂಬಿವುಗಳಂ ಮರಳಿಸಿದ ನೀರಂ ಕಲ್ಲಲ್ಲರೆದುಪ್ರತಿಪಾಕ ವಿಕ್ಕಿ ಕುಡಿಯುವುದು. ಮರಳುವೆರಸಿದ ಆಚಕಿ ಎಂಬ ಕಲ್ಲಕಟ್ಟಂ ಕಿರಿದುಕಿರಿದಾಗಿ ತಡೆದು ಬೀಳುವ ಮೂತ್ರದ ಉಪದ್ರಂ ಮೊದಲಾದುದು ಗುಣವಹುದು.

ಅಳಲೆಯ ಕಾಯಂ, ನೆಗ್ಗಿಲಬೇರಂ, ಕಕ್ಕೆಯ ಹಣ್ಣಂ, ಪಾಷಾಣಭೇದಿಯಂ, ಬಿಳಿಯದುರುಚಿ ಎಂಬಿವಂ ಕಾಸಿದ ನೀರಂ ಜೇನುತುಪ್ಪವೆರೆಸಿದುದಂ ಕುಡಿಯೆ ಮೂತ್ರ ಸಿಕ್ಕು, ಉದರದೊಳು ಸೂಡಿಗಳಂ, ಬೇನೆಗಳೊದಗಿ ವರ್ತಿಪುದರೊಳಂ, ಮೂತ್ರಹೋಗದಿರುವುದರೊಳಂ, ಅಂತು ಈ ನಾಲ್ಕು ದೋಷಂಗಳೆಲ್ಲವನ್ನೂ ಕೆಡಸುಗುಂ.

ಏಲಕ್ಕಿ, ಪಾಷಾಣಭೇದಿಯಂ, ಕಲ್ಲ ಅಗಿಲು, ಹಿಪ್ಪಲಿ, ಎಂಬಿವುಗಳ ಪುಡಿಗಳಂ, ಅಕ್ಕಿಯ ಗಚ್ಚಿನಿಂದ ಕಲಸಿ ಕುಡಿಯೆ ಅಂದರೆ ಬೆಲ್ಲದಿಂದ ಕೂಡಿ ಇರುವುದಂ ಕುಡಿಯೆ........ಪಡುತ್ತಿರ್ದ ಸಮೀಪಸ್ಥವಾದ ಮೃತ್ಯುವಾದೊಡಂ ಬದುಕುಗುಂ. ಮೂತ್ರಸಿಕ್ಕು ಬಹಮೂತ್ರ ಸಂಕಟದೊಳು ಶೀಘ್ರವಂ ಮಾಡುಗೆ. ಉಪಶಮನವಕ್ಕುಂ.

ಆಡುಸೋಗೆ ಅಮರದವಳ್ಳಿ, ಕಕ್ಕೆಯ ಹಣ್ಣು, ಎಂಬಿವುಗಳಂ ಸಮಾನಂಗೊಂಡು ಔಡಲದ ಎಣ್ಣೆಯಂ ಪ್ರತಿಪಾಕವನರೆದು ಕಷಾಯವಂ ಕ್ರಮದಿಂದಂ ಕುಡಿಯುವುದು. ಎಲ್ಲಾ ಮೈಅಲಸಿಕೆಯನ್ನು ಉಳಿವಿಲ್ಲದೆ ಗೆಲ್ಗುಂ. ನೆತ್ತರು ಮೊದಲಾದುದು, ವಾತದೊಳಾದ ಎಲ್ಲಾ ವ್ಯಾಧಿಗಳಂ ಕೆಡಿಪುದು. ಎಲೆಗಳನ್ನೂ ಹೂವುಗಳನ್ನೂ...... ಮರದಪಾಲಿಂದ ಅರೆದು ಭಾಗೋತ್ತರಂಗೊಂಡು ಕೊಡಲು ಮಾಣುವುವು. ನೆತ್ತರು ಆರಿದದುನ್ನು ಹೆಚ್ಚಿದುದನ್ನೂ ಮದನೊಕ್ಕಿದ ಪೇರಾನೆಯು ಅಂಕುಶದಿಂದ ಹೇಗೆ ಹೋಗುವುದೋ ಹಾಗೆ ಸಮಂಜಸವಂ ಮಾಡುವುದು.

ಕಿರುಕುಸಾಲೆಯ ಬೇರಂ ಸಣ್ಣನಾಗಿ ಅರೆದು ಜೇನುತುಪ್ಪ ಒಡಗೂಡಿ, ಅಕ್ಕಿಗಚ್ಚಿನ ನೀರಿಂ ಕುಡಿಯಲ್ಪಟ್ಟರೆ ಎಲ್ಲಾ ತರದಿಂದ ಕೆಟ್ಟ ನೆತ್ತರಂ ಕೆಡಿಸುವುದು.

**ಮೇಲುಬ್ಬಸವಂ** ನಿಲ್ಲಿಸೆ ಗಂಟುಭಾರಂಗಿಯನ್ನು ಶುಂಠಿಯೊಡನೆ ಸಣ್ಣನಾಗಿ ಅರೆದು ಬಿಸಿನೀರಲ್ಲಿ ಕುಡಿಯೆ ಶ್ವಾಸಕಾಸಂಗಳಂ ಕೆಡಿಸುಗುಂ.

ಗಂಟುಭಾರಂಗಿಯಂ ಚೆನ್ನಾಗಿ ಅರೆಯಲ್ಪಟ್ಟುದುದನ್ನು ಎಲಚಿಯ ಹಣ್ಣಿನಷ್ಟು ಪ್ರಮಾಣಂ ಆ ಭಾರಂಗಿಯ ಸಮಾನವಹಂಥಾ ಶುಂಠಿಪುಡಿಯನ್ನು ಮಾಡಿ ಇದನ್ನು ಬಿಸಿನೀರಿಂದ ಕುಡಿಯಿಸಿದರೆ ಆ ಕ್ಷಣದಲ್ಲೇ ಮನುಷ್ಯರಿಗೆ ಶ್ವಾಸಕ್ಕೆ ಕಾಸಕ್ಕೆ ಹಿತವಹುದು.

ಔಡಲಿಕೆಯಂ, ಬೆಲ್ಲವತ್ತದ ಹಣ್ಣಂ, ಎರಡು ಪಡಿಯಗುಳವಂ, ಮಾದಲದ ಬೇರು, ಹಿಟ್ಟುಳಿಕೆಯ ಬೇರು, (ಇದಂ ಕೆಲವರು ಮೊರವಾಡಿನ ಕಾಲೆಂಬರು) ಶುಂಠಿ, ಮೆಣಸು,

ಹಿಪ್ಪಲಿ ಎಂಬಿವುಗಳಿಂದಂ ಗೋಮೂತ್ರದಿಂದ ಅಡಲು ಅಷ್ಟಕಕಷಾಯವು. ಸದ್ಯಕ್ಷೀರ, ಯವಕ್ಷೀರ, ಬೆರಸಿದ ಇಂಗು, ಕಾಚುಲವಣ, ಬಿಡುಲವಣ, ಸಂವತ್ಸರಲವಣ, ಸೈಂಧವ ಲವಣ, ಪಂಚಲವಣ, ತೈಲದೆಣ್ಣೆ, ಎಂಬಿವುಗಳ ಕೂಡಿ ಬೆರಸಿದುದಂ, ಊರು, ತೊಡೆ, ಎದೆ, ಮೊಲೆ ಎಂಬಿವುಗಳ ಬೇನೆಗಳಲ್ಲಿ ಕೊಡುವುದು.

ಇಂಗು, ಬಜೆ, ಬಿಡುಲವಣ, ಶುಂಠಿ, ಜೀರಿಗೆ, ಅಳಲೆಯಕಾಯಿ, ಚಿಂಗಣಿಗಿಲೆ, ಕೋಷ್ಠ ಎಂಬಿವಂ ಭಾಗೋತ್ತರಂಗೊಂಡು ಅಪುಡಿ ಮಾಡಿ ಇದು ಇಷ್ಟನ್ನೂ ಚೂರ್ಣವಾದುದಂ, ಗುಲ್ಮ, ಜಲೋದರ, ಅಜೀರ್ಣ, ವಿಷೂಚಿ, ಕಾಸ, ನೀರುಕೊಂಡು ಹೊಟ್ಟೆ ಕಳೆಯುವುದು, ಇವುಗಳೊಳು, ಆ ಚೂರ್ಣವಂ ಬಿಸಿನೀರಂ ಕಲಸಿ ಕುಡಿಯೆ, ಚೂರ್ಣಪುಡಿಮಾಡಿದುದಂ ಸಮಾನಂಗೊಂಡು ಸಂವತ್ಸರಲವಣ, ಇಂಗು, ಶುಂಠಿ, ಎಂಬೀ ಔಷಧಿಗಳನ್ನು ಶುಂಠಿಯ ಕಷಾಯದ ಬಿಸಿನೀರಿಂ ಕುಡಿಯೆ ವಾತದಿಂದ ಹುಟ್ಟಿದ ಬೇನೆಗಳೊಳು, ಎದೆ ನೋವು, ಬೆನ್ನು ಬಸಿರುಗಳ ಅರ್ತಿ ಜೇನೆಗಳು ಇವುಗಳೆಲ್ಲಂ ಕೆಡುವುವು. ಬದ್ಧಮಲ ಬಿಡುವುದು.

ತವಸದ ಎಲೆ, ಆನೆನೆಗ್ಗಿಲು, ಹಾವುಮೆಕ್ಕೆ, ಚವ್ಯ, ಚಿತ್ರಮೂಲ, ಶುಂಠಿ, ಹಿಪ್ಪಲಿ, ಮೆಣಸು, ಎಂಬಿವುಗಳಂ ಒಳ್ಳೆಯದಾಗಿ ರಚಿಸಿ ಇದರ ಮೇಲೆ ಕಲ್ಲುಪ್ಪಂ ಹಾಕಿ ಸುಟ್ಟು ಆ ಬೂದಿಯಂ ಪುಡಿ ಮಾಡಿ, ಮೊಸರಿನ ಮೇಲಿನ ನೀರಲ್ಲಿ ಕಲಸಿ ಪ್ರಯೋಗಿಸಲು ಗುಲ್ಮಕ್ಕುಂ, ಬಸುರಿಗುಂ, ಉತ್ತಮಂ. ಪಾಂಡು, ಮೈಜಿಳ್ಳಪ್ಪುದಂ, ಗುದದೊಳ್ಪುಟ್ಟಿದ ವ್ಯಾಧಿಗಳಂ ಕೆಡಿಸುಗುಂ. ಬಿಸಿನೀರೊಳು ಕುಡಿಯುವುದು.

ಕರ್ಕಾಟಕಶೃಂಗಿಯಂ ಅಳಲೇಕಾಯಿ, ನೆಲ್ಲಿಕಾಯಿ, ತಾರೇಕಾಯಿಗಳಂ, ಶುಂಠಿ, ಹಿಪ್ಪಲಿ, ಮೆಣಸು, ನೆಲಗುಳ್ಳ, ಗಂಟುಭಾರಂಗಿ, ಪುಷ್ಕರಮೂಲ, ಜಟಾಮಾಂಸಿಯಂ, ಕಾಚುಲವಣ, ಬಿಡುಲವಣ, ಸಂವತ್ಸರಲವಣ, ಸೈಂಧವ, ಸಮುದ್ರ ಎಂಬೀ ಪಂಚಲವಣಗಳು, ಎಂಬಿವಂ ಪುಡಿ ಮಾಡಿ, ಬಿಸಿನೀರಿಂ ಕುಡಿಯೆ ಬಿಕ್ಕಲು, ಊರ್ಧ್ವಶ್ವಾಸ, ವಾತ, ಕೆಮ್ಮು, ನೆಗಡಿ, ಮೊದಲಾದುವುಗಳು ಪರ.

ಕಾಂತಾದಿವಟಕ :— ಬೊಬ್ಬುಳಿ, ನೇರಿಳೆ, ಜೇವು, ಮತ್ತಿ, ಮಾಕ್ಷಿ, ಇವುಗಳ ತಿಗಡುಗಳನ್ನು ಸರಿಯಾಗಿ ಕೂಡಿಸಿಕೊಂಡು ಅವಕ್ಕೆ ನೀರನೆರೆದು ನೆನೆಯಲಿಕ್ಕಿ ಆ ರಸದಲ್ಲಿ ಶುದ್ಧವಾದ ಲೋಹಚೂರ್ಣ, ಶುದ್ಧವಾದ ಅಯಃಕಾಂತಚೂರ್ಣ, ಇವು ಎರಡನ್ನೂ ಸರಿಯಾಗಿ ತೂಗಿಕೊಂಡು ಈ ಕಷಾಯದ ಉದಕದಲ್ಲೂ ಅರೆದು, (ಅಂದರೆ ಏಳು ದಿನಗಳು ಅರೆಯುವುದು) ಆ ಮೇಲೆ ಅದನ್ನು ಗ ೩ ತೂಕ, ಪ್ರಮಾಣದಲ್ಲಿ ಗುಳಿಗೆಯಂ ಮಾಡಿ ನೆರಳಲ್ಲಿ ಒಣಗಿಸಿ ಹೊಸಮಡಕೆಯಲ್ಲಿ ತುಂಬಿ ಇರಿಸಿ ಜೇನುತುಪ್ಪದಲ್ಲಿ ಕಲಸಿ ಲೇಹ್ಯವಾಗಿ ಕೊಡುವುದು.

ಕೂಷ್ಮಾಂಡಘೃತ :— ಕುಷ್ಠವ್ಯಾಧಿಸ್ಥನು ಕುಂಬಳಕಾಯಿಭಾಗಂಗಳು ಆದ ಅನಂತರದಲ್ಲಿ ಪಚನವಿಧಿ ಅಡುವ ತೆರನೆಂತೆಂದರೆ ಕುಂಬಳಹಣ್ಣು ಗಾಯಂಗೊಂಡು ಅದರೊಳ

ಗಿರುವ ಬೆಂಡಂ ಹೊರಗೆ ತೆಗೆದು ತಿಗುಡಂ ತೆಗೆದು ಹಾಕಿ ನಡುವಣ ತಿರುಳಂ ಕಿರಿಯಭಾಗಂಗಳಾಗಿ ಮಾಡಿ ಹರವಿಯೊಳು ಹೊಯ್ದು ಸ್ವಲ್ಪ ಒಣಗಿಸಿ ಜಜ್ಜಿ ತುಪ್ಪವನೆರೆದು ಕಲ್ಪವನಿಕ್ಕಿ ತುಪ್ಪದ ಮೇಲಿಕ್ಕಿದಾಗಲೂ ಸೀಯಲೀಯದೇ ತೆಗೆದುಕೊಂಡು ಇಡುಗೆ. ಮುನ್ನು ತುಪ್ಪ ಉಂಡ ಮಡಕೆಯೊಳು ಆ ಕುಂಬಳದ ಕಾಯಿಯ ಭಾಗಂಗಳು ಬೆಂದೊಡೆ ಆ ಭಾಗ ಒಪ್ಪಲದೊಳಗೆ ಒಪ್ಪಲ ಸಕ್ಕರೆಯಂ ಒಪ್ಪಲ ಜೇನುತುಪ್ಪವಂ ಹೊಯ್ದು ಅದರೊಳಗೆ ಮೆಣಸು, ಹಿಪ್ಪಲಿ, ಶುಂಠಿ, ಜೀರಿಗೆ, ಎಂಬಿವುಗಳ ಒಂದು ಮಾನ ಪುಡಿಯಂ ಹೊಯ್ದು ಶ್ರೀಗಂಧ, ಏಲಕ್ಕಿ, ಲವಂಗ, ನಾಗಕೇಸರಿ, ಎಂಬಿವುಗಳ ಪುಡಿಯಂ ಕಲಸಿ ಇಪ್ಪಲ ಹಸುವಿನ ತುಪ್ಪವಂ ಹೊಯ್ದು ಕಲಸಿ ಮಡಗುವುದು. ಕಪ್ಪಲಿ ೫ ತೂಕ, ತ್ರಿಕಟುಕ ೧೫ ತೂಕ, ತ್ರಿಫಲೆ ೧೫ ತೂಕ, ಚಿತ್ರಮೂಲ, ಬೋಳದರಗು ಇವಕ್ಕೆ ಮೂರು ಬಳ್ಳ ನೀರಂ ಹೊಯ್ದು ಇಮ್ಮಾನವಾಗುವ ಹಾಗೆ ಕಾಯಿಸಿ, ಆ ಔಷಧವಂ ನಾಲ್ಕು ಅಥವಾ ಮೂರು ಭಾವನೆಯಂ ಕೊಟ್ಟು, ಸಣ್ಣನಾಗಿ ಅರೆದು, ಅದರೊಳಗೆ ವತ್ಸನಾಭಿ ಎರಡು ತೂಕವಂ ಕೂಡಿ, ಸೂರ್ಯ ಪುಟದಲ್ಲಿ ಇಟ್ಟು ಅದನ್ನು ಚೂರ್ಣವಂ ಮಾಡಿ, ಕರಡಿಗೆಯಲ್ಲಿ ತುಂಬಿ ಇರಿಸುವುದು. ದೀಪನಕೆಟ್ಟವರಿಗೆ ಶಕ್ತಿಯಾದೀತು. ಆದಿಯಲ್ಲಿ ಎರಡು ಹಣ ತೂಕ, ಅಲ್ಲಿಂದ ಮೇಲೆ, ಮೂರು ಹಣ ತೂಕವಂ ಕೊಡುತ್ತ ಬರುವುದು. ಇದು ಅಗ್ನಿಕುಮಾರಂ. ವಾತಕ್ಕೆ ಬೆಳ್ಳುಳ್ಳಿ. ೧೨ ಪಲ, ತ್ರಿಕಟುಕ ೭ ತೂಕ, ಇಂಗು ೨ ತೂಕ, ಸದ್ಯಕ್ಷಾರ ೨ ತೂಕ, ಹಿಪ್ಪಲಿಯಮೂಲ ೨ ತೂಕ, ಜೀರಿಗೆ ೨ ತೂಕ, ಗಜಹಿಪ್ಪಲಿ ೨ ತೂಕ, ಸಬಸಿಗೆ ೨ ತೂಕ, ಕೊತ್ತಂಬರಿಯ ಬೀಜ ೨ ತೂಕ, ಪಂಚಲವಣಂ ೧೦ ತೂಕ, ಚಿತ್ರಮೂಲ ೨ ತೂಕ, ಓಮ ೨ ತೂಕ, ಎಳ್ಳು ೮ ತೂಕ, ಸಾಸುವೆ ೮ ತೂಕ, ಇವುಗಳಲ್ಲಿ ಉಳ್ಳಿಹೊರತಾಗಿ ಎಲ್ಲವಂ ಚೂರ್ಣವಂ ಮಾಡಿ ವಸ್ತ್ರಗಾಳಿತವಂ ಮಾಡಿ ಆ ಉಳ್ಳಿಯನರೆದು ಕಲಸಿ ತುಪ್ಪದ ಗಡಿಗೆಯೊಳಗಿಕ್ಕಿ ನಿಂಬೆಯ ಹಣ್ಣಿನ ರಸದಲ್ಲಿ ಕಲಸಿ ನಾಲ್ಕು ದಿನವಿರಿಸಿ ಶೋಧಿಸಿ ಅತ್ತಿಯ ಕಾಯಂ ೮ ದಿವಸಂ ಸೇವಿಸುಗೆ. ಮುನ್ನು ತುಪ್ಪ ಮರಳಿಸಿದ ಹಸುವಿನ ಹಾಲಲ್ಲಿ ಕುಡಿಯುವುದು. ಅಂದರೆ ಲೇಹ್ಯವಂ ನಕ್ಕಲು ಬಾಲಕ ಕಿರುಕೂಸುಗಳಿಗೆ ವೃದ್ಧ ಮುದುಕರಿಗೆ ಸಹ ಅವಿರಳವಾತದಿಂದಂ ರಕ್ತದಿಂದಂ ಕೃಶ=ಅಂದರೆ ಬಡವಾದವರಿಗೆ, ತೃಷೆ, ಅಶಕ್ತ, ಅತಿಕಾಮಿಗಳಿಗೆ, ಕ್ಷತಾನಾಂ ಚ=ಗಾಯ ಪಡೆದವರಿಗೆ, ತೃಷಾ=ನೀರಡಿಕೆಯಂ, ಕೆಮ್ಮು, ರಕ್ತ ಪಿತ್ತಮಂ, ಊರ್ಧ್ವಶ್ವಾಸಮಂ,ಮೂಲ ವ್ಯಾಧಿ, ಬಿಡದೆ ಕರೆದವರಿಗಂ ಒಳ್ಳೆಯದು. ಇದು ಕೂಷ್ಮಾಂಡಘೃತವೆಂಬ ಯೋಗಾಮೃತ. ಜೇನುತುಪ್ಪದೊಳು ಕುಡಿದೊಡೆ ಒಹುಮೂತ್ರ, ಮಗ್ಗಾರೆಯ ಹುಣ್ಣು ಮಾಣುವವು.

## D 1359

ಕೃಷ್ಣಾಭ್ರಕ ಭಸ್ಮ :—ಕೃಷ್ಣಾಭ್ರಕವನ್ನು ಧಾನ್ಯಾಭ್ರಕವ ಮಾಡಿ ಎಕ್ಕೆಹಾಲಿನಲ್ಲಿ ಚತುಷ್ಕಶಃ ಟಂಕಣವನ್ನಾಗಲೀ ಪುಟಿಕೆಯನ್ನಾಗಲೀ ಹಾಕಿ ಮರ್ದಿಸಿ ಗಜಪುಟವನ್ನು ೨೦ ಕೊಟ್ಟರೆ ಭಸ್ಮವಹುದು. ಬಳಿಕ ಒಳಗಿನ ತಿಗಡು, ಮಂಜಿಷ್ಠ ಕಷಾಯವಂ ಮಾಡಿ ಆ ಕಷಾಯದಿಂದ ಪುಟ ೨೬ ಮಾಡಿದರೆ ಭಸ್ಮವಹುದು. ಅಭ್ರಕವನ್ನು ಕುಲುಮೆಯಲ್ಲಿ ಕಾಸಿ, ಅಂಬಿಲ, ಗೋಮೂತ್ರ, ತ್ರಿಫಲೆಕಷಾಯ, ಹಸುವಿನ ಹಾಲು, ಪ್ರತ್ಯೇಕ ಕಾಸಿ ಮೂರುಬಾರಿ

ಅದ್ದಿ ಬಳಿಕ ಧಾನ್ಯಾಭ್ರಕವನ್ನು ಮಾಡಿ ಎಕ್ಕೆಯ ಹಾಲಲ್ಲಿ ಮರ್ದಿಸಿ ೩೦ ಪುಟವನ್ನಿಕ್ಕುವುದು. ಒಂದುವರೆ ಹಸ್ತದುದ್ದ ಒಂದು ಹಸ್ತದಗಲದಲ್ಲಿ ಕುಳಿಯ ತೆಗೆದು, ಆ ಕುಳಿಯಲ್ಲಿ ಕಾದಬೆರಣಿಯ ಅರ್ಧವ ತುಂಬಿ ಆ ಮೇಲೆ ಅಭ್ರಕ ರೊಟ್ಟಿಯನ್ನು ಸಂಪುಟದಲ್ಲಿ ಇರಿಸಿ ಪುಟವನ್ನು ಮಾಡುವುದು. ಈ ಪ್ರಕಾರದಿಂದ ೩೦ ಪುಟವನ್ನು ಕೊಟ್ಟು ಮಂಗರವಳ್ಳೀರಸ, ಕಳ್ಳಿರಸ, ಎಲಚುರಿ, ಈ ಮೂರು ರಸಗಳಲ್ಲಿ ಷೋಡಶಾಂಶ ಶೋಧಿಸಿದ ಗಂಧಕವನ್ನಿಕ್ಕಿ, ಪ್ರತ್ಯೇಕ ಪುಟ ಐದು ಕೊಟ್ಟು, ಬೀಳಿನ ಆಲದ ಬಿಳಿದ ಕಷಾಯದಿಂದ ಪುಟ ೧೦, ಅತ್ತಿರಸದಿಂದ ೧೦ ಪುಟ, ಮುಸ್ತಾರಸದಿಂದ ೧೦ ಪುಟ ಕೊಟ್ಟರೆ, ಶುದ್ಧಭಸ್ಮವಹುದು.

## D 1372 & R 1373

ಗಂಧಕಗುಟಿಕೆ :—ರಸ, ಗಂಧಕ ಈ ೨ ನ್ನು ಭದ್ರಮುಸ್ತೆರಸದಲ್ಲೂ ಚಿತ್ರಮೂಲದ ರಸದಲ್ಲೂ ತ್ರಿಫಲೆಯ ಕಷಾಯದಲ್ಲೂ ಇವುಗಳಲ್ಲಿ ನಾಲ್ಕು ಜಾವ ಮರ್ದಿಸಿ.........ವನಿಕ್ಕಿ ಮರ್ದಿಸಿ ಗುಂಜಿಯ ಸಮಾನ ಗುಳಿಗೆಯಂ ಮಾಡಿ ಬೆಲ್ಲದಲ್ಲಿ ಕೊಡಲು.........ಕುಷ್ಠ, ಗುಲ್ಮ, ಉದರರೋಗಂಗಳು, ಶೂಲೆ, ಪ್ರಮೇಹಂಗಳು, ಮತ್ತೆ ಹುಟ್ಟುವಂಥಾ ರೋಗಗಳು ಮಾಣುವುವು ಸುವರ್ಣಕಾಯಕಾಂತಿ, ಆರೋಗ್ಯ, ಸತ್ವ, ರೂಪು ಅಹುದು.

## D 1363

ಗಂಧಕತೈಲ :—ಗಂಧಕವನ್ನು ನಿಂಬೇಹುಳಿಯಲ್ಲಿ ಅರೆದು ಮೊಸುಕನ ಹಾಗೆ ಮಾಡಿ ಮಣ್ಣು ಮೊಗೆ ತುಂಬಿ ಗಾಜಿನ ಬಟ್ಟಲಲ್ಲಿ ಮೊಗೆ ಮಡಗಿ ಬಿಸಿಲಲ್ಲಿ ಎಪ್ಪತ್ತು ದಿನ ಇರಿಸಲು ಮೊಗೆಯಿಂದ ಕನಿಗೆ ಸಾರಲದು ಗಾಜಿನ ಬಟ್ಟಲಿಗೆ ಬೀಳುವುದು.

## D 1359

ಗಂಗಾಧರಚೂರ್ಣ :—(ಅತಿಸಾರಕ್ಕೆ)—ನೇರಿಳಕೊಟ್ಟೆ, ಮಾವಿನ ಕೊಟ್ಟೆ, ಬೆಲ್ಲವತ್ತದಕಾಯಿ, ಶುಂಠಿ, ಕೊಡಸಿಗ, ಅತಿಬಜೆ, ಭದ್ರಮುಸ್ತೆ, ಆಲದಮುಗಳು, ಹಿಪ್ಪಲಿ, ಉತ್ತರಣಿ, ಧಾತಕೀಕುಸುಮ, ಜೀರಿಗೆ, ಗೇರು, ದಾಸಾಳಹೂವು, ದಾಳಿಂಬ, ರಸಾಂಜನ, ಎಲಮುಗಿಲು, ಮುಟ್ಟದರೆ ಮುರುಟೆ, ಹಂಸಪಾದಿಬೇರು, ಕೊತ್ತಂಬರಿ, ಲಾಮಂಚ, ಇವನ್ನು ಚೂರ್ಣ ಮಾಡಿ ಸಮಾನ ಸಕ್ಕರೆ ಬೆರಸಿ ನೆಲ್ಲಕ್ಕಿ ಗಂಜಿಯಿಂದ ಕೊಡಲು ಸಮಸ್ತ ನೆತ್ತರು, ಹೊಟ್ಟೆಬೇನೆ ಶಾಂತ. ಇದು ಗಂಗಾಧರಚೂರ್ಣ.

ಗಂಡಭೇರುಂಡರಸ :—ಇಂಗಲೀಕ ೨ ತೂಕ, ನಾಭಿ ೪ ತೂಕ, ಕಟುಕರೋಹಿಣಿ ೪ ತೂಕ, ಇವಂ ಶುದ್ಧವ ಮಾಡಿ ತಣ್ಣೀರಿನಲ್ಲಿ ಎರಡು ಜಾವ ಮರ್ದಿಸಿ ಗುಂಜಾಪ್ರಮಾಣದಲ್ಲಿ ಗುಳಿಗೆಯಂ ಮಾಡಿ ನೆಳಲಲ್ಲಿ ಒಣಗಿಸಿ, ಹೆಜ್ಜ್ವರಕ್ಕೆ ಶುಂಠೀರಸ, ತಾಪಜ್ವರಕ್ಕೆ ಎರಡು ಜೀರಿಗೆ, ಯಷ್ಟಿಮಧುಕ, ಶೀತಜ್ವರಕ್ಕೆ ೨ ಜೀರಿಗೆ, ಶ್ಲೇಷ್ಮಜ್ವರಕ್ಕೆ ತ್ರಿಕಟುಕ, ಬಿಳಿಗಾರ ವರೆದು (ಕೊಡುವುದು.) ಇದು ಗಂಡಭೇರುಂಡ ರಸ.

## D 1400

ಗಜಕೇಸರೀಯೋಗ -—(ಶೀತಜ್ವರ ಗುಲ್ಮ ಶೂಲೆಗಳಿಗೆ)—ರಸ ೧ ತೂಕ, ಗಂಧಕ ೧ ತೂಕ, ಇಂಗಲೀಕ ಗ ೧, ಈ ಮೂರನ್ನೂ ಕೂಡಿ ಮತ್ಸ್ಯಪಿತ್ಥದಲ್ಲಿ ಭಾವನೆಯ ಮಾಡಿ ೩ ಗುಂಜಿ ಪ್ರಮಾಣ ಗುಳಿಗೆಯ ಮಾಡಿ ಅಲ್ಲದ ರಸದಲ್ಲಿ ಕೊಡುವುದು. ಇದಕ್ಕೆ ಪಥ್ಯ ಹಾಲೋಗರ.

## D 1372 & R 1373

ಗುಗ್ಗುಳವಂ ಶುದ್ಧಿಯ ಮಾಡುವ ಕ್ರಮ :—ಬೇವಿನ ಸೊಪ್ಪಿನಲ್ಲಿ ಬೇಯಿಸುವದು. ಮರು ದಿನ ಕಹಿಪಡವಲದಲ್ಲೂ ಒಂದು ದಿನ ಅಮರದ ವಳ್ಳಿಯಲ್ಲೂ ಒಂದು ದಿನ ಆಡು ಸೋಗೆಯ ರಸದಲ್ಲೂ ಒಂದು ದಿನ ನೆಲಗುಳ್ಳದ ರಸದಲ್ಲೂ ಇಂತು ಐದೈದು ಎರಡೆರಡು ಕುದಿ ಬರಲಾಗಿ ಇಳುಹಿ ಆರಿಸಿ ಶುದ್ಧವ ಮಾಡಿ ಆ ಆರಿದ ಗುಗ್ಗುಳಕ್ಕೆ ಎರಡು ವರಾಹ ತೂಕ ಗುಗ್ಗುಳಕ್ಕೆ ವಿಳಂಗ, ತುಪ್ಪ, ದೇವದಾರಿನ ಚಕ್ಕೆ, ಕಾಡುಸೀಗೆಯಚಕ್ಕೆ, ಅತಿಬಜೆ, ಆಡು ಸೋಗೆ, ಜೀರಿಗೆ, ಇವಂ ಪ್ರತ್ಯೇಕ ಗ ೪ ತೂಕವಂ ಕೂಡಿ ಸಣ್ಣನಾಗಿ ಕುಟ್ಟಿ ವಸ್ತ್ರಗಾಳಿತವಂ ಮಾಡಿ ಆ ಗುಗ್ಗುಳದಲ್ಲಿ ಕೂಡಿಸಿ ತುಪ್ಪದಲ್ಲಿ ಹಾಕಿ ಇಡುವದು. ಆ ತುಪ್ಪ ೩ ತೂಕವಂ ದಿನಕ್ಕೆ ಕೊಳ್ಳಲು ಹೊಟ್ಟೆ, ಮತ್ತು ಎದೆಯಲ್ಲಿ ಹುಟ್ಟಿದಂಥಾ ದೋಷಂಗಳೆಲ್ಲ ಕೆಡುವುವು. ಒಂದು ಮಂಡಲ ಕೊಂಬುದು. ಸಿತಪ್ರಮೇಹಕ್ಕೆ ಚಿತ್ರಮೂಲದ ಕಷಾಯವಂ ಮಾಡಿ ಕೊಡುವದು. ಸಿತವಾಗಿ ಹೋಗುವ ಮೂತ್ರಕ್ಕೆ ಅಗುಳುಶುಂಠಿ, ಅಗಿಲು ಇವು ಸಮಾನವಾಗಿ ಗ ೧೨ ತೂಕವನ್ನು ಕಷಾಯವಂ ಮಾಡಿ ಕೊಡುವುದು. ಬಾಯಿಯ ನೀರಿನ ಹಾಗೆ ಹೋಗುವ ಮೂತ್ರವು ಮೇಹವೆಂಬುದು. ಇದಕ್ಕೆ ತ್ರಿಫಲೆ, ಕಕ್ಕೆಯ ತಿಗಡು ಗ ೧೨ ತೂಕವಂ ಮಾಡಿ ಕೊಡುವದು. ಇದಕ್ಕೆ ಜೇನುತುಪ್ಪ ಗ ೩ ತೂಕವಂ ಪ್ರತಿಪಾಕವಿಕ್ಕಿ ಕೊಡುವುದು.

## D 1370

ಗುಟಿಕೆ :—(ಕ್ರಿಮಿ ದೋಷಕ್ಕೆ.)

ತಿಂತ್ರಿಣೀಪತ್ರನಿರ್ಯಾಸತಾಲತಾಮ್ರರಸಾನ್ವಿತಮ್ ।
ಮರ್ದಯೇತ್ ಪಾರದಂ ಪ್ರಾಜ್ಞೋ ರಸಬದ್ಧೋ ಭವಿಷ್ಯತಿ ॥
ತೋಯಮಧ್ಯೆ ವಿನಿಕ್ಷಿಪ್ಯ ಗುಟಿಕಾ ವಜ್ರವದ್ಭವೇತ್, ।
ಶಾಖವೃಕ್ಷಸ್ಯ ದೇವೇಶಿ ನಿಷ್ಪೀಡ್ಯ ರಸಮುತ್ತಮಮ್ ॥
ರಕ್ತಚಂದನಸಂಯುಕ್ತಂ ತಾರಮಾಯಾದಿಕಾಂಚನಮ್ ।
ಶಾಖವೃಕ್ಷಸ್ಯ ನಿರ್ಯಾಸಂ ಯತ್ನತಃ ಪರಿಗಾಳಯೇತ್ ॥
ಜ್ವರೋ ವಿವರ್ಣತಾ ಶೂಲಂ ಹೃದ್ರೋಗಸದನಭ್ರಮಾಃ ।
ಭುಕ್ತಿದ್ವೇಷೋತಿಸಾರಶ್ಚ ಸಂಜಾತಃ ಕೃಮಿಲಕ್ಷಣಮ್ ॥

ಖದಿರಃ ಕುಟಜಃ ಸೀಮಾ ಚ ವಚಾ
ತ್ರಿಕಟುತ್ರಿಫಲತ್ರಿವೃತಾ ಸಹಿತವುï ।
ಪಶುಮೂತ್ರಯುತಂ ಮಜನುಷ್ಯ ಪಿಬೇತ್
ಕೃಮಿಕೋಟಿಶತಾಂಶ್ಚ ವಿನಾಶಯತೀದವುï ॥

ಕೃಮಿಗೆ ವಿಳಂಗಚೂರ್ಣ ಜೇನುತುಪ್ಪದಲ್ಲಿ ಕೊಳ್ಳುವುದು. ಮುಟ್ಟುಕಟ್ಟಿಗೆ ಎಕ್ಕೆ ಹಾಲು ಬೂದಿ ಕಲಸಿ ಬಾಳೇಹಣ್ಣಿನಲ್ಲಿ, ವಾಂತಿಗೆ ಎಕ್ಕೆ ಹಾಲು ಕಲ್ಲುಪ್ಪು ಹಾಕಿ ಒಣಗಿಸಿ ನೀರಲ್ಲಿ ಕೊಳ್ಳುವುದು.

## D 1372 & 1373

ಗೌರೀಹರರಸ :—ರಸ, ಗಂಧಕ, ಇವಂ ಕಜ್ಜಳಿಯಂ ಮಾಡಿ ನಿಂಬೆಯ ರಸದಿಂ ಮೂರು ದಿನಂಗಳು ಮರ್ದಿಸಿ ನಾರುಬೇಳೆಗಳ ರಸದಿಂ ಪ್ರತ್ಯೇಕ ೨೧ ಸಲ ಮರ್ದಿಸಿ ಗ ೧ ತೂಕವನ್ನು ಗರುಗದ ರಸದಲ್ಲಿ ಕೊಡಲು, ಅತಿಸಾರ, ಗ್ರಹಣಿಗಳು ಮಾಣುವುವು.

## D 1370

ಗ್ರಂಥಿಶೂಲೆಚೂರ್ಣ :—ಮಾಂಸಭೇದಿ ಅಜಮೂತ್ರದಲ್ಲಿ ಶುದ್ಧಿ ಮಾಡಿ, ಗಂಧಕ,ಮೇಕೆಹಾಲು ಶುದ್ಧ ಮಾಡಿಟ್ಟು ಈ ಎರಡಂ ಅಜಮೂತ್ರದಲ್ಲಿ ಮರ್ದಿಸಿ ಗುಳಿಗೆ ಮಾಡಿ ತ್ರಿಫಲೆಪುಡಿ ಅನುಪಾನದಲ್ಲಿ ಕೊಡುವುದು.

## D 1359

ಗ್ರಹಣೀಗಜಕೇಸರೀರಸ :—ರಸ, ಲೋಹ, ಇಂಗಲೀಕ, ಉಮ್ಮತ್ತದ ಬೀಜ, ಬಿಳುಗಾರ, ಅಪಿನಿ, ಕೊಡಸಿಗನ ಬೀಜ, ಗಂಧಕ, ಓಮ, ಭಂಗಿ, ಲವಂಗ, ಅತಿಬಜೆ, ಅಭ್ರಕ, ಇವೆಲ್ಲವು ಪ್ರತ್ಯೇಕ ಸಮಾನ ತೂಕ ಉಮ್ಮತ್ತದ ಸೊಪ್ಪಿನ ರಸದಲ್ಲಿ ಒಂದು ಮರ್ದನೆ, ಭಂಗಿಸೊಪ್ಪಿನ ರಸದಲ್ಲಿ ಒಂದು ಭಾವನೆ.

## D 1370

ಗ್ರಹಣಿಗೆ ಭೂತಾಸ್ತಿವಟಕ :—ಮಾವಿನ ಬೀಜ, ಬೂರುಗದ ಬಂಕೆ, ಬೆಲ್ಲವತ್ತದ ಓಟೆ, ಬೇಲದ ಹಣ್ಣಿನ ಓಟೆ, ದಾಳಿಂಬದ ಓಟೆ, ಶುಂಠಿ, ಹಿಪ್ಪಲಿ, ಕೊಡಸಿಗೆಬೀಜ, ಧಾತಕೀಕುಸುಮ, ಅತಿಬಜೆ, ಜೀರಿಗೆ, ಸೈಂಧವಲವಣ, ಸಮಭಾಗ ಚೂರ್ಣವ ಮಾಡಿ, ಕಷಾಯಕ್ಕೆ ಅವರೇ ಚೆಕ್ಕೆ, ಎಲಚೆಚಿಕ್ಕೆ, ಅತ್ತಿಚಕ್ಕೆ, ಮಾವಿನ ಚೆಕ್ಕೆ, ಕೋಲುಮುಕ್ಕನ ಚಿಕ್ಕೆ, ದಾಳಿಂಬದ ಓಟೆ, ತಾರೇಬೇರು, ಹುಲಿಬೇರು, ಹುಣಸೇಬೀಜ ಇಷ್ಟನ್ನೂ ಸಮಭಾಗ ಹುಡಿಮಾಡಿ ಹಾಕಿ, ಕಷಾಯವಿಟ್ಟು ಚೂರ್ಣವ ಹಾಕಿ ಬೇಯಿಸಿ ಎಲಚೆಹಣ್ಣಿನ ಪ್ರಮಾಣ ವಟಕ, ಜೇನು ಮೊಸರು ಅನುಪಾನ. ಅಶೀತಿವಾಯು, ಅರುಚಿ, ಆಮಶೂಲೆ, ಸಂಗ್ರಹಣಿ, ಆಮಗ್ರಹಣಿ, ರಕ್ತಅರ್ಶಸ್ಸು ಸಹ ಗುಣ,

## D 1372 & 1373

ಗ್ರಹಣೀಕವಾಟರಸ :—ಇಂಗಲೀಕವನ್ನೂ, ಪಾತ್ರದ ಯಂತ್ರದಲ್ಲಿ ತೆಗದ ಪಾದ ರಸ ೧, ಲೋಹ ಭಸ್ಮ ೧, ಗಂಧಕ ೧, ಟಂಕಣ ೧, ಅಭ್ರಕ ೧, ಕೊಳವಳಿಕೆಯ ಬೀಜ ೧, ಇವಂ ಕಲ್ಲಲ್ಲಿ ಇಕ್ಕಿ ಕಜ್ಜಳಿಯಾಗಿ ಮರ್ದಿಸಿ ಲೋಹಪಾತ್ರೆಯೊಳಗಿಕ್ಕಿ ಆ ಪಾತ್ರೆಯನ್ನು ಕೆಂಡದ ಮೇಲೆ ಇರಿಸಿ ಲೇಸಾಗಿ ಸಮರಸವಾಗುವ ತನಕ ಬೇಯಿಸಿ ತೆಗೆದು ಗ ೧ ವರಾಹ ತೂಕವನ್ನು ಜೀರಿಗೆಯಲ್ಲಿ ಕೊಡಲು ಸಂಗ್ರಹಣಿ, ಸಂಗ್ರಹಿಣಿಯ ಜ್ವರ ಹರ, ಗುಲ್ಮವ್ಯಾಧಿ ಹರ, ಮೂಲವ್ಯಾಧಿ ಹರ.

## D 1373 & 1374

ಘೋಡಾಚೋಳಿರಸ :—ಕೆಂಪುಹಂಗಲ, ಘೋಡಾಚೋಳಿಯ ರಸ, ಪಾದರಸ ೧, ನಾಭಿ ೧, ತ್ರಿಕಟುಕ ೩, ಮಣಿಶಿಲೆ ೧, ತಾಳಕ ೧, ಜಾಪಾಳ ೧, ಇಷ್ಟನ್ನೂ ಸಮಗೊಂಡು ಗರುಗದ ರಸದಲ್ಲಿ ಮೂರು ಸಲ ಭಾವಿಸಿ ಗುಳಿಗೆ ಮಾಡಿ ಜ್ವರಕ್ಕೆ ಮೆಣಸಿನ ಪುಡಿಯಲ್ಲಿ ಕೊಡುವುದು. ಪೈತ್ಯಜ್ವರಕ್ಕೆ ಜೀರಿಗೆಯಲ್ಲಿ ಕೊಡುವುದು. ತಾಪಜ್ವರಕ್ಕೆ ದ್ರಾಕ್ಷೆ, ಸಕ್ಕರೆ, ಹಿಪ್ಪಲಿಯಲ್ಲಿ ಕೊಡುವುದು. ಇದರಿಂದ ತಾಪಜ್ವರ ಶೀತ ಜ್ವರ ಪೈತ್ಯಜ್ವರಗಳು ವಾಣುವುವು. ಇದು ಸರ್ವವ್ಯಾಧಿಹರ.

## D 1359

ಚಂಡಭಾನು :—ರಸ ೧ ತೂಕ, ಗಂಧಕ ೩ ತೂಕ, ನಾಭಿ ೪ ತೂಕ, ಓಮ ೩ ತೂಕ, ತಾಮ್ರ ೨ ತೂಕ, ಅಭ್ರಕ ೪ ತೂಕ, ಮೆಣಸು ೧೭ ತೂಕ, ಇಷ್ಟನ್ನೂ ಚಿತ್ರ ಮೂಲದ ಬೇರಿನ ಕಷಾಯದಲ್ಲಿ ಮರ್ದಿಸಿ ಮರಿಚಪ್ರಮಾಣ ಗುಳಿಗೆ.

## D 1399

ಚಂದನಾದಿಚೂರ್ಣ :—ತೃಷೆಗೆ—ಶ್ರೀಗಂಧ, ಚಂಗಲಕೊಷ್ಠ, ಕೊತ್ತಂಬರಿ ಬೀಜ, ಜೀರಿಗೆ, ಹಿಪ್ಪಲಿ, ಲವಂಗ, ಮುಡಿವಾಳ, ಲಾಮಂಚ, ಭದ್ರಮುಸ್ತೆ, ಖರ್ಜೂರ, ಯಷ್ಟಿಮಧುಕ, ಏಲಕ್ಕಿ, ದ್ರಾಕ್ಷೆಹಣ್ಣು ಇವನ್ನು ಸಮಾನತೂಕದಿಂದ ಚೂರ್ಣವ ಮಾಡಿ ಸಕ್ಕರೆಸಹ ಮೆಲ್ಲಲು ತೃಷೆ, ಛರ್ದಿ, ಬಿಕ್ಕಳು, ಪಿತ್ತ, ಭ್ರಮೆ, ಅರೋಚಕ, ಇವು ಗುಣ. ಮತ್ತು ಬಿಸಿನೀರಿಂದ ತೆಗೆದುಕೊಳ್ಳಬಹುದು.

## D 1372 & R 1373

ಚತುರನಾನಾರಸ :—ರಸ, ಗಂಧಕಂ, ಇವಂ ಮರ್ದಿಸಿ ಕಜ್ಜಲಿಯ ಮಾಡಿ, ಲೋಹ ಪಾತ್ರೆಯೊಳಗಿಕ್ಕಿ ತಾರೆಯ ಕಟ್ಟಿಗೆಯೊಳಗಿಟ್ಟು ಸಮರಸವಾಗಲಾಗಿ ಆ ರಸವಂ ತೆಗೆದು ಬಾಳೆಎಲೆಗೆ ತುಪ್ಪವಂ ತೊಡೆದು ಆ ಎಲೆಯೊಳಗಿಕ್ಕಿ ಅದಕ್ಕೆ ಸರಿ ವಂಗಭಸ್ಮ, ಲೋಹ ಭಸ್ಮಂಗಳನ್ನಿಕ್ಕಿ, ಅವೆಲ್ಲವುಗಳ ಸರಿ ಕೊಳವಳಿಕೆಯ ಬೀಜವನಿಕ್ಕಿ ಬನ್ನಿಯ ರಸದಿಂ ೨೧

ಭಾವನೆಯಂ ಕೊಟ್ಟು ಮರ್ದಿಸಿ ೨ ವರಾಹ ತೂಕವನ್ನು ಅಳಲೇಕಾಯಿ, ಜೇನುತುಪ್ಪದಲ್ಲಿ ಕೊಡಲು, ಜ್ವರ ಅತಿಸಾರ ಮಾಣುವುವು. ತ್ರಿಕಟುಕ, ಅಲ್ಲದ ರಸ, ತುಪ್ಪ, ಸೈಂಧವದಲ್ಲಿ ಕೊಡಲು ಗ್ರಹಣೀ, ಮೂಲವ್ಯಾಧಿ ಮಾಣುವುವು. ಇದು ಚತುರಸಾನಾರಸ.

## D 1359

ಚಂದ್ರಕಲೆ :—ರಸ ೩॥, ತಾಮ್ರಭಸ್ಮ ೩, ಗಂಧಕ ೬, ಇವಂ ಕೂಡಿ ಶುಷ್ಕಮರ್ದನೆಯ ಮಾಡಿ ಭದ್ರಮುಸ್ತೆ ಕಷಾಯ, ದಾಳಿಂಬದ ಹಣ್ಣಿನ ರಸ, ಕೇದಗೆವೊಲೆರಸ, ಸಹಾದೇವಿರಸ, ಬಿಳಿಗರುಕೆಯ ರಸ, ಲೋಳಿಸರದ ರಸ, ಪರ್ಪಾಟಕದ ರಸ, ನೆಲಬೇವಿನ ರಸ, ಆಷಾಢೀರಸ, ಇವುಗಳಿಂದ ಪ್ರತ್ಯೇಕ ಒಂದೊಂದು ಭಾವನೆಯಂ ಕೊಟ್ಟು, ಕಟುಕರೋಹಿಣಿ, ಅಮರದವಳ್ಳಿ, ಸಕ್ಕಗೆ, ನೆಲಗುಳ್ಳದ ಬೇರು, ಪರ್ಪಾಟಕ, ರಾಮಚದ ಚೂರ್ಣ, ಅಮೃಗಂಟೆಯ ಹಾಲು, ಶ್ರೀಗಂಧ, ಸುಗಂಧಿಯ ಬೇರು, ಇವಂ ಪ್ರತ್ಯೇಕ ಒಂದು ತೂಕ, ಇವಂ ಮಾದಲಔಷಧವಂ ಮಾಡಿ, ದ್ರಾಕ್ಷೆಹಣ್ಣಿನ ಕಷಾಯದಲ್ಲಿ ಏಳು ದಿನ ಮರ್ದನೆ ಭಾವನೆಯಂ ಮಾಡಿ, ಚಣಕಪ್ರಮಾಣ ಗುಳಿಗೆಯಂ ಮಾಡಿ, ಛಾಯಾಶುಷ್ಕಂಗೈದು, ಕಾದಾರಿದ ನೀರು ಸಕ್ಕರೆ ಸಹ ಕೊಡಲು, ಸಕಲಕ್ಷಯವ್ಯಾಧಿ, ಮಹೇಶ್ವರವ್ಯಾಧಿ, ಮಹೇಶ್ವರಜ್ವರ ಹರ.

## D 1395

ಚಂದ್ರಕಲೆ :—

ನಾಗಂ ಪಾರದಮಭ್ರಕಾಂತರಜತಂ ಮಾರ್ತಂಡವಂಗಾಯಸಂ
ವೈಕ್ರಾಂತಂ ಚ ಶಿಲಾಜಪಿಪ್ಪಲಿಲತಾಭಾಸ್ವಾಂಸ್ತಥಾಕ್ಷಂ ಸಮಮ್ ।
ಖಲ್ವೇತಚ್ಚ ಶತಾವರೀಕ್ಷುಕನಕಂ ಮೇಣಾದಿಬೀಜಂ ವರಂ
ದ್ರಾಕ್ಷಾದಾಡಿಮದೂರ್ವಗೋಕ್ಷುರಶಿಲಾಭೇಧಂ ಚ ವಾಲದ್ವಯಮ್ ॥
ಕ್ವಾಥೈರ್ಭಾವಿತಮಿಂದುಚೂರಶತಪತ್ರಾಂಭಃ ಪ್ರದದ್ಯಾದದೋ
ದೃಕ್ಷುದ್ರಾರ್ತಿಶಿರೋರ್ತಿವಲ್ಕಕುಳಿತಂ ಮೇಹಂ ಚ ಕೃಛ್ರಾಮಯಮ್ ।
ತೃಷ್ಣಾದಾಹಮಸೃಗ್ಧರಾನ್ನಹಿಮಜಂ ಸ್ತ್ರೀಣಾಂ ಚ ವಹ್ನ್ಯಾಮಯಂ
ರಕ್ತಂ ಪಿತ್ತಶಿರೋರುಜಾಕ್ಷಯಹರಂ ಪಾಂಡ್ವಾಮಯಧ್ವಂಸಕೃತ್ ॥
ನಸ್ಯಂ ಸರ್ವ ವಿಷಾಪಹಂ ಜ್ವರಹರಂ ದೃಷ್ಟಂ ಚ ಹಿಕ್ಕಾಪಹಂ
ಶ್ರೀಮಾನ್ ಚಂದ್ರಕಲಾಧರೋ ರಸವರೋ ನಿಃಶೇಷರೋಗಾಪಹಃ ।
ಅಶ್ವತ್ಥಚತುರಂ ತುಲ್ಯನ್ಯಗ್ರೋದಾದಿಪಲತ್ರಯಮ್
ಏಷಃ ಕಷಾಯಃ ಸತ್ವಾದ್ರ್ಯಂ ಪಿಬೇದನುಸುಖಾವಹಮ್ ॥

(ಹಸ್ತಿಗತಕ್ಕೆ) ಚೂರ್ಣ :— ಲವಂಗ ೨ ತೂಕ, ನಾಗಕೇಸರಿ ೨ ತೂಕ, ಏಲಕ್ಕಿ ಅರೆತೂಕ, ಮೆಣಸು ೮ ವರಹ ತೂಕ, ಹೀಕ.........ಅಮೂಡಿಗ ೧೬ ವರಹ ತೂಕ,

ಸೊಂಟಿಗ ೩೨ ವರಹ ತೂಕ, ಪನ್ನೇರುಗಡಗ ೬೪ ವರಹ ತೂಕ, ಇಷ್ಟು ಚೂರ್ಣ ಮಾಡಿ ಇದಕ್ಕೆ ಸಮಭಾಗ ರಾಯಪುರಿಸಕ್ಕರೆ, ಇದು ಸಮ ಭಾಗಮಾಡಿ ಉಷ್ಣಕಾಲದಲ್ಲಿ ಸೇವಿಸಲು ರೋಗ ಮಾಣ್ಗುಂ.

## D 1400

ಚೂರ್ಣರಾಜ :—ಶುಂಠಿ, ಹಿಪ್ಪಲಿ, ಮೆಣಸು, ಓಮ, ಚಿತ್ರಮೂಲ, ಇಂಗು, ಗಂಟು ಭಾರಂಗಿ, ಬಿಡುಲವಣ, ಚವ್ಯ, ಸೈಂಧವ, ಯವಕ್ಷಾರ, ಇವಂ ಚೂರ್ಣವ ಮಾಡಿ ಬಿಸಿನೀರಲ್ಲಿ ತೆಗೆದುಕೊಳ್ಳುವುದು. ಶೂಲೆ ಮಾಣ್ಗುಂ.

## D 1359

ಚೋಡಸಿದ್ಧಿರಸ :—ನಾಭಿ, ಶುಂಠಿ, ಮೆಣಸು, ಹಿಪ್ಪಲಿ, ಜಾಯಿಕಾಯಿ, ಇಲಿಪಾಷಾಣ ಗೌರೀಪಾಷಾಣಂ, ದೊಡ್ಡಪಾಷಾಣಂ, ಹರಿದಳ, ಮೈಲುತುತ್ತೆ, ಸುಣ್ಣ, ಜಾಪಾಳ, ಇಷ್ಟರ ಸಮಾನ ಹಾಲು, ಸಕ್ಕರೆಪಾನಕ ಹಾಕಿ, ಅರೆದು ಗುಂಜಾಪ್ರಮಾಣ ಕೊಡಲು ಶೀತಜ್ವರಗಳು ಮಾಣುವುವು.

## D 13/2 & R 1373

ಜಂಬ್ವಾದಿಗುಳಿಗೆ:—ಇದನ್ನು ಮಾಡುವ ಕ್ರಮ — ನೇರಳೆತಿಗಡು, ಅತ್ತಿ, ಮತ್ತಿ ಕಡವ, ಅವರೆ, ಬೊಬ್ಬುಳಿ, ಶುಂಠಿ, ಆರಳಿ, ಇವುಗಳ ತಿಗಡುಗಳು ಪ್ರತ್ಯೇಕ ೧೭ ಪಲವನ್ನು ಸಣ್ಣನಾಗಿ ಕಡಿದು, ಒಣಗಿಸಿ, ಇಡಿದು, ಚೂರ್ಣಂ ಮಾಡಿ ೨೦ ಪಲ ಉದಕದಲ್ಲಿ ಹಾಕಿ ಆ ಮೇಲೆ ನಿತ್ಯದಲ್ಲೂ ಎಳು ದಿನಗಳು ಅಹೋರಾತ್ರಿಯಲ್ಲಿ ಇಟ್ಟು ಎಂಟರಲ್ಲಿ ಒಂದು ಭಾಗ ಉಳಿವ ಹಾಗೆ ಕಾಸಿ, ಇರಿಸಿ ಅದಕ್ಕೆ ಪ್ರತಿಪಾಕವಾಗಿ ಹಾಕುವ ಔಷಧಿ— ಬೊಬ್ಬುಳಿಯ ಅಗಿಲು, ತೊಂಡೆಯ ಬೇರು, ಚಲ್ಲದಬೇರಿನ ತಿಗಡು ಇವು ಪ್ರತ್ಯೇಕ ಪಲ ಐದು; ಅವರೇ ಅಗಿಲು, ವಿಳಂಗ, ಅಷ್ಟಮಧುಕ, ಸೂಜಿಕಲ್ಲು, ನೆಲದಾಳ ಇವು ಪ್ರತ್ಯೇಕ ೧೦ ಪಲ; ಅವರೆಯ ಬೀಜ ೧೬ ಪಲ; ಶುದ್ಧವಾದ ಹಿಪ್ಪಲಿಗಟ್ಟಿಯ ಚೂರ್ಣ ೮ ಫಲ; ಮುಟ್ಟಿದರೆ ಮುರುಟನ ಹೂವು, ಅವರೆಯ ಹೂವು, ಅವರೇಎಲೆ, ಇವುಗಳ ಚೂರ್ಣ ಪ್ರತ್ಯೇಕ ೧ ಪಲ; ಸಾಸಿವೆಯಗಿಡದ ಅಗಿಲು, ಬಿಳಿಯ ಗುರುಗಂಜಿ, ವಾಗುಂಜಿಯ ಬೀಜ, ಪ್ರತ್ಯೇಕ ೪ ತೂಕ; ಅವರೆಯ ಬೇರಿನ ತಿಗಡು, ನಾಯಿಹೂ, ಆಲದ ಕೊನರು ಇವು ಪ್ರತ್ಯೇಕ ೭ ಪಲ; ಬಿದಿರೆಲೆ, ಗಂಧಕ ಚೂರ್ಣ ಗ ೨೭ ತೂಕ, ಶುದ್ಧವಾದ ಲೋಹಚೂರ್ಣ ೨೫ ಪಲ; ತಿಗುಡೆ, ಶೋಧಿಸಿದ ಅಂಜನ, ಮಣಿಶಿಲೆ ಇವು ಪ್ರತ್ಯೇಕ ೧ ಪಲ ; ಹಿಮಕ, ಕೋಷ್ಠ, ಅರೆಪಲ ; ಇವೆಲ್ಲವಂ ಚೂರ್ಣವಂ ಮಾಡಿ ಇವೆಲ್ಲವನ್ನು ಬೆಲ್ಲದ ಪಾಕದಲ್ಲಿ ಹಾಕಿ ಕಲಸಿ ೩ ತೂಕ ಪ್ರಮಾಣದ ವಟಕವಂ ಮಾಡಿ ಒಣಗಿಸಿ ಹೊಸಮಡಕೆಯಲ್ಲಿ ಗಾಳಿ ಹೋಗದ ಹಾಗೆ ಇರಿಸಿ ಒಂದು ಗುಳಿಗೆಯಂ ಚೂರ್ಣವಂ ಮಾಡಿ ಜೇನುತುಪ್ಪದಲ್ಲಿ ಕಲಸಿ ಲೇಹ್ಯವಾಗಿ ಕೊಡುವುದು.

## D 1400

ಜನಾರ್ದನರಸಯೋಗ :—ರಸ ೧ ತೂಕ, ಇಂಗಲೀಕ ೨ ತೂಕ, ಜೇಪಾಳ ಗ ೩ ತೂಕ, ಇವನ್ನು ದಂತಿಬೇರಿನ ಕಷಾಯದಲ್ಲಿ ಮರ್ದನೆಯ ಮಾಡಿ ಗುಂಜಿಪ್ರಮಾಣ ಗುಳಿಗೆಯಂ ಮಾಡಿ ಸಕ್ಕರೆಯಲ್ಲಿ ಕೊಡಲು ೨ ಜಾವಕ್ಕೆ ಜ್ವರ ಬಿಡುವುದು.

ಜನಾರ್ದನರಸಯೋಗ :—ರಸ, ಗಂಧಕ, ಜಾಪಾಳದ ಬೀಜ, ಈ ನಾಲ್ಕರ ಕ್ರಮದಲ್ಲಿ ಹೆಚ್ಚಿಸಿ, ಇವನ್ನು ಬಂದದ ಸೊಪ್ಪಿನ ರಸದಲ್ಲಿ ಮರ್ದಿಸಿ ಉದ್ದಿನ ಪ್ರಮಾಣ ಗುಳಿಗೆಯಂ ಮಾಡಿ ಕೊಡುವುದು. ಅನುಪಾನ ಸಕ್ಕರೆ. ಪಥ್ಯ ಹಾಲೋಗರ.

## D 1359

ಜಾತ್ಯಾದಿಚೂರ್ಣ .—ಜಾಯಿಕಾಯಿ ಗ ೨ ತೂ, ಭಂಗಿ ಗ ೧ ತೂ, ಇಷ್ಟನ್ನು ಹಸಿಬಿಸಿಯ ಮಾಡಿ ಸಣ್ಣನಾಗಿ ಚೂರ್ಣಂಗೈದು ದಾಳಿಂಬದ ಕಾಯೊಳಗೆ ತುಂಬಿ ಕಾಯಿ ಕಪ್ಪಾಗದ ಹಾಗೆ ಪುಟವ ಹಾಕಿ ಸಣ್ಣನಾಗಿ ಇಡಿದು ಚೂರ್ಣಂ ಮಾಡುವುದು. ಇದು ಜಾತ್ಯಾದಿ ಚೂರ್ಣ.

## D 1370

ಜಾತ್ಯಾದಿಚೂರ್ಣ :—ಜಾಯಿಕಾಯಿ, ಜಾಯಿಪತ್ರೆ, ಶುಂಠಿ, ಹಿಪ್ಪಲಿ, ಮೆಣಸು, ಅಳಲೇಕಾಯಿ, ತಾರೇಕಾಯಿ, ನೆಲ್ಲಿಚಟ್ಟು, ಲವಂಗ, ಲವಂಗಚೆಕ್ಕೆ, ಲವಂಗಪತ್ರೆ, ಏಲಕ್ಕಿ, ನಾಗಕೇಸರಿ, ಖರ್ಜೂರಹಣ್ಣು, ದ್ರಾಕ್ಷೆಹಣ್ಣು, ಚೆಂಗಲಕೋಷ್ಠ, ಯಷ್ಟಿಮಧುಕ, ಮುಡಿವಾಳ, ಲಾಮಂಚ, ಶ್ರೀಗಂಧ, ತಕ್ಕೋಲ ಎಂದರೆ ಕೋಲುಮುಕ್ಕನ ಚೆಕ್ಕೆ, ಕೊತ್ತಂಬರಿ, ಇಪ್ಪೆಹೂವು, ಜೀರಿಗೆ, ಹಿರಿಮದ್ದಿನ ಬೇರು, ತವಕ್ಷೀರ, ತಾಳೀಸಪತ್ರೆ, ರಾಸ್ಮೆ, ಕೊಡನಾರಿಗೆಡ್ಡೆ, ಬಿತ್ತ್ರದ ಹರಳು, ಹತ್ತಿಹರಳ ಬಿಸಿ ಮಾಡಿ ಕುಟ್ಟಿದ ಚೂರ್ಣ, ಇಷ್ಟು ಸಮಾನಂಗೊಂಡು ಚೂರ್ಣವಂ ಮಾಡಿ ತೆಗೆದುಕೊಂಬುದು.

## D 1359

ಜ್ವರಮುರಾರಿ :—ಎಲೆಗಪ್ಪಲಿ ೩ ತೂಕವನ್ನು ಸುಚ್ಚಲಕ್ಕಿ ಹಾಗೆ ಮಾಡಿ ದಿನ ಒಂದಕ್ಕೆ ೫ ವೇಳೆ ನಿಂಬೇಹುಳಿಯಲ್ಲಿ ತೊಳೆದು, ಆರಿಸಿ, ದಿನ ೫ ಕ್ಕೆ ೨೫ ಭಾವನೆಯಂ ಕೊಟ್ಟು, ಬೆಣ್ಣೆಯಲ್ಲಿ ಮೂರು ಜಾವ ಮರ್ದಿಸಿ, ಜೀರಿಗೆಪ್ರಮಾಣದಲ್ಲಿ ಗುಳಿಗೆಯಂ ಮಾಡಿ ನೆಳಲಲ್ಲಿರಿಸಿ, ವಾತಜ್ವರಕ್ಕೆ ತ್ರಿಕಟುಕದಲ್ಲಿ, ಪಿತ್ತಜ್ವರಕ್ಕೆ ಜೀರಿಗೆ, ದ್ರಾಕ್ಷೆಹಣ್ಣು, ಕೊತ್ತಂಬರಿ ಇವುಗಳಲ್ಲಿ, ಶ್ಲೇಷ್ಮಜ್ವರಕ್ಕೆ ಹಿಪ್ಪಲಿ, ರಾಸ್ಮೆ, ಬಿಳುಗಾರ, ದಲವರೆನಲ್ಲಿ, ಹಸುಮಕ್ಕಳಿಗೆ ಬಾಣಂತಿಯರಿಗೆ, ಗರ್ಭಿಣಿಗೂ, ಮುಪ್ಪಿನವರಿಗೆ ಎಲ್ಲರಿಗೆ ಕೊಡಬಹುದು. ಇದು ತರುಣಜ್ವರಮುರಾರಿ ಎಂಬ ಗುಳಿಗೆ.

ಎಲೆಗಪ್ಪಲಿಯನ್ನು ನಿಂಬೇಹಣ್ಣಿನ ರಸದಲ್ಲಿ, ಒಂದು ಜಾವ ಮರ್ದಿಸಿ ಬಿಸಿನೀರಿನಲ್ಲಿ ಒಣಗಿಸಿ ಮತ್ತು ಈ ಪ್ರಕಾರದಲ್ಲಿ ೩೧ ಬಾರಿ ಅರೆದು ಒಣಗಿಸಿ ಇದಂ ಚೂರ್ಣಮಾಡಿ ಹಸು

ವಿನ ಬೆಣ್ಣೆಯಲ್ಲಿ ನಾಲ್ಕು ಜಾವ ಮರ್ದಿಸಿ, ಮೂರು ಗುಂಜಿಯ ಪ್ರಮಾಣ ಗುಳಿಗೆಯಂ ಮಾಡಿ ನೆರಳಲ್ಲಿ ಆರಿಸಿ ಸಕ್ಕರೆ ಬೆಣ್ಣೆಯಿಂ ಕೊಟ್ಟು, ಸೊಲ್ಲಗೆ ಬಿಸಿನೀರಂ ಕುಡಿಯ ಕೊಡಲು ತಾಪ ಜ್ವರಹರ. ಸದ್ಯಃ ಸರ್ವರಿಗೂ ಗುಣ ಕೊಡಬಹುದು.

ಜ್ವರಶೂಲೆಹರರಸ :—ರಸ, ಗಂಧಕ, ತಾಳಕ, ತ್ರಿಫಲೆ, ತ್ರಿಕಟುಕ, ಚಿತ್ರಮೂಲ, ವತ್ಸನಾಭಿ, ತಾಮ್ರಭಸ್ಮ, ಶುದ್ಧಜಾಪಾಳ ಇವಂ ಸಮಾನಂಗೊಂಡು, ಕರಿಗರುಗದ ರಸದಲ್ಲಿ ಮೂರುದಿನ ಮರ್ದಿಸಿ ಗುಂಜಾಪ್ರಮಾಣ ಗುಳಿಗೆಯಂ ಮಾಡಿ ಛಾಯಾಶುಷ್ಕಂ ಗೈದು ಮೆಣಸಿನ ಕಷಾಯದಲ್ಲಿ ಕೊಡಲು ಜ್ವರಶೂಲೆಹರ. ಕ್ಷೀರಾನ್ನ ಪಥ್ಯ.

ಜ್ವರಾಂಕುಶ :—ಗಂಧಕ ೧ ತೂಕ, ನಾಭಿ ೧ ತೂಕ, ಉಮ್ಮತ್ತ್ರದ ಬೀಜ ೩ ತೂಕ, ಶುಂಠಿ ೮ ತೂಕ, ಮೆಣಸು ೮ ತೂಕ, ಹಿಪ್ಪಲಿ ೮ ತೂಕ, ಗರುಗದ ರಸದಲ್ಲಿ ಮರ್ದನೆ.

ಜ್ವರಾಂಕುಶಕಲ್ಕ :—೨ ಜೀರಿಗೆ, ಶುಂಠಿ, ಹಿಪ್ಪಲಿ, ಕೊತ್ತಂಬರಿ, ಯಷ್ಟಿಮಧುಕ, ಪುತ್ರಜೀವಿಮಣಿ, ಇವು ಪ್ರತ್ಯೇಕ ಹಣತೂಕವನ್ನು ತೂಗಿಕೊಂಡು ಬಿಸಿನೀರಿಂದ ಕೊಳ್ಳೆ ಸರ್ವಜ್ವರ ಪ್ರಾಣ್ಣಂ. ಸ್ತಂಭನಕ್ಕೆ ಜಾಯಿಕಾಯಿ, ಹಿಪ್ಪಲಿ, ಅಪಿನಿ, ಭಂಗಿ, ಲವಂಗ, ಉಮ್ಮತ್ತ್ರದ ಬೀಜ, ಏಲಕ್ಕಿ, ಸಮುದ್ರಶೋಭೆಬೀಜ, ಇವಂ ಸಮಾನಂಗೊಂಡು ಚೂರ್ಣಿಸಿ, ಭಂಗಿಸೊಪ್ಪಿನ ರಸದಲ್ಲಿ ಅರೆದು, ಗುಂಜಾಪ್ರಮಾಣ ಗುಳಿಗೆಯಂ ಮಾಡಿ ಸಕ್ಕರೆ ಜೇನುತುಪ್ಪದಲ್ಲಿ ತೆಗೆದುಕೊಳ್ಳಲು ಸ್ತಂಭನ.

## D 1372 & R 1373

ತವರಸಿಂದೂರವಂ ಮಾಡುವ ಕ್ರಮ :—ತವರವನ್ನು……ಯಲ್ಲು ಮೂರು ದಿನ ನೆನಯಲಿಕ್ಕಿ ತೆಗೆದು ಆ ತವರಕ್ಕೆ ನಾಲ್ಕರಲ್ಲಿ ಒಂದು ಭಾಗ ಪಾದರಸವನ್ನು ಕೂಡಿಸಿ, ಕಬ್ಬಿಣದ ಬಟ್ಟಲೊಳಗೆ ಹಾಕಿ, ಆ ತವರದ ಸರಿಯಾಗಿ ಕವಡೆಯನ್ನು ಹಾಕಿ ಚೂರ್ಣಂ ಮೊಳಕೈಯುದ್ದದ ಪಾರಿವಾಣಕಡ್ಡಿ ಬೆಂದು ಹೋಗುವ ಪರ್ಯಂತರ ಒಲೆಯ ಮೇಲಿಟ್ಟು ಅಹೋರಾತ್ರಿ ತೊಳಸುತ್ತಾ ಬರುವುದು. ಅದನ್ನು ತೆಗೆದುಕೊಂಡು ಸಾಲೆಯ ಸೊಪ್ಪಿನರಸದಲ್ಲಿ ಕಲಸಿ, ಓಡಿನೊಳಗಿರಿಸಿ ತಂಪುಪುಟ್ಟಿಸಿ ಬೆರಣಿಯಲ್ಲಿ ಮೂರು ಪುಟವನಿಕ್ಕಿ ಆ ಮೇಲೆ ತೆಗೆದು ಚೂರ್ಣವಂ ಮಾಡಿ ವಸ್ತ್ರಗಾಳಿತವಂ ಮಾಡಿ ಭರಣಿಯಲ್ಲಿ ತುಂಬಿ ಐದುಹಣತೂಕ ಮೊದಲಾಗಿ ಮೂರುಹಣತೂಕ ಪರ್ಯಂತರ ಮಜ್ಜಿಗೆಯಲ್ಲಿ ಅರೆದು ಕೊಡುವುದು. ಇಲ್ಲವೇ ಜೇನುತುಪ್ಪದಲ್ಲಾಗಲೀ, ಬೆಣ್ಣೆಯಲ್ಲಾಗಲೀ ಕಲಸಿ ಗುಳಿಗೆಯಾಗಿ ನುಂಗಿಸುವುದು.

ತಾರೆಯ ಗುಳಿಗೆಯ ಮಾಡುವ ಪ್ರಕಾರ :—ಬೇಲದ ಅಗಿಲು, ತಾರೆಯ ಅಗಿಲು, ಬೊಬ್ಬುಳಿಯ ಅಗಿಲು, ಬೇಲದ ಅಗಿಲು, ಗೊಟ್ಟಿ, ಬಿಳಿಯ ಗುರುಗಂಜಿ, ಅರಸಿನ, ಶೋಧಿಸಿದ ಸೂಜಿಕಲ್ಲು ಇವು ಪ್ರತ್ಯೇಕ ೧೦ ತೂಕ, ಎಳ್ಳುಹಿಂಡಿಯ ಚೂರ್ಣ ಇವಂ ಅಂಬಿಲದಲ್ಲಿ ಅರೆದು ಇರಿಸಿ ಗ ೩೦ ತೂಕ ಸೀಸ………ಹೊಯ್ದು………ಪತ್ರವನ್ನು ಮಾಡಿ

.........ಆ ಅಂಬಿಲದಲ್ಲಿ ಮೂರು ದಿನ ಅರೆದು ಶುದ್ಧ ಪಟಿಕವನ್ನು ಗ ೨೦ ತೂಕವನ್ನು ಅಂಬಿಲದಲ್ಲಿ ಅರೆದು ಪಾದರಸ ಗ..........ತೂಕವನ್ನು ಅಂಬಿಲದಲ್ಲರೆದು ನಂದ್ಯಾವರ್ತದ ಹೂವಿನ ರಸದಲ್ಲೂ, ಪಾದರಸಕ್ಕೆ ಸರಿಯಾಗಿ ಆ ನಂದ್ಯಾವರ್ತದ ಬೇರಿನ ರಸಮಂ ಕೂಡಿ ಆ ಹೂವಿನ ರಸದಲ್ಲೂ ಅರೆದು ಶ್ರಾವೆಯೊಳಗಿಕ್ಕಿ ಅಳಲೆಯಕಾಯನ್ನು ಓಗರವನ್ನೂ ಅರೆದು ಪೂಸಿ ಒಣಗಿಸಿ ಕುಕ್ಕುಟ ಪ್ರಮಾಣದಲ್ಲಿ ಬೆರಣಿಯಲ್ಲಿ ಪುಟವನಿಕ್ಕುವುದು. ಅದಂ ಆರ ಲಿಕ್ಕೆ ತೆಗೆದು.........ಅರೆದು ೪೦ ಗುಳಿಗೆಗಳಂ ಮಾಡಿ ಅದರೊಳಗೆ ಒಂದು ಗುಳಿಗೆಯಂ ಚೂರ್ಣವಂ ಮಾಡಿ ಆ ಸಮಾನ.........ಚೂರ್ಣವಂ ಮಾಡಿ ಕೂಡಿ ಈ ಎರಡು ಚೂರ್ಣ ಗಳನ್ನು ಜೇನುತುಪ್ಪದಲ್ಲಿ ಕಲಸಿ ಲೇಹ್ಯವಾಗಿ ಕೊಡುವುದು.

## D 1370

ತಾಳೀಸಚೂರ್ಣ :—ತಾಳೀಸಪತ್ರೆ ೩ ತೂಕ, ಮೆಣಸು ೬ ತೂಕ, ಶುಂಠಿ ೯ ತೂಕ, ಹಿಪ್ಪಲಿ ೧೨ ತೂಕ, ಏಲಕ್ಕಿ ೧೮ ತೂಕ, ಲವಂಗಪತ್ರೆ ೧೮ ತೂಕ, ಲವಂಗಚಕ್ಕೆ ೧೮ ತೂಕ, ಅಂತು ಗ ೩೪ ತೂಕವನ್ನು ಚೂರ್ಣವಂ ಮಾಡಿ ಸಕ್ಕರೆಯಂ ಬೆರಸಿ ಬಿಸಿನೀರಲ್ಲಾಗಲೀ ಜೇನುತುಪ್ಪದಲ್ಲಾಗಲೀ ತೆಗೆದುಕೊಳ್ಳುವುದು.

ತಾಳೀಸಚೂರ್ಣ :—

ತಾಳೀಸಂ ತಿಂತ್ರಿಣೀಕಂ ಚ ಚಾತುರ್ಜಾತಂ ಕಟುತ್ರಯಂ ।
ತವಕ್ಷೀರಂ ಚ ತಗರಂ ಖರ್ಜೂರಂ ಚೈವ ದಾಡಿಮಂ ॥
ಜಾತೀಫಲಂ ಕಟುಶೃಂಗೀ ಉಭಯಂ ಜೀರಕದ್ವಯಂ ।
ಹ್ರೀಬೇರಂ ದೇವಕುಸುಮಂ ಸೂಕ್ಷ್ಮಚೂರ್ಣಾನಿ ಕಾರಯೇತ್ ॥
ಏತತ್‌ಸರ್ವಾಣಿ ದ್ರವ್ಯಾಣಿ ತಾವಚ್ಚೂರ್ಣಂ ಸಿತಾಸಮಂ ।
ಆಮ್ಲಪೈತ್ಯಂ ನಿಹನ್ತ್ಯಾಶು ಮೂರ್ಛಾಛರ್ದಿಜ್ವರಭ್ರಮವ್ ॥
ರಕ್ತಪಿತ್ತಕ್ಷಯೇ ದಾಹೇ ಅಶ್ವಿನೀದೇವನಿರ್ಮಿತಮ್ ।
ಜಾತೀಫಲಂ ತ್ರಿಕಟುಕಂ ತ್ರಿಫಲಂ ತ್ರಿಜಾತಂ
ಖರ್ಜೂರದ್ರಾಕ್ಷರುಚಿಪಾತಕಚಂದನಾನಿ ।
ತಕ್ಕೋಲಧಾನ್ಯಮಧುಜೀರಕಮಶ್ವಗಂಧಂ
ಚೂರ್ಣಂ ಸಮಂ ಸಮಸಿತಂ ಗುಟಿಕಾಂ ಪ್ರದದ್ಯಾತ್ ॥
ನಿತ್ಯಂ ತು ಭಕ್ಷ್ಯನ್ ಜ್ವರಪಿತ್ತನಾಶಂ
ನಿಶ್ವಾಸಕಾಸಂ ಕ್ಷಯಪಾಂಡುಮೇಹಮ್ ।
ಜೀರ್ಣಜ್ವರಂ ಸತತಸಂತತಕಂಪನಾನಿ
ಏತಾನಿ ಹಂತಿ ಸಕಲಾನಿ ಚ ಪೂಜ್ಯಪಾದೈಃ ॥

ಲಾಮಂಚ — ಮುಡಿವಾಳ ; ತಕ್ಕೋಲವೆಂದರೆ ಕೋಲುಮುಕ್ಕು.

ಸಚಿತ್ರಚಿತ್ರಂ ಯದಿ ವಜ್ರವಲ್ಲೀ ಸಶರ್ಕರಂ ಗೋಪಯಸಾ ಯುತಂ ಚ ।
ಮಾಸೇನ ಸೇವ್ಯಂ ಬಹುರೋಗವೈದ್ಯಂ ಮಾಸತ್ರಯಂ ಯೇ ತು
ಸಮಾಶ್ರಯಂತಿ ।

## D 1400

ತಾಳೀಸಚೂರ್ಣಕ್ಕೆ ಯೋಗ :—ತಾಳೀಸಪತ್ರ ಗ ೨ ತೂಕ, ಮೆಣಸು ೪ ತೂಕ, ಶುಂಠಿ ೬ ತೂಕ, ಹಿಪ್ಪಲಿ ೮ ತೂಕ, ಯವಕ್ಷಾರ ೧೦ ತೂಕ, ಏಲಕ್ಕಿ ಗ ೧ ತೂಕ, ಲವಂಗ ಚಕ್ಕೆ ಗ ೧ ತೂಕ, ಇವೆಲ್ಲವನ್ನೂ ಕೂಡಿ ಚೂರ್ಣವಂ ಮಾಡಿ ಇದಕ್ಕೆ ಎರಡು ಮಡಿ ಸಕ್ಕರೆಯಂ ಕೂಡಿಕೊಳ್ಳುವುದು. ಪೈತ್ಯವಾಯು ಮಾಣ್ಗುಂ.

## D 1370

ತಾಳೀಸವಟಕ :—ತಾಳೀಸಪತ್ರ ದುಡ್ಡು ೩ ತೂಕ, ಮೆಣಸು ದುಡ್ಡು ೩ ತೂಕ, ಚವೆ ದು ೩ ತೂಕ, ಹಿಪ್ಪಲಿ ೬ ದುಡ್ಡು ತೂಕ, ಶುಂಠಿ ದುಡ್ಡು ೯ ತೂಕ, ಲವಂಗಚಕ್ಕೆ, ಲವಂಗಪತ್ರೆ, ನಾಗಕೇಸರ, ಲಾಮಂಚ ಈ ನಾಲ್ಕು ಬಗೆಯೂ ಪ್ರತ್ಯೇಕ ನಾಲ್ಕು ನಾಲ್ಕು ವರಾಹ ತೂಕ, ಇಷ್ಟನ್ನೂ ಇಡಿದು ಚೂರ್ಣವಂ ಮಾಡಿ ಈ ಚೂರ್ಣ ಸರಿ ಬೆಲ್ಲದಲ್ಲಿ ಪಾಕವ ಕಾಸಿ ಚೂರ್ಣವ ಹಾಕಿ ಉಂಡೆಯ ಮಾಡಿ ಮೆಲ್ಲಲು ಸಕಲವ್ಯಾಧಿಯೂ ಗುಣ.

ತಾಳೀಸವಟಕ :—

ತಾಳೀಸಪತ್ರಂ ಮರಿಚಂ ಚವ್ಯಕಾನಾಂ ಪಲಂ ಪಲವು ।
ಕೃಷ್ಣತನ್ಮೂಲಯೋರ್ದ್ವೇದ್ವೇ ಪಲೇ ಶುಂಠಿಪಲತ್ರಯಮ್ ॥
ಚಾತುರ್ಜಾತಮುಶೀರಂ ಚ ಕಲುಷಾಂ ಶಿಕ್ಷಚೂರ್ಣಿತಮ್ ।
ಗುಡೇನ ವಟಕಾನ್ ಕೃತ್ವಾ ತ್ರಿಗುಡೇನ ಸದಾ ಭವೇತ್ ॥
ಮಾಂದ್ಯ ಉಷ್ಣಸವಿಾರೆಷು ಮಸ್ತಕೇ ವಾ ಸುಖಪ್ರದಃ ।
ವಾತಶ್ಲೇಷ್ಮಾರುಚಿಛರ್ದಿಗ್ರಹಣೀಪಾರ್ಶ್ವಹೃದ್ದ್ರವಾನ್ ॥

## D 1359

ತಾಳಕೇಶ್ವರೀರಸ :—ತಾಳಕ ೨ ತೂಕವನ್ನು ಒಂದು ಮಾನ ಸುಣ್ಣದ ನಡುವೆ ತಾಳಕವ ಪಾವಡೆಯಲ್ಲಿ ಗಂಟುಕಟ್ಟಿ ಇರಿಸಿ ಆ ಸುಣ್ಣವನ್ನು ಬೇಯಿಸೋಣ. ಆರಿದ ಬಳಿಕ ಆ ತಾಳಕದ ಗಂಟು ತೆಗೆದು ಚಿಲಕೀರಸಮೂಲದ ಕಷಾಯ ಕಾವಲಿಯಲ್ಲಿ ತಾಳಕದ ಗಂಟನ್ನು ಯಂತ್ರಮಾರ್ಗದಲ್ಲಿ ಬೇಯಿಸಿ ಗಳಿಗೆ ಎರಡು ಆದ ಮೇಲೆ ತೆಗೆದು ಗುಳಿಕಲ್ಲಿನಲ್ಲಿರಿಸಿ ಸಣ್ಣನಾಗಿ ಅರೆದು ಮತ್ತೆ ದ್ರವ್ಯ—ಹಿಪ್ಪಲಿ ಗ ೩ ತೂಕ, ಹಿಪ್ಪಲಿಮೂಲ ೩ ಗದ್ಯಾಣ ತೂಕ, ಇವನ್ನು ಚೂರ್ಣವಂ ಮಾಡಿ ಆ ಗುಳಿಕಲ್ಲಿನಲ್ಲಿ ಇದ್ದ ತಾಳಕದೊಂದಿಗೆ ಹಾಕಿ, ಅಡಕೆಯ ಗಾತ್ರ ಸುಣ್ಣವನ್ನು ಹಾಕಿ, ಸುಣ್ಣದ ನೀರಲ್ಲಿ ಒಂದು ಜಾವ ಮರ್ದಿಸಿ ಗುಂಜಾಪ್ರಮಾಣದಲ್ಲಿ ಗುಳಿಗೆಯಂ ಮಾಡಿ ನೆಳಲಲ್ಲಿ ಆರಿಸಿ ಕೊಡುವಲ್ಲಿ ಅನುಪಾನ—ಶೀತಜ್ವರಕ್ಕೆ ವೀಳ್ಯದೆಲೆ

ರಸ. ವಾತಜ್ವರಕ್ಕೆ ಹಿಪ್ಪಲಿ, ಹಿಪ್ಪಲೀಮೂಲದ ಕಲ್ಕ. ಸನ್ನಿಪಾತಕ್ಕೆ ತ್ರಿಕಟುಕ ಚೂರ್ಣ. ಇದು ತಾಳಕೇಶ್ವರೀರಸ.

## D 1372 & R 1373

ತಾಳಕೇಶ್ವರರಸ :—ಶೋಧಿಸಿದ ರಸ ೧೨ ತೂಕ, ತಾಳಕ ೨ ತೂಕ, ಬಿಳುಗಾರ ೫ ತೂಕ, ಬಿಳಿಯ ಇಲಿಪಾಷಾಣ ಗ ೧೦ ತೂಕ, ಇವಂ ಕಳ್ಳೀಹಾಲಲ್ಲೂ ಎಕ್ಕದ ಹಾಲಲ್ಲೂ ನಯವಾಗಿ ಅರೆದು ಗುಳಿಗೆಯಂ ಮಾಡಿ ಬಾಯೊಳು ಗುಳಿಗೆಯನಿಕ್ಕಲು ಅರುಚಿ, ಮೂಗಿನ ವ್ಯಾಧಿ, ದಂತಶೂಲೆ ಇವೆಲ್ಲಾ ಕೆಡುವುವು.

## E 1372 & 1373

ತೇರಣದ ತೈಲ :—ತೇರಣದ ಬೀಜವಂ ನೊಸರನೀರಿಂದ ತೇದು ತಣುಗೆಗೆ ಮೆತ್ತಿ ಬಿಸಿಲಲ್ಲಿ ಇರಿಸಲು ತೈಲಂ ಬರುವುದು. ಆ ತೈಲವಂ ಪೂಸಿಕೊಂಡರೆ ಎಲ್ಲಾ ಮುಷ್ಟಿಕೀಲು ಕಳೆವುದು. ಆ ತೈಲದಿಂ ಕೈಯಂ ಪೂಸಿ ಪಾರಿವಾಣದಕಾಯಂ ಒತ್ತಲು ಒಡೆಯುವುದು.

## D 1358

ತ್ರೈಲೋಕ್ಯತಾಪಹರರಸ :— ನವಜ್ವರಕ್ಕೆ—ತಿಗಡೆ, ರಸ, ಗಂಧಕ, ತವರ, ಕಟುಕ ರೋಹಿಣಿ, ಹಿಪ್ಪಲಿ, ಕಂಚಿ ಏಲದ ಬೀಜ, ಇವೆಲ್ಲ ಗ ೯, ಸಮ ಜೇಪಾಳದ ಬೀಜ, ಇವಂ ಕಲ್ವದಲ್ಲಿ ಕಳ್ಳಿಯ ಹಾಲಲ್ಲೂ ಎರಡು ಜಾವ ಮರ್ದಿಸಿ ರಸಶುದ್ಧಿ ಮಾಡಿಕೊಂಡು ಎರಡು ಗುಂಜಿಯ ತೂಕವನ್ನು ಅಲ್ಲದ ರಸ ಸಕ್ಕರೆ ಬೆರಸಿ ಕೊಡಲು ನವಜ್ವರ ಹರ.

## D 1359

ದಾಳಿಂಬಾದಿಚೂರ್ಣ :—ದಾಳಿಂಬದ ಎಳಗಾಯಿ, ಬೇಲದ ಎಳಗಾಯಿ, ಬೆಲ್ಲವತ್ತದ ಎಳಗಾಯಿ, ಮಾವಿನ ತಿರುಳು, ಧಾತಕೀಕುಸುಮ, ಎಲವದ ಹಗಿನು, ಅತಿಬಜೆ, ಅಜವೋದ, ತೀಬನು, ಕೊಡಸಿಗನ ತಿಗಡು, ಆ ಬೀಜ, ಅನಂಗಿತಿಗಡು, ಲವಂಗೆ, ಲೋಧ್ರಕಾಚು, ನೇರಳೆ ತಿಗಡು, ಸಾಸಿವೆ, ತ್ರಿಕಟುಕ, ಭದ್ರಮುಸ್ತೆ, ಎರಡು ಜೀರಿಗೆ, ಹುಣಸೇಬೀಜದ ಓಡು, ಅಗುಳು ಶುಂಠಿ, ಸೈಂಧವ, ಕೊಳವಳಿಕೆಬೀಜ, ಜಾಯಿಕಾಯಿ, ಗದುಗಿನ ತಿರುಳು, ಗಜಹಿಪ್ಪಲಿ, ಇಷ್ಟನ್ನೂ ಸಮಾನವಾಗಿ ಚೂರ್ಣವ ಮಾಡಿ ಬೇಲದ ಹಣ್ಣಿನ ರಸವಾಗಲೀ, ಆಡಿನಮೂತ್ರವಾಗಲೀ, ಎಮ್ಮೆಯ ಮೊಸರಾಗಲೀ, ಜೇನುತುಪ್ಪವಾದರೂ ಆಗಲಿ, ಇದರಿಂದ ದೇಹದ ಬಲವರಿತು ಕೊಡುವುದು. ಅತಿಸಾರಕೃಂತ. ಇದು ದಾಳಿಂಬಾದಿ ಚೂರ್ಣ.

ದಾಳಿಂಬಾದಿಚೂರ್ಣ :—ದಾಳಿಂಬದ ಓಟೆ, ಹೂವಿನ ಹೀಚು, ಧಾತಕೀಕುಸುಮ, ಬೇಲದಹಣ್ಣಿನ ತಿರುಳು, ಲೋಧ್ರ, ಹುಣಸೇಬೀಜದ ಓಡು, ಕೊಡಸಿಗೆ, ಅಜವೋದ, ಅತಿಬಜೆ, ಶುಂಠಿ, ಎಲವದ ಹಗಿನು, ಬೆಲ್ಲವತ್ತದ ಹಣ್ಣಿನ ತಿಗಳು, ಗಜ್ಜುಗದ ತಿರುಳು, ಹೇಮರದ ಚೆಕ್ಕೆ, ಕೊಡಸಿಗನ ಬೀಜ, ಹಿಪ್ಪಲಿ, ಲವಂಗ, ಸೈಂಧವ ಇವಂ ಸಮಾನಂಗೊಂಡು

ನಸುಬಿಸಿಯಂ ಮಾಡಿ ಚೂರ್ಣಂ ಮಾಡಿ ಮೊಸರೊಳು ಸೇವಿಸಲು ಅತಿಸಾರ, ಆಮರಕ್ತ, ಗ್ರಹಣಿ ಮಾಣ್ಗುಂ. ದಾಳಿಂಬದ ಓಟೆ, ಹೂವಿನ ಹೀಚು, ಬೆಲ್ಲವತ್ತ್ರದ ಹಣ್ಣಿನ ತಿರುಳು ಮಾವಿನ ಹಣ್ಣಿನ ತಿರುಳು, ಎಲವದ ಹಗಿನು, ಧಾತಕೀಕುಸುಮ, ಅಜಮೋದ, ಅತಿಬಜೆ, ಕೊಡಸಿಗನ ತೊಕ್ಕು, ಶುಂಠಿ, ಹೇಮರದ ಚಕ್ಕೆ, ಭದ್ರಮುಸ್ತೆ, ಓಮ, ಕೊಡಸಿಗನ ಬೀಜ, ಎರಡು ಜೀರಿಗೆ, ಸಾಸಿವೆ, ಇವಂ ಸಮಾನಂಗೊಂಡು ನಸುಬಿಸಿ ಮಾಡಿ ಎಮ್ಮೆಮೊಸರಲ್ಲಿ ಕೊಳ್ಳೆ ಸಮಸ್ತಾತಿಸಾರ ಮಾಣ್ಗುಂ.

## D 1364

**ಧಾತುಮಾಕ್ಷಿಕಚೂರ್ಣಂ** :—ಕಬ್ಬಿಣದ ಪುಡಿ, ಎಳ್ಳು, ಶುಂಠಿ, ಹಿಪ್ಪಲಿ, ಮೆಣಸು, ಯೇರದಹೂಪುಡಿ, ಎಂಬಿವಂ ಸಮಾನಂಕೊಂಡು ಇವೆಲ್ಲರ ಸಮಾನ ಧಾತುಮಾಕ್ಷಿಕ ಚೂರ್ಣಂ. ಇದಂ ಜೇನುತುಪ್ಪದೊಳು ಕಲಸಿ ಗುಳಿಗೆಯಂ ಮಾಡಿ ಬಳಿಕ ಹಾಲಲ್ಲಿ ಕುಡಿಯಲು ಹಲವುಕಾಲದಿಂ ಕೂಡಿಬಂದ ಪಾಂಡುರೋಗ ಹರವೆಂದು ಪೊಗಳಲ್ಪಟ್ಟಿರುವುದು.

## D 1400

**ದಿವ್ಯರಸಕ್ಕೆ ಯೋಗ** :—ಜೇಪಾಳ ೮ ತೂಕ, ಶುಂಠಿ ೩ ತೂಕ, ಮೆಣಸು ೮ ತೂಕ, ಬಿಳುಗಾರ ೧ ತೂಕ ಇಷ್ಟನ್ನು ಕೂಡಿ ಮರ್ದಿಸಲು ರಸ ಶುದ್ಧಿಯಹುದು. ಒಂದುಗುಂಜಿ ಪ್ರಮಾಣ ಗುಳಿಗೆಯಂ ಮಾಡಿ ಬಿಸಿನೀರಲ್ಲಿ ಕೊಡುವುದು. ಶೋಫ, ಪಾಂಡು, ಗುಲ್ಮ, ಜಲೋದರ, ಗೆಡ್ಡೆ, ಪ್ಲೀಹ ಇಷ್ಟು ದೋಷಂಗಳೂ ಕೆಡುವುವು. ಇದಕ್ಕೆ ಪಥ್ಯ ಮಜ್ಜಿಗೆ ಓಗರ.

## D 1352

**ನಾಟಲಿಕಾ** :—(ಒಂದುಗುಳಿಗೆಯ ಕ್ರಮ) ಅರಿದಳ, ಮಣಿಸಿಲೆ, ಆಮಳಸರ, ಗಂಧಕ, ಪಾದರಸ, ಭೇರುಗ.........ಹಿಪ್ಪಲಿ.........ಕರಕಕಾಯಿ, ಉಸಿರಿಕಾಯಿ, ಇದ ಸರಿಮಾಡಿ ಗರುಗದ ರಸದಲ್ಲಿ ಮೂರು ದಿನ ಮರ್ದಿಸಿ, ಗುಂಜಿಪ್ರಮಾಣ ಗುಳಿಗೆಯಂ ಮಾಡಿ ನೆಳಲೊಳಗೆ ಒಣಗಿಸಿ ಒಂದು ಗುಳಿಗೆಯಂ ಮಜ್ಜಿಗೆಯಲ್ಲಿ (ಕೊಡಲು) ಸಂಗ್ರಾಣಿ ಮಾಣ್ಗುಂ. ಒಂದು ಗುಳಿಗೆಯ ಕೈಎಣ್ಣೆಯಲ್ಲಿ ಮರ್ದಿಸಿ ಕೊಡಲು ವಿರೇಚನೆಯಾಗುವುದು. ಹಾವು ಕಚ್ಚಿದರೆ ಮದ್ದನಿಕ್ಕಿದರೆ ಸಂದುಸಂದು (ಸಾಸ್ತ್ರದಲ್ಲಿ ಹುಯಿದು) ಚೊಕ್ಕವಚ್ಚಕಮುಂ. ಶುಂಠಿಯಲ್ಲಿ ತೊಡೆದರೆ ಉಷ್ಣ, ಉಳ್ಳಿಯುಷ್ಟು ಮಧು ಹಾಕಿರುವ ಅಂಬಿಲದ ನೀರಿನಲ್ಲಿ ಏಳು ದಿನ ಗಾಯಕ್ಕೆ ತೊಡೆದು ಮರ್ದನ ಮಾಡಿದರೆ ಎಷ್ಟು ವಿಷಂಗಳೂ ಮಾಣುವುವು. ಬಜೆಯಲ್ಲಿ ಒಂದು ಗುಳಿಗೆಯಂ ಕೊಡಲು ವಾಯು ಮಾಣ್ಗುಂ. ...ವೊಲಿನಾಲ್ಲಿ ಬಜೆ ೫ ಕೂಕದಲ್ಲಿ ಕೊಡಲು ಎಷ್ಟು ವಾಯುವಾದರೂ ಮಾಣ್ಗುಂ. ಜೇನು ಒಂದು ತೂಕದಲ್ಲಿ ಒಂದು ಗುಳಿಗೆಯಂ ಕೊಡಲು ಸರ್ವವಾತ ಮಾಣ್ಗುಂ. ಜೀರಿಗೆ ೧ ತೂಕ, ಸಕ್ಕರೆ ೧ ತೂಕದಲ್ಲಿ ಒಂದು ಗುಳಿಗೆಯಂ ಕೊಡಲು ಸರ್ವವಾತ ಮಾಣ್ಗುಂ. ಸರ್ವಜ್ವರಕ್ಕೆ

ಗರುಗದ ರಸದಲ್ಲಿ ಒಂದು ಗುಳಿಗೆಯ ಕೊಡಲು ಸನ್ನಿಪಾತಜ್ವರ ಮಾಣ್ಗುಂ. ಬೋಳ ಕಡಲೆ ರಸದಲ್ಲಿ ಒಂದು ಗುಳಿಗೆಯ ಕೊಡಲು ಸರ್ವಜ್ವರ ಮಾಣ್ಗುಂ. ಈ ಗುಳಿಗೆಯಂ ಗರುಗದ ರಸದಲ್ಲಿ ಕೊಡಲು ಚಮಟ ಮಾಣ್ಗುಂ. ಈ ಗುಳಿಗೆಯಂ ಅಕ್ಕಿರಸದಲ್ಲಿ ಕೊಡಲು...ಗುಳಿಗೆ ಎರಡಲ್ಲೂ ನಾಜ್ಲಿಪಾಲಟಿ (?) ಮಾಣ್ಗುಂ. ಬೋಳಗಡಲೆಯ ರಸದಲ್ಲಿ ಒಂದು ಗುಳಿಗೆಯ ಕೊಡಲು ಸರ್ವಜ್ವರ ಮಾಣ್ಗುಂ. ಈ ಗುಳಿಗೆಯಂ ಗರುಗದ ರಸದಲ್ಲಿ ಕೊಡಲು ಚಮಟ ಮಾಣ್ಗುಂ. ಈ ಒಂದು ಗುಳಿಗೆಯಂ ಅಕ್ಕಿರಸದಲ್ಲಿ ಕೊಡಲು ವಾತಜ್ವರ ಮಾಣ್ಗುಂ. ಈ ಒಂದು ಗುಳಿಗೆಯಂ ಆಡಿನ ಹಾಲಿನಲ್ಲಿ ಕೊಡಲು ನಷ್ಟೇಂದ್ರಿಯ ಮಾಣ್ಗುಂ, ಇಂದ್ರಿಯಪ್ರಮೇಹ ಮಾಣ್ಗುಂ. ಈವೊಂದು ಗುಳಿಗೆಯಂ ನಿಂಬೇಹುಳಿಯಲ್ಲಿ ಕೊಡಲು ಕಣ್ಣಿಗೆ ಹಚ್ಚಲು ಭೂತ ಬಿಡುವುದು. ಈ ಒಂದು ಗುಳಿಗೆಯ ಬೆಲ್ಲದ ಪಾನಕದಲ್ಲಿ ಕೊಡಲು ಶ್ವಾಸಕಾಸರೋಗವು ಮಾಣ್ಗುಂ. ಈ ಒಂದು ಗುಳಿಗೆಯ ಸಕ್ಕರೆಯ ಬೆರಸಿ ಕೊಡಲು ಶೈತ್ಯ ಮಾಣ್ಗುಂ. ಕಸೆವಂದಿಯ ರಸದಿಂ ಈ ಗುಳಿಗೆಯ ಕೊಡಲು ಹೊಟ್ಟೆಯಲ್ಲಿರುವ ಕಲ್ಮಷ ಮಾಣ್ಗುಂ. ಈ ಒಂದು ಗುಳಿಗೆಯ ಹುಣಸೇಸೊಪ್ಪಿನ ರಸದಲ್ಲಿ ಕೊಡಲು ಉಷ್ಣ ಮಾಣ್ಗುಂ. ಈ ಒಂದು ಗುಳಿಗೆಯ ತ್ರಿಪಾಳಿಯ ರಸದಲ್ಲಿ ಕೊಡಲು.........ಮಾಣ್ಗುಂ. ಬ್ರಾಹ್ಮೀತೋಯದಲ್ಲಿ ಒಂದು ಗುಳಿಗೆಯ ಕೊಡಲು..........ನ್ನೋಡಿಯನ್ನು ನಗಲಿಜ..........ನಾನಾರಸದಲ್ಲಿ ಗುಳಿಗೆಯ ಕೊಡಲು ಹೊಟ್ಟೆಯೊಳಗಿನ ಕಲ್ಮಷ ಮಾಣ್ಗುಂ. ಈ ಒಂದು ಗುಳಿಗೆಯ.........ಮೊಗ ತಾನಾಗಲು ಮಾಣ್ಗುಂ. ಈ ಒಂದು ಗುಳಿಗೆಯ..........ಡನುದೆಯ..........ದಂತಾ ರೋಗ ಗುಲ್ಮ ಮಾಣ್ಗುಂ. ಕಡುಪು ಮಾಣ್ಗುಂ............ಅಜೀರ್ಣ ಮಾಣ್ಗುಂ. ಉಮ್ಮತ್ತದ ರಸದಲ್ಲಿ ಈ ಒಂದು ಗುಳಿಗೆಯ ಕೊಡಲು ಎಳ್ಳುಗಾಯಚೂರ್ಣದ ರಸದಲ್ಲಿ ಈ ಒಂದು ಗುಳಿಗೆಯ ಕೊಡಲು, ಕೊರಳು......ಚಪ್ಪರದ ನರೆಯ ರಸದಲ್ಲಿ ಕೊಡಲು ನಾಡಿ ಮಾಣ್ಗುಂ. ಇವಂ ಕಾಚಗರಸದಲ್ಲಿ ಕೊಡಲು ಪಾಂಡು ಮಾಣ್ಗುಂ..........ಯಲ್ಲಿಗೆ ಒಂದು.........ಯನೇಕಸಾರದಲ್ಲಿ ನೀರಿಕ್ಕಿ ಕೊಡಲು..........(ಅಪೂರ್ಣ)

## D 1372 & R 1373

ನಾಳಿಕೇರವಟಕ:—ಇದನ್ನು ಮಾಡುವ ಕ್ರಮ—ಬಹುಮೂತ್ರಕ್ಕೆ ಗುಳಿಗೆಯಂ ಮಾಡುವ ಪ್ರಕಾರವು—ತೆಂಗಿನ ಹೊಂಬಾಳೆ, ಬಾಳೇಹೂವು, ಇವು ಪ್ರತ್ಯೇಕ ಇಪ್ಪತ್ತು ಪಲ. ಬೊಬ್ಬುಳಿ, ನೇರಿಳೆ, ಮಾವು, ತುಂಬುರ, ಅರಳಿ, ಆಲ, ಬಸುರಿ, ಎಲಚಿ, ಮತ್ತಿ, ಅತ್ತಿ, ಆವರಿಕೆ, ಕಕ್ಕೆ, ಇವುಗಳ ತಿಗಡುಗಳನ್ನು, ಬಲ್ಲದ ಬೇರು, ತ್ರಿಫಲೆ, ಇಷ್ಟು ಔಷಧಿಗಳನ್ನು ಪ್ರತ್ಯೇಕ ಹತ್ತು ಪಲದ ಮರ್ಯಾದೆಯಲ್ಲಿ ತೂಗಿಕೊಂಡು ಸಣ್ಣನಾಗಿ ಅರೆದು ೭೫ ಪಲ ಉದಕವನ್ನು ದೊಡ್ಡ ಕಳಸಿಗೆಯಲ್ಲಿ ಹೊಯಿದು ಆ ಔಷಧಂಗಳಂ ಹಾಕಿ ಒಲೆಯ ಮೇಲಿಟ್ಟು ಏಳುದಿನದ ಮೇಲೂ, ನಿತ್ಯದಲ್ಲೂ ಎಂಟರಲ್ಲಿ ಒಂದು ಭಾಗ ಉಳಿಯುವ ಹಾಗೆ ಕಾಸಿಕೊಂಡು ಅದನ್ನು ಮರಳಿ ಕಳಸಿಗೆಯಲ್ಲಿ ಹೊಯ್ದು ಬೆಲ್ಲದ ಪಾಕದ ಮರ್ಯಾದೆಯಲ್ಲಿ ಕಾಸಿ ಇರಿಸುವುದು. ಇದಕ್ಕೆ ಪ್ರತಿಪಾಕವಾಗಿ ಹಾಕುವ ಔಷಧಗಳು—ಶೋಧಿಸಿದ ಕಲ್ಲು ಹನ್ನೆರಡು, ಹುಣಸೆಯ

ಬೀಜದ ತಿಗಡು, ಹುಣಸೆಯ ಬೇರಿನ ತಿಗಡು, ಆಲದಕಾಯಿಯ ಚೂರ್ಣ, ಇವು ಪ್ರತ್ಯೇಕ ಪಲ ೨. ಇದನ್ನು ಜೇನುತುಪ್ಪದಲ್ಲಿ ಕೊಂಡರೆ ಶ್ಲೇಷ್ಮಹರ. ಬಿಸಿನೀರಲ್ಲಿ ಕೊಡಲು ವಾತಹರ.

## D 1359

ನೀಲವಿಲಾಸರಸ :—ಜಾಯಿಕಾಯಿ, ಜಾಯಿಪತ್ರೆ, ಮದ್ದು ಇವಂ ಭಂಗಿಸೊಪ್ಪಿನ ರಸ ದಲ್ಲಿ ಮರ್ದಿಸಿ ಕಡಲೆ ಪ್ರಮಾಣದಲ್ಲಿ ಗುಳಿಗೆ. ಇದು ನೀಲವಿಲಾಸರಸ.

## D 1371 & D 1374

ಪಂಚವಕ್ತ್ರರಸ:— ಇದನ್ನು ಮಾಡುವ ಕ್ರಮ—೧ ತೂಕ, ಗಂಧಕ ೧, ಬಿಳಿಯ ಮೆಣಸು ೧, ಶುದ್ಧ ಬಿಳುಗಾರದ ಹಳುಕು ೧, ಹಿಪ್ಪಲಿ ೧, ಇಷ್ಟನ್ನು ಸಮಗೊಂಡು ಮರ್ದಿಸಿ ಉಮ್ಮತ್ತದ ರಸದಲ್ಲಿ ಮೂರು ದಿನ ಮರ್ದಿಸಿ ಗುಂಜಾಪ್ರಮಾಣದ ಗುಳಿಗೆಯಂ ಮಾಡಿ ನೆಳಲಲ್ಲಿ ಒಣಗಿಸಿ, ಹಸಿಶುಂಠಿರಸದಲ್ಲಿ ಕೊಡುವುದು. ಅರ್ಕಮೂಲ ಕಷಾಯ ವನಿಕ್ಕುವುದು. ಇದರೊಳಗೆ ತ್ರಿಕಟುಕಚೂರ್ಣವ ಬೆರಸಿ ಮತ್ತೆ ಕಷಾಯವನಿಕ್ಕಿ ಕೊಡುವದು. ಸನ್ನಿಪಾತಜ್ವರ ಬಿಟ್ಟು ಹೋಗುವುದು. ಒಂದು ಜಾವದ ಮೇಲೆ ಸಕ್ಕರೆ ಪಾನಕವ ಕೊಡುವುದು. ದಾಹ ಬಿಡದಿದ್ದರೆ ತಣ್ಣೀರ ಚಿಮಿಕಿಸುವುದು. ದಾಳಿಂಬಹಣ್ಣಿ ಮೇಲೆ ಕೊಡುವುದು. ಕಬ್ಬುಮೆಲ್ಲ ಕೊಡುವುದು. ಮೊಸರು ಓಗರ, ಉಣಲಿಕ್ಕುವುದು. ಅಜ್ವರ ಮೇಲೆ ನಿಲ್ಲದಿದ್ದರೆ ಶ್ರೀಗಂಧವ ಮೈಗೆ ಪೂಸುವುದು.

## D 1372 & R 1373

ಪಂಚಾಗ್ನಿಯೋಗ :—ಹೆಗ್ಗುರುಟಗೆ, ಇದನ್ನು ಕೆಲವರು ಸವಣೀಗಡ್ಡೆ ಎಂಬರು. ಗೋಳುಹಿಮ್ಮೆಯ ಗೆಡ್ಡೆ, ಚಿತ್ರಮೂಲ, ಸೂರಣದಗೆಣಸು, ಮಂಗರವಳ್ಳಿ, ಎಂಬಿವುಗಳ ಚೂರ್ಣವನ್ನು ಉದಯ ಕಾಲದಲ್ಲಿ ಮಜ್ಜಿಗೆಯಲ್ಲಿ ಕಲಸಿ ಕುಡಿಯಲು ಬಸುರಾಗಿರುವಾಗ ಆಗುವ ಕಷ್ಟಂಗಳಂ ಗುಲ್ಮಂಗಳಂ ಅಪಾನದ್ವಾರರೋಗಮಂ ಕೆಡಸುಗುಂ.

ಪಂಚಾನನರಸ :—ರಸ ಗ ೨ ತೂಕ, ಮೆಣಸು ಗ ೩ ತೂಕ, ಹಿರಾವಳಿ ಗ ೪ ತೂಕ, ತಾಮ್ರಭಸ್ಮ ಗ ೭ ತೂಕ, ಇಷ್ಟನ್ನು ಅರ್ಕಮೂಲರಸದಲ್ಲಿ ಲೇಸಾಗಿ ಮರ್ದಿಸಿ, ಗುಂಜಿ ತೂಕವನ್ನು ಸಕ್ಕರೆ, ಆಲದರಸದಲ್ಲಿ ಕೊಡಲು ಸರ್ವಜ್ವರಹರ. ಪಥ್ಯ ಮಜ್ಜಿಗೆ ಓಗರ.

## D 1372 & R 1373

ಪಂಚಾಮೃತರಸ :—ಅಭ್ರಕ ೧, ಮಾಕ್ಷಿಕ ೨, ಲೋಹ ೩, ರಸ ೪, ಗಂಧಕ ೫, ಇವಂ ನಿರೋಧಭಸ್ಮ ಮಾಡಿ ಬೆಲ್ಲವತ್ತದ ಹಣ್ಣಿನ ರಸದಿಂ ಮರ್ದಿಸಿ ಕುಕ್ಕುಟಪುಟವಂ ಇಕ್ಕಿ ತೆಗೆದು ಗ ೧ ತೂಕವಂ ಅಳಲೇಕಾಯಂ ಸುಟ್ಟು ಕರಿಯ ಚೂರ್ಣವಂ ಮಾಡಿ ಮೊಸರಿಂ ಕೊಡುವುದು. ಅದನ್ನು ಮೆಣಸಿನಲ್ಲಿ ಸಹ ಕೊಡಲು ಅತಿಸಾರಹರ. ಬನ್ನೀಜೀರಿಗೆಯಲ್ಲಿ

ಕೊಡಲು ಗ್ರಹಣಿಹರ. ತ್ರಿಫಲೆ ಬಿಸಿನೀರಿಂ ಕೊಡಲು ಶೂಲೆಹರ. ಅವುಡಲಎಣ್ಣೆಯಿಂ ಸರ್ವವಾತಹರ. ತ್ರಿಫಲೆ ಸಕ್ಕರೆಯಿಂ ಅಸ್ಥಿಗತಜ್ವರಹರ. ಬೆಲ್ಲ ಹಿಪ್ಪಲಿಯಿಂ ಮೂಲ ರೋಗಹರ. ದಂತಿಯ ತ್ರಿಫಲೆಯ ಕಷಾಯದಲ್ಲಿ ಉದರರೋಗ, ಕಾಮಾಲೆ ಹರ. ನೆಲ್ಲೋಗರ, ಮೊಸರು ಅಲ್ಲ ಇದಕ್ಕೆ ಪಥ್ಯ.

## D 1370

ಪಂಚಾಮೃತಯೋಗ :—

ಪಿಪ್ಪಲೀಸದೃಶಂ ಸರ್ಪಿಃ ಸರ್ಪಿಷೋ ದ್ವಿಗುಣಾ ಸಿತಾ ।
ಸಿತಾದ್ವಿಗುಣಿತಂ ಕ್ಷೌದ್ರಂ ಕ್ಷೌದ್ರಾದಷ್ಟಗುಣಂ ಪಯಃ ॥
ಭಕ್ಷಯೇದಕ್ಷಮಾತ್ರಂ ಚ ರೂಕ್ಷಜ್ವರನಿವಾರಣಮ್ ।
ಪುಷ್ಟಿತ್ರಿದೋಷಶಮನಂ.................. ॥
ಕರ್ಪೂರಜಾತೀಫಲಚಂಡಕಾನಿ
ಲವಂಗತಕ್ಕೋಲಸಕುಂಕುಮಂ ಚ ।
ಕೋಷ್ಠಂ ಚ ಮುಸ್ತಾ ಚ ಸನಾಗಕೇಸರಂ
ಸೇವ್ಯಂ ತಥಾ ಮಧುಕಚೋರಕಂ ಚ ॥
ಮರೀಚಕಸ್ತೂರಿಸವಿಶ್ವತೀಕ್ಷ್ಣ—
ಕಾಂತಾಸಮಂ ಖಾದಿರಚೂರ್ಣಯುಕ್ತಮ್ ।
ಹಿಮಾಂಬುನಾ ಶೇಷವತೀಂ ಪ್ರಕುರ್ಯಾ
ದ್ದಂತಾಮಯಘ್ನಂ ನಯನಾಮಯಘ್ನಮ್ ॥
ಸದಂತಶೂಲಮಧಿಮಾಂಸಪುಷ್ಟಂ ।
ನಿಹಂತಿ ತಾಂಬೂಲಮಥಾನಲಂ ಚ ॥

## D 1370.

ಪಿಪ್ಪಲ್ಯಾದಿರಸಾಯನಯೋಗ :—

ಪಿಪ್ಪಲ್ಯಾಶ್ಚ ರಜಃ ಪ್ರಸ್ಥಃ ಶರ್ಕರಾಯಾಂ ತದರ್ಧಕಮ್ ।
ಭಾರ್ಗೀ ಚವ್ಯಾಶ್ವಗಂಧಾ ಚ ಗಂಧಿಕಾಮರಿಚಾನಿ ಚ ॥
ರಾಸ್ನಾ ಕರ್ಕಟಕಾಶೃಂಗೀ ನಾಗರಂ ಕುಷ್ಠಕೇಸರಮ್ ।
ವಿಳಂಗಂ ಜೀರಕಂ ಯುಕ್ತಂ ಸಂಯೋಜ್ಯಂ ತ್ರಿಷು ಗಂಧಕಮ್ ॥
ವಹ್ನಿತಾಳೀಸಪತ್ರಸ್ಯ ಭೃಂಗಲೋಹರಜಃ ಸಮಃ ।
ಚತುಷ್ಕರ್ಷಮಿದಂ ಚೂರ್ಣಂ ಮಧುನಾ ಸಹ ದಾಪಯೇತ್ ॥
ನವಭಾಂಡೇ ವಿನಿಕ್ಷಿಪ್ಯ ಅಕ್ಷಮಾತ್ರಂ ಪ್ರದಾಪಯೇತ್ ।
ಜ್ವರಂ ಧಾತುಗತಂ ಚೈವ ಕ್ಷಯಮೇಕಾದಶಂ ತಥಾ ॥

ಪಾಂಡುಶ್ವಾಸಾರುಚಿಛರ್ದಿಕಾಸಾನಾಂ ಚ ಪ್ರಸೂತಿಕಾಮ್ ।
ಸ್ವೇದಂ ಪಿತ್ತಾನಿಲಂ ಹನ್ತಿ ಅಗ್ನಿವರ್ಧನಮುತ್ತಮಮ್ ॥
ಪಿಪ್ಪಲ್ಯಾದಿರಿದಂ ನಾಮ ರಸಾಯನಕರಂ ನೃಣಾಮ್ ॥

**ಟೀಕೆ**—ಹಾಗೆ ಯೋಗವ ಮಾಡಬೇಕಾದರೆ ಹಿಪ್ಪಲಿ ಸೇರು ೧, ಸಕ್ಕರೆ ಸೇರು॥, ಗಂಟುಭಾರಂಗಿ ೩ ತೂಕ, ಚವೆ ೩ ತೂಕ, ಅಶ್ವಗಂಧಿ ೩ ತೂಕ, ಹಿಪ್ಪಲಿ ೩ ತೂಕ, ಮೆಣಸು ೩ ತೂಕ, ರಾಸ್ಮೆ ೩ ತೂಕ, ಕರ್ಕಟಕಶೃಂಗಿ ೩ ತೂಕ, ನಾಗಕೇಸರ ೩ ತೂಕ, ವಾಯುವಿಳಂಗ ೩ ತೂಕ, ಜೀರಿಗೆ ೩ ತೂಕ, ತವಕ್ಷೀರ ೩ ತೂಕ, ಏಲಕ್ಕಿ ೩ ತೂಕ, ಲವಂಗಚೆಕ್ಕೆ ೩ ತೂಕ, ಲವಂಗಪತ್ರೆ ೩ ತೂಕ, ಚಿತ್ರಮೂಲ ೩ ತೂಕ, ತಾಳೀಸಪತ್ರೆ ೩ ತೂಕ, ಗರುಗ ೩ ತೂಕ, ಲೋಹಸಿಂದೂರ ೩ ತೂಕ, ಇವಂ ಚೂರ್ಣವಂ ಮಾಡಿ, ಹೊಸ ಮಡಿಕೆಯಲ್ಲಿ ಹಾಕಿ, ಕೋಲಂ ಜೇನುತುಪ್ಪವ ಹೊಯ್ದು, ಕಲಸಿ, ಧಾನ್ಯದಲ್ಲಿ ಇರಿಸಿ ತೆಗೆದುಕೊಂಡು, ನಿತ್ಯ ಸೇವಿಸಲು, ಜ್ವರ, ಹನ್ನೊಂದು ಬಗೆಯ ಕ್ಷಯರೋಗ, ಪಾಂಡುರೋಗ, ಶ್ವಾಸ, ಅರುಚಿ, ಛರ್ದಿ, ಕಾಸ, ಪ್ರಸೂತಿ, ಸ್ವೇದ, ಪಿತ್ಥ, ಇನಿತು ಹರವಾಗಿ ಅಗ್ನಿವರ್ಧನ. ಆರೋಗ್ಯಮಕ್ಕುಂ. ದೀಪನಮಕ್ಕುಂ. ಇದು ಹಾಗ ಪಾಲು, ಈ ಮೇರೆಯಲ್ಲಿ ಎಷ್ಟು ಬೇಕಾದರೂ ಮಾಡಿಕೊಳ್ಳುವುದು.

## D 1372 & R 1373

ಪ್ರಣವ ಎಂಬ ಯೋಗ :—ತಾಳೀಸಪತ್ರೆ, ಮೆಣಸು, ಇಂತಿವೆರಡಂ ಸಮಭಾಗವಂ ಒಂದು ಭಾಗವೆಂದು ಯೋಚಿಸಿಕೊಂಡು ಹಾಗೆ ಇಡಿದ ಮದ್ದಂ ಮೊದಲು ಇಮ್ಮಡಿ ಹಿಪ್ಪಲಿ ಮೂಲದಿಂ, ಬಳಿಸಂದ ಮದಗೆಜ ಹಿಪ್ಪಲಿ, ತ್ರಿಗುಣಾ ಚ ಶುಂಠೀ=ಮೂರು ಮಾಡಿ ಶುಂಠಿಯಂ ಚೂರ್ಣಂ ಮಾಡಿ ಬೆಲ್ಲಂ ಕೂಡಿದ ಗುಳಿಗೆಯ.ಂ, ಶ್ರೀಗಂಧ, ಏಲಕ್ಕಿ, ಲವಂಗ, ನಾಗಕೇಸರಗಳಂ ಕೂಡಿದುದಂ, ಉಂಡಬಳಿಕ ಕುಡಿಯುವುದು. ಕೆಮ್ಮು, ಮಂದಾಗ್ನಿ, ಮೂಲವ್ಯಾಧಿ, ಹೊಟ್ಟೆನೈಬೇನೆಗಳೆಂಬಿವುಗಳು ಪರಿಹಾರವಾಗುವುವು.

## D 1359.

ಪ್ರತಾಪಲಂಕೇಶ್ವರ :—ಶಂಕುಪಾಷಾಣ, ಗೌರೀಪಾಷಾಣ, ಪ್ರತ್ಯೇಕ ಗ ೨ ತೂಕ, ಇಂಗಲೀಕ ಗ ೨ ತೂಕ, ವತ್ಸನಾಭಿ ಗ ೨ ತೂಕ, ಇವು ಶುದ್ಧಮಾಡುವುದಕ್ಕೆ ಈ ಎರಡು ಪಾಷಾಣದ ಪೊಟ್ಟಣವ ಕಟ್ಟಿ ಸುಣ್ಣದ ನಡುವೆ ಇರಿಸಿ ಸುಡುವುದು. ಆ ಮೇಲೆ ಲಕ್ಕಿಯ ರಸದಲ್ಲಿ ಡೋಲಾಯಂತ್ರದಲ್ಲಿ ಬೇಯಿಸುವುದು. ೪ ಗಳಿಗೆ ಲವಣಕಣಗಳೂ ಇಂಗಲೀಕವ ನಿಂಬೇಹುಳಿಯಲ್ಲಿ ೧ ದಿನವಿರಿಸೆ ಶುದ್ಧ. ವತ್ಸನಾಭಿ ಆಡಿನಮೂತ್ರದಲ್ಲಿ ೧ ದಿನಕ್ಕೆ ಶುದ್ಧಿ. ಇವನ್ನೆಲ್ಲಾ ಲೋಳಿಸರದ ಬೇರಿನ ರಸದಲ್ಲಿ ಒಂದು ಜಾವ ಮರ್ದಿಸಿ ಮತ್ತು ಚಿಲಿಕೀರೆಯ ಸೊಪ್ಪಿನ ರಸದಲ್ಲಿ ಒಂದು ಜಾವ ಮರ್ದಿಸಿ ಸಾಸಿವೆಪ್ರಮಾಣ ಗುಳಿಗೆಯಂ ಮಾಡಿ

ಸಮಜ್ವರಕ್ಕೆ ಜೀರಿಗೆ ಸಕ್ಕರೆಯಲ್ಲಿ ಕೊಡುವುದು. ಲವಣಾಮ್ಲವರ್ಜ. ಪ್ರತಾಪಲಂಕೇಶ್ವರ ರಸ.

## D 1359

ಪ್ರಭಾವತೀರಸ :—

ಹರಿದ್ರಾನಿಂಬಪತ್ರಾಣಿ ಪಿಪ್ಪಲೀಮರಿಚಾನಿ ಚ ।
ವಿಳಂಗಂ ಭದ್ರಮುಸ್ತಂ ಚ ಸಮಾಂಶಂ ವಿಶ್ವಭೇಷಜಮ್ ॥

ಚಿತ್ರಕಸ್ಯ ದಲಂ ಕೋಷ್ಠಂ ವಿಷಂ ಪಾಟಹರೀತಕೀ ।
ಏತಾನಿ ಸಮಭಾಗಾನಿ ಅಜಾಮೂತ್ರೇಣ ಪೇಷಯೇತ್ ॥

ವಟಕಂ ಚ ಗೋಮೂತ್ರೇಣ ಕುಷ್ಠಪಾಂಡೂ ವಿನಿಕ್ಷಿಪೇತ್ ।
ಮೂರ್ಛಾಯಾಂ ಶುಷ್ಕನಿಕ್ಷೇಪೆ..................

ಪ್ರಭಾವತೀರಸೋ ನಾಮ ಪೂಜ್ಯಪಾದೇನ ಭಾಷಿತಮ್ ॥

## D 1372 & R 1373

ಫಲದಾನಂದರಸ :—ರಸ ಹಣ ಒಂದು ತೂಕ, ಗುಂಜಿಯ ತೂಕವನ್ನು ಆಲದರಸದಲ್ಲಿ ಕೊಡಲು, ವಾತ, ಕಾಸ, ಶೂಲೆ, ಅತಿಸಾರ, ಸಂಗ್ರಹಣಿ, ಶುಕ್ಲಪ್ರಮೇಹ ಇಷ್ಟೂ ಮಾಣುವುವು. ಇದು ಫಲದಾನಂದರಸ.

## D 1359

ಫಿರಂಗಿಚೆಕ್ಕಚೂರ್ಣ:—ಫಿರಂಗೆಚೆಕ್ಕೆ ೧ ಸೇರು, ಇದಕ್ಕೆ ಕೊಡುವದ್ರವ್ಯ—ಹಿಪ್ಪಲಿ, ಹಿಪ್ಪಲೀಮೂಲ, ಮೆಣಸು. ಏಲಕ್ಕಿ, ಜಾಯಿಕಾಯಿ, ಜಾಯಿಪತ್ರೆ, ಲವಂಗ, ಚಿರಾಸಾಣಿ, ಓಮ, ವಾದಕ್ಕಿ, ಚವ್ಯ, ಚಿತ್ರಮೂಲ, ವಾಯುವಿಳಂಗ, ಕರ್ಕಟಶೃಂಗಿ, ಗೆಂಟುಭಾರಂಗಿ, ಗಂಧಿ, ತಗರ, ರಾಸ್ಮೆ, ಲವಂಗತೊಕ್ಕು, ಲವಂಗಪತ್ರೆ, ನಾಗಕೇಸರ, ದೇವದಾರು, ಇವುಗಳು ಪತ್ರೆ, ಗ ೨ ತೂಕವ ಚೂರ್ಣವ ಮಾಡಿ ತೆಗೆದುಕೊಳ್ಳುವುದು.

## D 1372 & R 1373

ಬಂಗಾರವನ್ನು ಸಿಂದೂರ ಮಾಡುವ ವಿಧಾನ :—ಎಲುಮುಂಚಿಯ ಹಣ್ಣಿನ ರಸದಲ್ಲಿ ಬಂಗಾರ ೧ ಪಲ ನೆನೆಯಲಿಕ್ಕಿ ಮೂರು ದಿನ ಇರಿಸಿ ಆ ಮೇಲೆ ತೆಗೆದು ಅದಂ ತೆಳುವಾಗಿ ತಗಡುಹೊಡೆಸಿ ಗಂಧಕವಂ ಅರೆದು ಪೂಸಿ ಕೋವೆಯಲ್ಲಿ ಬಂಗಾರವಂ ಇರಿಸಿ ಈ ಮರ್ಯಾದೆಯಲ್ಲಿ ಪುಟವನಿಕ್ಕುವುದು. ಮತ್ತೆ ತೆಗೆದು ಮಾಕ್ಷಿಕವನ್ನು ಚೂರ್ಣಂ ಮಾಡಿ ನಿಂಬೇಹಣ್ಣಿನ ರಸದಿಂದ ಅರೆದು ಆ ಬಂಗಾರದ ಮೇಲೆ ಶೊಡೆದು ಮೂರುಬಾರಿ ಪುಟವನಿಕ್ಕಿ ಎಲೆ

ಬಂಗಾರವನ್ನು ಗುಳಿಕಲ್ಲಿನಲ್ಲಿ ಹಾಕಿ ಶುಷ್ಕ ಮರ್ದನೆಯಂ ಮಾಡಿ ತೋಡಿಕೊಂಡು ಮತ್ತಿಯ ತಿಗುಡ ರಸವನರೆದು ಕಲಸಿ ಹಾಲಲ್ಲಿ ಇರಿಸಿ, ಆರಿಸಿ, ಆಮೇಲೆ ತೆಗೆದು ವಸ್ತ್ರಗಾಳಿತವ ಮಾಡಿ ಭರಣಿಯಲ್ಲಿ ತುಂಬಿ ಇರಿಸಿ ಅದರೊಳಗೆ ಅರು ತೂಕ ಮೊದಲಾಗಿ ಮೂರು ತೂಕ ಪರ್ಯಂತರ ಶರೀರಧಾತುನಪ್ಪಕ್ಕೆ ಜೇನುತುಪ್ಪದಲ್ಲಿ ಗುಳಿಗೆಯಾಗಿ ಕೊಡುವುದು.

ಬಾಳೇಹೂವಿನ ಚೂರ್ಣ :—ಬಾಳೇಹೂವನ್ನು ತಂದು ಬಿಡಿಸಿ ನೀರಿನೊಳಗೆ ನೆನೆಸಿ ಒಣಗಿಸಿ ಚೂರ್ಣಂ ಮಾಡಿ ಸೀಸದ ವಟಕದಲ್ಲೂ ಹಿಂದೆ ಹೇಳಿದ ದಾಗೆ ಶುದ್ಧವಾದ ಸೀಸ, ಶುದ್ಧವಾದ ಸೂಜಿಕಲ್ಲು, ಶುದ್ಧವಾದ ಅಭ್ರಕ, ಜಲಗೊಟ್ಟಿ, ಹೊನ್ನೆಯಮರದ ತಿಗಡು, ಶುದ್ಧವಾದ ಬಿಳುಗಾರ, ಎಳ್ಳಹಿಂಡಿ ಶುದ್ಧವಾದ ಕಿಟ್ಟ, ಶುದ್ಧವಾದ ಮಾಕ್ಷಿಕ, ಅರಸಿನ, ಬಿಳಿಯ ಗುರುಗಂಜಿ, ಅಣಿಲೇಕಾಯಿ, ಶುದ್ಧವಾದ ಅಂಜನಕಲ್ಲು, ನೆಲದಾಳೆಗೆಡ್ಡೆ, ಕರಿಯದ ಕೆಚ್ಚು, ಕಿರುಮಟ್ಟಿಯ ಸೊಪ್ಪು, ಜವಣಿಕೆಯ ಅಕ್ಕಿ, ಕಲ್ಮದ ಇವಂ ಸರಿಯಾಗಿ ಚೂರ್ಣವಂ ಮಾಡಿ ಹೊಸಮಡಕೆಯೊಳಗಿರಿಸಿ ಗ೧ ತೂಕ ಚೂರ್ಣವನ್ನು ಜೇನುತುಪ್ಪದಲ್ಲಿ ಕಲಸಿ ಕೊಡುವುದು. ಆ ರೀತಿಯಾದ ಚೂರ್ಣ ಮೇಲೋಗರದ ಸೀಗೆಯಬೇರು, ಹೊನ್ನೆಬೇರು ಆ ಕೆಚ್ಚು ಶೋಧಿಸಿದ ಕಲ್ಮದ, ಅರಸಿನ, ಮರದರಸಿನ, ಜಂಬುನೇರಳೆತಿಗಡು, ಸಣ್ಣನೇರಳೆ ತಿಗಡು, ನಾಯಿನೇರಳೆ ತಿಗಡು, ಅರಳಿಯತಿಗಡು, ಅತ್ತಿಯತಿಗಡು, ಬಸುರಿಯತಿಗಡು, ಭದ್ರಮುಸ್ತೆ, ತ್ರಿಫಲೆ, ಮುರಿಕಿಲಮರದ ತಿಗಡು, ಕೊಡಸಿಗನ ತಿಗಡು ಬಾಗುಂಜಿಬೀಜ, ಗೀರಗೊಟ್ಟೆ, ಬಾಳಂಗೆಣಸೆ, ಮಂಗಾಯಮರದ ತಿಗಡು, ಮತ್ತಿಯತಿಗಡು, ಇವಂ ಸರಿಯಾಗಿ ತೂಗಿಕೊಂಡು ಚೂರ್ಣವ ಮಾಡಿ ಈ ತೂಕಕ್ಕೆ ನಾಲ್ಕು ಮರ್ಯಾದೆ ನೀರನ್ನೆರೆದು ಒಂದು ಭಾಗ ನೀರು ಉಳಿಯುವಂತೆ ಕಾಯಿಸಿ, ಈ ಚೂರ್ಣವನ್ನು ಆ ಕಷಾಯದಿಂ ಏಳು ಭಾವನೆಯನ್ನು ಕೊಟ್ಟು, ನೆರಳಲ್ಲಿ ಒಣಗಿಸಿ, ಚೂರ್ಣವಂ ಮಾಡಿ ಜೇನುತುಪ್ಪದಲ್ಲಿ ಗ ಮೂರು ತೂಕವನ್ನು ಕಲಸಿ ಕೊಡುವುದು. ಶುದ್ಧವಾದ ಉಕ್ಕಿನ ಚೂರ್ಣ, ಹುಣಸೆಯಬೇರಿನ ತಿಗಡು ೧೨ ಪಲ, ಹತ್ತಿಗೊಟ್ಟೆಯ ಚೂರ್ಣ ೩ ಪಲ, ಅರಳಿಯಬೀಜ ನಾಲ್ಕು ಪಲ ಇವಂ ಚೂರ್ಣವಂ ಮಾಡಿ ಜೇನುತುಪ್ಪದಲ್ಲಿ ಗ೧ ತೂಕವನ್ನು ಕಲಸಿ ಕೊಡುವುದು.

D 1359

ಬಿಲ್ವಾದಿ ಅಂಜನ :—ಬೆಲ್ಲವತ್ತದಬೇರು, ಶ್ರೀತೊಳಸಿಹೂವು, ಹೊಂಗೇಬೀಜ, ತಗರಮೂಲ, ದೇವದಾರು, ತ್ರಿಫಲೆ, ತ್ರಿಕಟುಕ, ಎರಡು ಅರಿಸಿನ, ಇಷ್ಟು ಸಮಾನಚೂರ್ಣಂ ಮಾಡಿ ನಿಂಬೇಹಣ್ಣಿನ ರಸದಲ್ಲಿ ಮರ್ದಿಸಿ ಬಿಲ್ವಾದಿ ಅಂಜನ ಮಾಡುವುದು.

ಬಿಲ್ವಾದಿಲೇಹ್ಯ :—(ಆಮಾತಿಸಾರಕ್ಕೆ)—ಬೆಲ್ಲವತ್ತದಬೇರು ಹಲ ೩೦, ನಾಗುಳನೀರ ಕಷಾಯವಂ ಮಾಡಿ, ಎರಡು ಬಳ್ಳವ ನಿಲ್ಲಿಸಿಕೊಂಡು ಮೂವತ್ತು ಹಲ ಹಳೆಯ ಬೆಲ್ಲವಂ ಹಾಕಿ ಶುಂಠಿ ಹಲ ೩, ಮೆಣಸು ಹಲ ೪, ಜೀರಿಗೆ ಹಲ ೨, ಜೇನುತುಪ್ಪವಾನ ೧, ಲೇಹ್ಯ ಪಾಕ.

## D 1400

ಬೆಳ್ಳಿಭಸ್ಮಕ್ಕೆ ಯೋಗ :—ಮಣಿಸಿಲೆ ೨ ತೂಕ, ಗಂಧಕ ೧ ತೂಕ, ಇವಂ ತೊಗರಿ ಕಟ್ಟಿನಲ್ಲಿ ಮರ್ದಿಸಿ ಬೆಳ್ಳಿತಗಡಿಗೆ ಲೇಪವ ಮಾಡಿ, ಮರಳಿ ಮರಳಿ ೧೦ ಪುಟವನಿಕ್ಕುವುದು. ಅದು ಭಸ್ಮವಾಗುವುದು.

## D 1400

ಭೇದಿಜ್ವರಾಂಕುಶ :—ಬಿಳುಗಾರ, ರಸ, ಗಂಧಕ, ಇವು ಮೂರನ್ನೂ ಅಮುಕಟ್ಟಿಸುವುದಕ್ಕೆ ಸಮಜೇಪಾಳ, ಎರಡು ತೂಕ ಓಮ, ಸೈಂಧವ ವರಾಹತೂಕ, ಇಷ್ಟನ್ನೂ ಕೂಡಿ ನಿಂಬೇಹುಳಿಯಲ್ಲಿ ಅರೆದು ಗುಳಿಗೆಯಂ ಮಾಡಿ ಒಂದನ್ನು ಅಲ್ಲದ ರಸದಲ್ಲಿಯಾಗಲೀ, ಬೆಲ್ಲದಲ್ಲಿಯಾಗಲೀ ಕೊಡುವುದು. ಪಥ್ಯ ಹುಗುಳಿಹಾಕಿದ ಗಂಜಿ ಕಾಸಿ ಕೊಡುವುದು.

## D 1370

ಮದನಕಾಮೇಶ್ವರೀಮಾತ್ರೆ :—ಕಸ್ತೂರಿ ಗ ೧ ತೂಕ, ಕುಂಕುಮದ ಹೂವು ಗ ೧ ತೂಕ, ಜಾಯಿಪತ್ರೆ ಗ ೨ ತೂಕ, ಲವಂಗ ೨ ತೂಕ, ಅಪಿನಿಮದ್ದು ಗ ೪ ತೂಕ, ಇಷ್ಟನ್ನೂ ಕರ್ಪೂರದ ನೀರಲ್ಲಿ ಅರೆದು ಮೆಣಸಿನ ತೋರ ಮಾತ್ರೆಯನ್ನು ಮಾಡಿ ಊಟಕ್ಕೆ ಮೊದಲೇ ತೆಗೆದುಕೊಂಡು ಒಂದುಗುಟುಕು ನೀರು ಕುಡಿಯುವುದು.

ಜಾಯಿಕಾಯಿ, ಜಾಯಿಪತ್ರೆ, ಲವಂಗ, ಲವಂಗದ ಚೆಕ್ಕೆ, ಏಲಕ್ಕಿ, ತುರಾಸಾನಿಸೊಪ್ಪು, ಅಜಮೋದ, ಕಸಕಸೆ, ಕೊಳವಳಿಕೆಯ ಬೀಜ, ಹಂಗರೆಬೀಜ, ಮದನಕಾಮೇಶ್ವರೀಬೀಜ, ಕಸ್ತೂರಿ, ಕುಂಕುಮದ ಹೂವು, ಎಲೆಮದ್ದು, ತ್ರಿಶೂಲಪತ್ರೆ, ಇಷ್ಟನ್ನೂ ಸಮಾನಂಗೊಂಡು ಚೂರ್ಣವಂ ಮಾಡಿ ಸಕ್ಕರೆಯನ್ನು ಬೆರೆಸಿ ತುಪ್ಪದಿಂದ ಕಲಸಿ ಕೊಳ್ಳಲು ವೀರ್ಯ ವೃದ್ಧಿ.

ಮದನಕಾಮೇಶ್ವರೀಗುಳಿಗೆ :—ಅನುಪಾನ ಹಸುವಿನ ನೊರೆಹಾಲು, ಸಕ್ಕರೆ ಸಹ ತೆಗೆದುಕೊಳ್ಳೆ ಸ್ತಂಭನ. ಜೇನುತುಪ್ಪದಲ್ಲಿ ಶ್ಲೇಷ್ಮಹರ. ಹಸುವಿನ ತುಪ್ಪದಲ್ಲಿ ವಾತಹರ. ಕಬ್ಬಿನ ಹಾಲಲ್ಲಿ ತ್ರಿದೋಷಹರ. ಲವಂಗದ ಹುಡಿಯಲ್ಲಿ ಬಹುಗ್ರಾಹಿ. ಸೂರ್ಯಕಾಂತಿ ಹೂವಿನ ರಸ, ಹಸುವಿನ ಹಾಲು ಸಹ ಸ್ತ್ರೀಯರಿಗೆ ಸ್ತಂಭನ. ಮದ್ದು ಮೆಲುವವನಿಗೆ ಬದನೇ ಬೇರಿನ ಚೂರ್ಣದಲ್ಲಿ ಒಂದು ಗುಳಿಗೆ ಕೊಟ್ಟು ಈ ಗುಳಿಗೆಪ್ರಮಾಣದ ಮದ್ದು ಮೆಲ್ಲುವುದರಲ್ಲಿ ತಗ್ಗಿಸಿ ಇಳಿಸಿಕೊಂಡು ಬಂದರೆ ದಿನ ೧೧ ಕ್ಕೆ ಮದ್ದು ಬಿಡುವುದು. ಇದನ್ನು ತೆಗೆದುಕೊಂಡವರಿಗೆ ಹುಳಿ ವರ್ಜ್ಯ. ಕೆಮ್ಮಿಗೆ—ಹಣ್ಣುಅಗಸೇಸೊಪ್ಪು, ನೆಲಗುಳ್ಳದ ಹೂವು, ಕೃಷ್ಣತುಳಸಿ, ಆಡುಸೋಗೆ, ಬಿಳುಗಾರ, ಯವಕ್ಷೀರ, ಹಿಪ್ಪಲಿ, ಇಷ್ಟನ್ನೂ ಸಮತೂಕ, ಆಡುಸೋಗೆಸೊಪ್ಪಿನ ರಸ, ಕೃಷ್ಣತುಳಸಿರಸದಲ್ಲಿ ಪಿಟ್ಟಗಟ್ಟಿ ರಸದಲ್ಲಿ ಮರ್ದಿಸಿ ಕೊಡುವುದು. ಕಾಸಕ್ಕೆ—ಎಕ್ಕೆಎಲೆ ನೂರು, ಸುಣ್ಣ ಒಂದುಸೇರು, ಪಂಚಾಕ್ಷರ ಪ್ರತ್ಯೇಕ ದುಡ್ಡುತೂಕ,

ಸುಣ್ಣ ಶೋಧಿಸಿಕೊಂಡು ಪಂಚಕ್ಷಾರ, ಪಂಚಲವಣ ಹುಡಿಮಾಡಿ ಸುಣ್ಣದಲ್ಲಿ ಬೆರೆಸಿ ಈ ಎಕ್ಕೆ ಎಲೆಗಳಿಗೆ ಲೇಪಿಸಿ ಮಡಿಕೆಯಲ್ಲಿ ತುಂಬಿ ಕಿರುಮಣ್ಣಿಗೋಡು ಗಜಪುಟ ಇಟ್ಟು ಭಸ್ಮವಂ ಮಾಡಿ ಹಸಿಶುಂಠಿರಸದಲ್ಲಿ ದೇಹವರಿತು ತೆಗೆದುಕೊಳ್ಳಲು ಗುಣ. ಕೃಷ್ಣತುಳಸಿ, ನೆಲಗುಳ್ಳದ ಸೊಪ್ಪು, ಆಡುಸೋಗೆಸೊಪ್ಪು ಈ ಮೂರನ್ನೂ ಕುಟ್ಟಿ ಪಿಟ್ಟಿಗಟ್ಟಿ ಹಿಪ್ಪಲಿ ಇರಿಸಿ ಈ ರಸದಲ್ಲಿ ಈ ಹಿಪ್ಪಲಿ ಬಿಳುಗಾರ ಸಹ ಕೊಡಲು ಮಕ್ಕಳ ಕೆಮ್ಮು, ಕಾಸ ಗುಣ.

## D 1370

ಮದನಕಾಮೇಶ್ವರೀಯೋಗ :—ಬೆಳದಕಿಲಬೇರು, ನೆಗ್ಗಿಲಬೇರು, ನೆಲದಾಳ, ಚಪ್ಪರ ಗೆಡ್ಡೆ, ಕೊಳವಳಿಕೆ, ಒಜೆ, ಉಮ್ಮತ್ತದ ಬೀಜ, ನಸುಗುನ್ನಿಬೀಜ, ಎಲವದ ಹಗಿನು, ಬೇವಿನ ಹಗಿನು, ಕಕ್ಕೆಕಾಯೊಳಗಿನ ಹಗಿನು, ಹೆಗ್ಗುಳ್ಳದ ಬೇರು, ಕಿರುಗುಳ್ಳದ ಬೇರು, ಎಕ್ಕೆಬೇರು, ಕೇದಗೆನೊಲೆ, ಆಲದ ಬೀಳು, ಕುರುಟಿಗೆಬೇರು, ಅಮರದ ಬಳ್ಳಿ, ಕಿರುಸಾಲೆಬೇರು, ಕಿರು ನೆಲ್ಲಿಯ ಬೇರು, ಹಿಟ್ಟಿಳಿಕನ ಬೇರು, ವಿಷ್ಣುಕ್ರಾಂತಿ, ಒಂದಲಗ, ಹೊನಗೊನ್ನೆ, ಅಳಲೇಕಾಯಿ, ತಾರೇಕಾಯಿ, ನೆಲ್ಲಿಯ ಚಟ್ಟು, ಶುಂಠಿ,ಹಿಪ್ಪಲಿ, ಮೆಣಸು,ಜಾಯಿಕಾಯಿ,ಜಾಯಿಪತ್ರೆ, ಲವಂಗ, ಕೊಗ್ಗಿಬೇರು, ತಪಸಿಯ ಬೇರು, ಎಲವದ ಗೆಡ್ಡೆ, ಹೊನ್ನಾವರೇಬೇರು, ದಾಳಿಂಬದ ಕಾಯಿ, ಬೆಲ್ಲವತ್ತದ ಕಾಯಿ, ಬೇಲದ ಹಣ್ಣು, ಹಿಡಿಹಿಡಿಕೆಬೀಜ, ಹಿಟ್ಟಿಳಿಕನ ಬೀಜ, ಹಂಗರಬೀಜ, ಹೊಂಗಾರೆಬೀಜ, ಉದ್ದು, ಎಳ್ಳು, ಕಡಲೆಬೇರು, ನೆಂತೆತವುಡು, ಭೂಸಕ್ಕರೆ, ಚಿತ್ರಮೂಲ, ಈ ೫೦ ಬಗೆಯನ್ನು ಸಮಾನಂಗೊಂಡು ಚೆನ್ನಾಗಿ ಕುಟ್ಟಿ ಚೂರ್ಣವಂ ಮಾಡಿ ಇರಿಸಿ ಕೊಂಡು ತೆಗೆದುಕೊಂಬುದು. ಅನುಪಾನಕ್ರಮ—ವ್ಯಸನ ಇರುವವರಿಗೆ ಹಸುವಿನ ಹಾಲು ಸಕ್ಕರೆಯಲ್ಲಿ ಎಂಟುದಿನ ಕೊಳ್ಳಲು ವ್ಯಸನ ಉಂಟಾಗದು. ನಿಲುವಿಗೆ ಜೇನುತುಪ್ಪದಲ್ಲಿ ಕೊಡಲು ನಿಲುವುಸ್ತಂಭನ. ಪಕ್ಕಶೂಲೆಗೆ ಚಿಟವುಡಲದ ಎಣ್ಣೆಯಲ್ಲಿ ಕೊಡುವುದು. ಬಡ ವಾದ ದೇಹದವರಿಗೆ ಉದ್ದಿನ ಹಿಟ್ಟು, ಸಕ್ಕರೆ, ಬೆಲ್ಲ ಸಹ ಕೊಡುವುದು. ಶೈತ್ಯದೇಹಕ್ಕೆ ಗರುಗದ ರಸದಲ್ಲಿ ಕೊಡುವುದು. ಕಾಸಕೆಮ್ಮುಗಳಿಗೆ ಆಡುಸೋಗೆಸೊಪ್ಪಿನ ರಸದಲ್ಲಿ ಕೊಡು ವುದು. ರಕ್ತಪ್ರಮೇಹ, ಶುಕ್ಲಪ್ರಮೇಹ, ಮೂತ್ರಕೃಛ್ರ, ಬಹುಮೂತ್ರ, ಕಲ್ಲುಬೀಳು ವುದು ಇವೆಕ್ಕೆಲ್ಲಾ ಅಮರದ ಬಳ್ಳಿಯಲ್ಲಿ ೨೧ ದಿನ ಕೊಡುವುದು. ಮೇಹಾದಿಗಳಿಗೆ ಅಮ ರದ ಬಳ್ಳಿಯ ರಸದಲ್ಲಿಯೂ ಕೊಡುವುದು. ಗ್ರಹಣಿವ್ಯಾಧಿಗಳಿಗೆಲ್ಲಾ ಶುಂಠಿಯನ್ನು ಸುಟ್ಟು ಪುಡಿಮಾಡಿ ಹಾಕಿ ಕಟ್ಟುಮೊಸರಲ್ಲಿ ಕೊಡುವುದು. ದೀಪನವಿಲ್ಲದವರಿಗೆ ಬಿಸಿನೀರಲ್ಲಿ ಕೊಡುವುದು.

## D 1362

ಮದನಕಾಮೇಶ್ವರೀಯ -—ತ್ರಿಫಲೆ, ಜೇನುತುಪ್ಪ, ಪಚ್ಚೆಕರ್ಪೂರ, ಯಷ್ಟಿಮಧುಕ, ಬಿಳುಗಾರ, ಹೊಮ್ಮುಗಳು, ಬಿಳಿಯಗುರುಗುಂಜಿ, ಕಕ್ಕೆಯ ಹಗಿನು, ಇಂಗುಳದ ಹಗಿನು, ಇಷ್ಟನ್ನೂ ಕೂಡಿ ಮರ್ದಿಸಿ ಕರಡಿಗೆಯಲ್ಲಿ ಇರಿಸಿಕೊಳ್ಳುವುದು. ಬೇಕಾದಾಗ ಲಿಂಗಲೇಪನ ಮಾಡಿಕೊಳ್ಳುವುದು. ಇದು ಮದನಕಾಮೇಶ್ವರೀಯ.

## D 1359

ಮಹಾಜ್ವರಾಂಕುಶ :—ಪಾದರಸ, ಗಂಧಕ, ವತ್ಸನಾಭಿ ಈ ಮೂರನ್ನು ಸರಿಯಾಗಿ ಕೂಡಿ, ಆದರ ಸರಿ ಉಮ್ಮತ್ತದ ಬೀಜವಂ ಕೂಡಿ ಇಷ್ಟರ ಸಮಾನ ತ್ರಿಕಟುಕ, ಇವೆಲ್ಲವಂ ಒಂದುಜಾವ ನಿಂಬೇಹುಳಿಯಲ್ಲಿ ಮರ್ದಿಸಿ ಗುಂಜಿಪ್ರಮಾಣ ಗುಳಿಗೆಯಂ ಮಾಡಿ ಎರಡು ಗುಳಿಗೆಯಂ ಅಲ್ಲದ ರಸದಲ್ಲಿ ಕೊಳ್ಳೆ, ಏಕಾಹಿಕ, ದ್ವ್ಯಾಹಿಕ, ತ್ರ್ಯಾಹಿಕ, ಚಾತುರ್ಥಿಕ, ವಿಷಮ ಶೀತಜ್ವರ, ವಾತಶ್ಲೇಷ್ಮಜ್ವರ, ತ್ರಿದೋಷಜ್ವರ ಇವೆಲ್ಲಾ ವಾಣುವುವು. ಹಾಲೋಗರ ಪಥ್ಯ.

## D 1371 & D 1374

ಮಹಾಜ್ವರಾಂಕುಶಂ :—

> ಶುದ್ಧಸೂತಂ ರಸಂ ಗಂಧಂ ಧೂರ್ತಬೀಜಂ ತ್ರಿಭಿಃ ಸಮಮ್ ।
> ತಚ್ಚೂರ್ಣಾದ್ದ್ವಿಗುಣಂ ಯೋಷಂ ದೇಯಂ ಗುಂಜದ್ವಯಾಕೃತಿ ॥
> ಜಂಬೀರಕಸ್ಯಾಮರ್ದಂ ಚ ಆರ್ದ್ರಕಸ್ಯ ದ್ರವಂ ಯುತಮ್ ।
> ಮಹಾಜ್ವರಾಂಕುಶೋ ನಾಮ ಜ್ವರಾಣಾಮಂತಕೃದ್ಭವೇತ್ ॥
> ಏಕಾಹಿಕಂ ದ್ವ್ಯಾಹಿಕಂ ಚ ತ್ರ್ಯಾಹಿಕಂ ಚ ಚತುರ್ಥಿಕಮ್ ।
> ವಿಷಂ ವಾಪಿ ತ್ರಿದೋಷಘ್ನಂ ಹಂತಿ ಸತ್ಯಂ ನ ಸಂಶಯಃ ॥

ಟೀಕೆ :—ಶುದ್ಧರಸ, ಗಂಧಕ, ಇವುಗಳ ಸಮತೂಕ, ಉಮ್ಮತ್ತದ ಬೀಜ, ಈ ಮೂರರ ಇಮ್ಮಡಿ ತ್ರಿಕಟುಕ, ಇವಂ ಕೂಡಿ ನಿಂಬೆಯಹಣ್ಣಿನ ರಸದಲ್ಲಿ ಜಾವ ಮರ್ದಿಸಿ ಗುಂಜಾ ಪ್ರಮಾಣದ ಗುಳಿಗೆಯಂ ಮಾಡಿ ಒಣಗಿಸಿ ಬಲವರಿತು ಅಲ್ಲದರಸದಲ್ಲಿ ಕೊಡುವುದು. ಏಕಾಹಿಕ, ದ್ವ್ಯಾಹಿಕ, ಚಾತುರ್ಥಿಕ, ಶೀತಜ್ವರ, ತ್ರಿದೋಷಜ್ವರ, ಸರ್ವಜ್ವರ ಹರ. ಪಥ್ಯ ಹುರಿಗಂಜಿ.

## D 1370

ಮಹಾಸಂಜೀವಿನೀಗುಳಿಗೆ :—

> ವಿಷಂ ಗಂಧಕಯುಗ್ಮಂ ಚ ಟಂಕಣಂ ಚೈಕಭಾಗಕಮ್ ।
> ಹಿಂಗುಳಂ ದಶಭಾಗಂ ಚ ಲುಂಗತೋಯೇನ ಮರ್ದಯೇತ್ ॥
> ವಟಕಂ ಸರ್ಷಮಾತ್ರಂ ಚ ಆರ್ದ್ರತೋಯಾನುಪಾನಕಮ್ ।
> ನಾನಾಜ್ವರಂ ಶ್ವಾಸಕಾಸಮತಿಸಾರನಿವಾರಣಮ್ ॥
> ಕ್ಷಯಪಾಂಡುಛರ್ದಿಕೋಷ್ಣದಾಹಗರ್ಭಿಣಿಬಾಲಕಮ್ ।
> ನಾನಾದೋಷಹರಂ ಯೋಗಂ ಮಹಾಸಂಜೀವಿನೀರಸಮ್ ॥

ಟೀಕೆ :—ನಾಭಿ ೨ ತೂಕ, ಗಂಧಕ ೨ ತೂಕ, ಶುದ್ಧಿಮಾಡಿದ ಬಿಳುಗಾರ ೧ ತೂಕ, ಇಂಗುಳ ೧೦ ತೂಕ, ಇಷ್ಟನ್ನೂ ಮಾದಲದ ಹಣ್ಣು, ಯಾ ಕಾಯಿಯಾದರೂ ಸರಿ, ಇದರ

ರಸದಿಂ ಸಣ್ಣನಾಗಿ ಮರ್ದಿಸಿ ಸಾಸಿವೆಗಾತ್ರ ಗುಳಿಗೆಯನ್ನು ಮಾಡಿ (ಅಲ್ಲದ ರಸದಲ್ಲಿ ಕೊಡಲು ಎಲ್ಲಾ ಜ್ವರಗಳೂ, ಶ್ವಾಸ, ಕಾಸ, ಅತಿಸಾರ, ಕ್ಷಯ, ಕುಷ್ಠ, ಛರ್ದಿ, ಉಷ್ಣ, ದಾಹ, ಗರ್ಭಿಣೀ ರೋಗ, ಬಾಲಕರ ರೋಗ, ನಾನಾದೋಷಗಳೂ ಮಾಣುವವು )

## D 1400

ಮುರಾಂತಕಯೋಗ :—ಜ್ವರಕ್ಕೆ — ತ್ರಿಕಟುಕ, ತ್ರಿಫಲೆ, ಗಂಧಕ, ಬಿಳುಗಾರ, ಇಷ್ಟನ್ನೂ ಸಮಗೊಂಡು ಇದಕ್ಕೆ ಸರಿ ಜೇಪಾಳವನ್ನು ಕೂಡಿಸಿ ತೊಗರಿಪ್ರಮಾಣ ಗುಳಿಗೆಯಂ ಮಾಡಿ ಕೊಡುವುದು. ಪಥ್ಯ ಹುರಿಯಕ್ಕಿ ಗಂಜಿ.

## D 1372 & R 1373

ಮುಸ್ತಕಿಯಚೂರ್ಣ :—ಭದ್ರಮುಸ್ತೆ, ಕೋಷ್ಠ, ಭೂಸಕ್ಕರೆ, ತಾವರೆನಾಳ, ಅಷ್ಟ ಮಧುಕ, ಏಲಕ್ಕಿ, ಮುಡಿವಾಳ, ಲಾಮಂಚ, ಕರಿಯದ ಪಂಚಾಂಗ, ಜಲಗೊಟ್ಟಿ, ತುರುವೇ ಬೇರು, ಹೊನ್ನಾವರೆಬೇರಿನ ತಿಗಡು, ದ್ರಾಕ್ಷೆಹಣ್ಣು, ತ್ರಿಫಲೆ, ಶೋಧಿಸಿದ ಕಲ್ಲುಮದ, ಮರದ ರಸಿನ, ಬೇವಿನ ಅಗಿಲು, ಬೊಬ್ಬುಳಿ ಅಗಿಲು, ಅರಸಿನ, ಪತ್ರಕ, ಕುಂಬಳದ ಬೀಜ, ಇಷ್ಟು ಔಷಧಗಳನ್ನು ಸರಿಯಾಗಿ ಕೂಡಿ ಚೂರ್ಣವ ಮಾಡಿ ಗ ೩ ತೂಕವನ್ನು ಜೇನುತುಪ್ಪದಲ್ಲಿ ಕಲಸಿ ಮಜ್ಜಿಗೆಯಲ್ಲಿ ಕದಡಿ ಕೊಡುವುದು.

## D 1359

ಮೃತ್ಯುಂಜಯರಸ :—(ಸನ್ನಿಗೆ)—ವತ್ಸನಾಭಿ ಗ ೧ ತೂಕ, ನಾಗಭಸ್ಮ ಗ ೧ ತೂಕ, ರಸ ಗ ೨ ತೂಕ, ಇವಂ ಅರ್ಕಕ್ಷೀರದಲ್ಲಿ ಚೆನ್ನಾಗಿ ಮರ್ದಿಸಿ, ಗುಟಿಕೆಯಂ ಮಾಡಿ, ನವಸಾರ, ಬಿಳುಗಾರ, ಇಲಿಪಾಷಾಣ, ಇವಂ ಪ್ರತ್ಯೇಕ ಗ ೧ ನ್ನು ಕೂಡಿಸಿ ಚೂರ್ಣವಂ ಮಾಡಿ (ಮಡಕೆ)ಯಲ್ಲಿ ಆ ಗುಟಿಕೆಯನದರೊಳಗಿಕ್ಕಿ ಮುಚ್ಚಿಸಿ ಸಿರುಮಣ್ಣಗೊಂಡು ಲಘು ಪುಟವಿಕ್ಕಿ ಅವಂ ತೆಗೆದು ಚೂರ್ಣ ಮಾಡಿಸಿ ಸನ್ನಿಯಿಂದ ಮೈಮರೆತಿದ್ದವರಿಗೆ ಆಪಾದ ಮಸ್ತಕದಲ್ಲಿ ಸಶಸ್ತ್ರದಿಂ ಹೊಯ್ದು, ರಕ್ತಬಂದ ಠಾವಿಗೆ ಮಂಜಿಷ್ಠ, ನೆತ್ತಿಗೆ ಸಾಸಿವೆ, ಇಷ್ಟು ಔಷಧಿಯಂ ಕೊಂಡು ಕಾಯರಸಿನರಸವಾಗಲೀ,ಉಳ್ಳಿರಸವಾಗಲೀ ತೇದು ಹಚ್ಚುವುದು. ಒಡಲಿಗೆ ಶೈತ್ಯೋಪಚಾರ ಮಾಡುವುದು.

ಮೇಘನಾದರಸ —ಇಂಗಲೀಕ, ಬಿಳುಗಾರ, ತ್ರಿಕಟುಕ, ಸೈಂಧವ, ಲಾಳಕದ ತಿಗಡೆ, ಬಜೆ, ಔಡಲದ ತಿರುಳು, ಇಂಗು, ವಾಯಿವಿಳಂಗ, ಓಮ, ಅಜವೋದ, ಇವೆಲ್ಲ ಸಮಾನ ತೂಕ, ಇದರ ಸಮಾನ ಜೇಪಾಳದ ತಿರುಳು ಶುದ್ಧಮಾಡಿ ಹಾಕಿ ಕಲ್ವದಲ್ಲಿಕ್ಕಿ ನಿಂಬೇಹಣ್ಣಿನ ರಸದಲ್ಲಿ ಮರ್ದಿಸಿ ಗುಂಜಾಪ್ರಮಾಣ ಗುಳಿಗೆಯಂ ಮಾಡಿ ಬೆಲ್ಲ ಬಿಸಿನೀರಲ್ಲಿ ಕೊಳ್ಳೆ ಆಮ ರಕ್ತ, ದುರ್ಬಲತೆ, ಕಾಮಾಲೆ, ವಾತ, ಪಿತ್ತ, ಕೆಮ್ಮು, ಕೃಮಿಗಳು, ಜಲೋದರ, ಮಹೋದರ, ಮಂದಾಗ್ನಿ ಎಲ್ಲಾ ಮಾಣುವವು. ಇದು ಮೇಘನಾದರಸ.

## D 1372 & R 1373

**ಮೇಹಾರಿಚೂರ್ಣ:**—ಇದನ್ನು ಮಾಡುವ ಪ್ರಕಾರವು—ಅವರೆಯ ಬೀಜ, ಕೋಳವಳಿಕೆಯ ಬೀಜ, ಅಗುಳುಶುಂಠಿ, ಹೀರೇಬೀಜ, ಇವು ಪ್ರತ್ಯೇಕ ೧ ಪಲ ಮರ್ಯಾದೆಯಲ್ಲಿ ಚೂರ್ಣವಂಮಾಡಿ ನೆಲ್ಲಿಕಾಯಿರಸದಲ್ಲಿ ಮೂರು ದಿನಗಳು ಪಾಕವಂ ಮಾಡುವುದು. ಆ ಪಾಕವಂ ನೆರಳಲ್ಲಿರಿಸಿ ಚೂರ್ಣವಂ ಮಾಡಿ ಆ ಚೂರ್ಣದಲ್ಲಿ ಗ ೧ ತೂಕ ಜೇನುತುಪ್ಪವಂ ಕಲಸಿ ಕೊಡುವುದು. ಒಂದು ತಟ್ಟೆ ಮಜ್ಜಿಗೆಯನ್ನು ಕುಡಿಸುವುದು.

ರಸಭಸ್ಮ :—ರಸವಂ ತೊಳೆದು ಶುದ್ಧಿಯಂಮಾಡಿ ಗಂಧಕದ ಚೂರ್ಣದಲ್ಲಿ ಜಳಕಮಾಡಿ, ಇಟ್ಟಿಗೆಯ ಸಂಪುಟವ ಮಾಡಿ, ಕುಳಿತೋಡಿ, ವಾಲುಕಾಯಂತ್ರದಲ್ಲಿ ಬೆರಣಿಯ ಕುಳಿಯಲ್ಲಿ ೪ ಜಾವ ಪುಟವಿಕ್ಕೆ ರಸ ಭಸ್ಮವಹುದು. ಆ ರಸಭಸ್ಮ ೫ ತೂಕ, ಪಂಚಲವಣ ೨೫ ತೂಕ, ಗಂಧಕ ೫ ತೂಕ, ವೈಲುತುತ್ತು ೩ ತೂಕ, ಪಂಚಕ್ಷಾರ ೨೫ ತೂಕ, ಈ ಮೇರೆಯಲ್ಲಿ ರೋಗಿಯು ೬೩ ತೂಕವಂ ಕೊಳ್ಳುತ್ತಿರಲು, ವಾತಂ ಮಾಣ್ಗುಂ. ಪಾಂಡುವಾತಕ್ಕೆ—ವತ್ಸನಾಭಿ ೧ ತೂಕ, ಶುದ್ಧವಾದ ಬಿಳುಗಾರ ೨ ತೂಕ, ಮೆಣಸು ೩ ತೂಕ, ಶಂಖಭಸ್ಮ ೨೭ ತೂಕ, ಹಿಪ್ಪಲಿ ೬ ತೂಕ, ಕಹೀಎಲೆಯ ಸಮೂಲವಂ ತಂದು ರಸಂಗೊಂಡು, ಆ ರಸದಿಂ ಔಷಧಿಯಂ ಕಲಸಿ ಮೂರು ದಿನ ಮರ್ದಿಸಿ ಅಡ್ಡತೂಕ ಗುಳಿಗೆಯಂ ಮಾಡಿ ಬಿಳಿಎಲೆಯಲ್ಲಿ ಕೊಡುವುದು. ಒಂದುಕವಾಟಕಂ ಕೊಂಡೊಡೆ, ಮಂದಾಗ್ನಿ, ಶೂಲೆ, ಪಾಂಡುವಾತ, ಮೇಹ, ವಾತಶೂಲೆ ಇಷ್ಟೂ ಮಾಣುವುವು.

## D 1371 & R 1374

ರಾಜಲಕ್ಷ್ಮೀ ರಸ :—ಗಂಧಕ, ಸೀಸ, ಅಭ್ರಕ, ತುತ್ತ, ಲೋಹ, ವಿಷ, ತಾಳಕ, ಕಕುಭ, ಮಣಿಸಿಲೆ, ಇಂಗಲೀಕ, ತವರ, ಜಾಪಾಳ ಇವಂ ಕಲ್ವದಲ್ಲಿ ಮರ್ದಿಸಿ, ಲೋಳಿಸರ ಇಲ್ಲವೆ ಲೊಕ್ಕಿಯರಸ, ತ್ರಿಕಟುಕಕಷಾಯ, ವಕ್ರಮೂಲದರಸ, ಬಜೆಯ ಕಷಾಯ ಇವುಗಳಲ್ಲಿ ಪ್ರತ್ಯೇಕ ಏಳು ಭಾವನೆಯಂ ಭಾವಿಸಿ ಸೂರ್ಯಪುಟದಿಂದ ಒಣಗಿಸಿ ಮರ್ದಿಸುತ್ತಾ, ಗುಳಿಗೆಯಮಾಡಿ, ಗಾಜಿನ ಕುಪ್ಪಿಗೆಯಲ್ಲಿ ಇಟ್ಟು, ಎಕ್ಕೆಯ ಹಾಲನೆರೆದು ಆರಿಸಿ, ವಾಲುಕಾಯಂತ್ರದಲ್ಲಿ ಇಕ್ಕಿ..... ...ಯಲ್ಲೂ ೨೪ ಜಾವ ಇಟ್ಟಿದ್ದು, ಶೀತಳವಾದಾಗ ತೆಗೆದು ಒಂದು ಗುಂಜಿ ತೂಕವನ್ನು ಆಲದರಸದಲ್ಲಿ ಕೊಡಲು ಸರ್ವಜ್ವರಹರ. ತ್ರಿಕಟುಕ, ಚಿತ್ರಮೂಲದ ರಸದಲ್ಲಿ ಸನ್ನಿಪಾತಹರ. ಜೇನುತುಪ್ಪ, ಸೈಂಧವಲವಣ, ಹಿಪ್ಪಲಿಯಲ್ಲೂ ಕೊಡಲು ಶ್ವಾಸ, ಕಾಸ, ಕ್ಷಯ ಹರ. ನಿಂಬೆಯಹಣ್ಣು, ಸಕ್ಕರೆ, ಸೈಂಧವಲವಣದಲ್ಲಿ ಕೊಡಲು, ಮಂದಾಗ್ನಿ ಹರ. ಪಥ್ಯ ನೆಲ್ಲೋಗರ, ಹಾಲು, ಮೊಸರು, ಮಧುರಾಹಾರ. ಶೈತ್ಯೋಪಚಾರ ಒಳ್ಳೆಯದು. ಇದು (ರಾಜಲಕ್ಷ್ಮೀ) ರಸ.

## D 1359

ರಾಮಬಾಣಚೂರ್ಣ :—(ಅತಿಸಾರಕ್ಕೆ)—ಅಪಿನಿ ೨ ತೂಕ, ಜಾಯಿಕಾಯಿ ೨ ತೂಕ, ಕಸಕಸೆ; ತೊರೆಸಾಣಿಹೂ, ಲವಂಗ, ಹಿಪ್ಪಲಿ, ಜಾಯಿಪತ್ರೆ, ಭಂಗಿ, ಇವೆಲ್ಲವು ಒಂದೊಂದು

ತೂಕ, ಇವೆಲ್ಲವಂ ಪುಡಿಮಾಡಿ ದಾಳಿಂಬದ ಕಾಯ ಓಟೆಯಲ್ಲಿ ತುಂಬಿ ಅದರ ಬಾಯ್ ಮುಚ್ಚಿ, ಮೇಲೆ ಕೆಮ್ಮಣ್ಣು ಮೆತ್ತಿ ಪುಟವಿಕ್ಕಿ ತೆಗೆದು ಚೂರ್ಣಂ ಮಾಡಿ ಉಚಿತಾನುಸಾರ ಅನುಪಾನದಿಂ ಕೊಡಲು ಸಮಸ್ತಾತಿಸಾರ ಮಾಣ್ಗುಂ. ಇತಿ ರಾಮಬಾಣಚೂರ್ಣ.

## D 1370

ರಾಜಯೋಗಪಳದ್ಯ :—

ಧಾನ್ಯಂ ದೀಪ್ಯಕಸರ್ಷಪಂ ಚ ಲವಣಂ ದಾಳಿಂಬಧಾತ್ರೀಫಲಂ
ಜೀರಂ ರಾಮಠಪಂಚಕೋಲಲವಣಂ ಚಾಚೂರ್ಣ್ಯ ಸಾಮ್ಯಂ ತಥಾ ।
ಗೋತಕ್ರಂ ಸಹಮಿಶ್ರಿತಂ ಹರತು ನಾನಾಮೂಲವಾತಘ್ನಕಂ
ಯೋಗಂ ರಾಜಪಳದ್ಯಮದ್ಯ ಮನುಜಃ ಭೋಜ್ಯಂ ಚ ಸೇವ್ಯಂ ತಥಾ ॥

ಕೊತ್ತಮಲ್ಲಿ, ಓಮ, ಸಾಸಿವೆ, ಸೈಂಧವಲವಣ, ದಾಳಿಂಬದ ಕಾಯಿ, ನೆಲ್ಲಿಚಟ್ಟು, ಶುಂಠಿ, ಬಿಡುಲವಣ, ಇಷ್ಟನ್ನೂ ಸಮಭಾಗ ಚೂರ್ಣಮಾಡಿ ಇರಿಸಿಕೊಂಡು ಹಸುವಿನ ಮಜ್ಜಿಗೆಯಲ್ಲಿ ಕದಡಿ ಪಳದ್ಯವ ಕಾಸಿ ಊಟಮಾಡುವಾಗ ಮೊದಲು ಪಳದ್ಯವಂ ಬಿಟ್ಟು ಕೊಂಡು ಉಣ್ಣಲು ಸಪ್ತಧಾತುವಿನಿಂದ ಹುಟ್ಟಿದಂಥಾ ವಾಯು ಕೆಡುಗು. ದೇಹದೊಳಗೆ ಇದ್ದ ಸಮಸ್ತದೋಷ, ಅರುಚಿ, ಹೊಟ್ಟೆಶೂಲೆ, ಆಮ, ಅತಿಸಾರ, ಮೊದಲಾದ ವ್ಯಾಧಿ ಮಾಣ್ಗುಂ. ಇದು ರಾಜಯೋಗಪಳದ್ಯ. ಸಮಸ್ತವ್ಯಾಧಿಗಳಿಗೆಲ್ಲಾ ಒಳ್ಳೆಯದು.

## D 1372 & R 1373

ರೋಗಹತಿಲೋಹರಸ :—ಅಯಃಕಾಂತದ ಭಸ್ಮ, ಗಂಧಕ, ರಸ, ಇವು ಮೂರು ಸೇರಿಸಿ ಇವುಗಳ ಸರಿ ಇಂಗಲೀಕವನಿಕ್ಕಿ ಲೋಳಿಸರದ ರಸದಲ್ಲಿ ಮೂರು ದಿನಗಳು ಮರ್ದಿಸಿ ಮುದ್ದೆಯಂ ಮಾಡಿ, ಔಡಲದ ಹಣ್ಣೆಲೆಯಲ್ಲಿ ಪೊಟ್ಟಣವಂ ಕಟ್ಟಿ ಧಾನ್ಯರಾಶಿಯೊಳು ೨೧ ದಿವಸ ಹೂಳಿ ಇರಿಸಿ ತೆಗೆದು ಲೋಳಿಸರಧ ರಸದಲ್ಲಿ ಮರ್ದಿಸಿ ಚಿತ್ರಮೂಲದ ರಸ, ತ್ರಿಕಟುಕದ ಕಷಾಯ, ತ್ರಿಫಲೆಯ ಕಷಾಯ ಇವುಗಳಲ್ಲಿ ಬೇರೆಬೇರೆ ಮರ್ದಿಸಿ ೩೦ ಪುಟವಂ ಕೊಡುವುದು. ಮೊದಲು ೭ ದಿನಪರ್ಯಂತರ ಒಂದೊಂದು ಗುಂಜಿಯ ತೂಕವಂ ಕೊಡುವುದು. ಎರಡನೆಯ ಸಪ್ತಕ್ಕೆ ೨ ಗುಂಜಿಯ ತೂಕವಂ ಕೊಡುವುದು. ೩ ನೇ ಸಪ್ತಕ್ಕೆ ೩ ಗುಂಜಿಯ ತೂಕವಂ ಕೊಡುವುದು, ೪ ನೇ ಸಪ್ತಕ್ಕೆ ೪ ಗುಂಜಿ ತೂಕವಂ ಕೊಡುವುದು. ೫ ನೇ ಸಪ್ತಕ್ಕೆ ೫ ಗುಂಜಿ ತೂಕವಂ ಕೊಡುವುದು. ೬ ನೇ ಸಪ್ತಕ್ಕೆ ೬ ಗುಂಜಿ ತೂಕವಂ ಕೊಡುವುದು. ೭ ನೇ ಸಪ್ತಕ್ಕೆ ೭ ಗುಂಜಿತೂಕವಂ ಕೊಡುವುದು. ಈ ಮರ್ಯಾದೆಯಿಂದ ಜೇನುತುಪ್ಪ, ತ್ರಿಫಲೆ ಚೂರ್ಣದಲ್ಲಿ ಕೊಡಲು ಒಳ್ಳೆಯ ಫಲಿತ. ಸ್ತಂಭನವಹುದು ರೋಗಗಳೆಲ್ಲಾ ಹೋಗುವುವು. ರಸಯೋಗ ಸರ್ವಥಾ ತಪ್ಪದು. ಪಾಂಡುಕಾಮಾಲೆ, ಶೋಫ, ಗುಲ್ಮ, ಇವಕ್ಕೆ—ದಂತೀಕಷಾಯ, ತ್ರಿಕಟುಕ, ತ್ರಿಫಲೇಕಷಾಯದಲ್ಲೂ ಕೊಡುವುದು. ಚಿತ್ರಮೂಲದ ರಸದಿಂ ಇಂಗು, ಗರುಗದ ರಸದಲ್ಲಿ ಕೊಡಲು, ಹೊಟ್ಟೆಯುಬ್ಬರ, ಸರ್ವಶೂಲೆಗಳು

ಮಾಣುವವು. ಬಾಗುಂಜಿಯ ಬೀಜದಲ್ಲಿ ಕೊಡಲು ಶ್ವಾಸ ಕಾಸ ಮಾಣ್ಗುಂ. ಬೆಳ್ಳುಳ್ಳಿ, ಚಿತ್ರಮೂಲದ ರಸದಲ್ಲಿ ಕೊಡಲು ಅಷ್ಟವಿಧಧನುರ್ವಾತಂಗಳು ಮಾಣುವವು. ಇಂತೀ ರೋಗಹತಿಲೋಹರಸ.

## D 1359

ಲಘುಜ್ವರಾಂಕುಶ :—ರಸ, ಗಂಧಕ, ನಾಭಿ, ಈ ಮೂರು ಸಮಾನತೂಕ, ಈ ಮೂರರ ಸಮಾನ ಉಮ್ಮತ್ತದಬೀಜ, ಹಿಯ್ಯವಳಿತೂಕ ೧೨, ಕಟುಕರೋಹಿಣೀರಸದಲ್ಲಿ ಮರ್ದನೆ.

## D 1370

ಲವಂಗಾದಿಚೂರ್ಣ :—

ಲವಏಲಕಣಂ ತವಯಷ್ಟಿಸಿತದ್ವಿಗುಣಂ ತ್ರಿಗುಣಂ ಸರಿವ್ಯಾಧಿಹರವುಗ್ ।
ಪಿಬ ಗೋಪಯಸಾ ನವನೀತಯುತಂ ಕ್ಷಯಕಾಮಿಲಪಿತ್ತಶಿರೋಭ್ರಮ
ಕಾನ್ ॥

ಲವಂಗ ಗ ೧ ತೂಕ, ಏಲಕ್ಕಿ ಗ ೨ ತೂಕ, ಹಿಪ್ಪಲಿ ಗ ೩ ತೂಕ, ತವಕ್ಷೀರ ಗ ೪ ತೂಕ, ಯಷ್ಟಿಮಧುಕ ಗ ೫ ತೂಕ, ಇಷ್ಟು ಚೂರ್ಣವಂ ಮಾಡಿ ಸಕ್ಕರೆ ಗ ೧೨ ತೂಕ ವನ್ನು ಬೆರೆಸಿ, ಹಸುವಿನ ಹಾಲು ಬೆಣ್ಣೆಯಲ್ಲಿ ತೆಗೆದುಕೊಳ್ಳಲು, ಕ್ಷಯ, ಕಾಮಾಲೆ, ಪಿತ್ತ, ಶಿರೋಭ್ರಮೆ, ಇನಿತು ವ್ಯಾಧಿಗಳ ಹರ.

## D 1361 & R 1366

ಲಾಕ್ಷಾದಿತೈಲ :—ಅರಗಿನ ರಸ, ಸಮವಾದ ಎಣ್ಣೆ, ನಾಲ್ಕುಮಡಿ ಹಿರಿಯಮದ್ದು, ಅರಸಿನ, ದೇವದಾರು, ರೇಣುಕ, ಚಂಗಲಕೋಷ್ಠ.........[1]ನಗೆಡ್ಡೆ, ಶ್ರೀಗಂಧ, ಹೆಗ್ಗುರುಟಿಗೆ, ಕಟುಕರೋಹಿಣಿ, ರಾಸ್ನೆ, ವಾಯಿವಿಳಂಗ, ಯಷ್ಟಿಮಧುಕ, ಇವುಗಳಿಂದ ಅಟ್ಟತೈಲ, ವಾತಕ್ಕೆ, ಉನ್ಮಾದಕ್ಕೆ, ಗರ್ಭಿಣಿಗೆ, ಸರ್ವವ್ಯಾಧಿಗಳಿಗೂ ಒಳ್ಳೆಯದು.

## D 1371 & R 1374.

ಲೋಹಭಸ್ಮ:—ಇದನ್ನು ಮಾಡುವಕ್ರಮ—ಅರಹುಡಿಯನ್ನು ಅಂಬಿಲದಲ್ಲಿ ತೊಳೆದು ಅತ್ತಿಯ ತಿಗಡಿನ ರಸದಲ್ಲಿ ಆಹುಡಿ ಮುಳುಗುವ ಹಾಗೆ ಹಾಕಿ ಸೂರ್ಯಪುಟದಲ್ಲಿರಿಸಿದರೆ ಆ ಅರಹುಡಿ ಭಸ್ಮವಹುದು. ಆ ಭಸ್ಮವ ನೀರಿನ ಮೇಲೆ ಹಾಕಿದರೆ ತೇಲುವುದು. ಇದು ಭಸ್ಮಪರೀಕ್ಷೆಯ ಕ್ರಮ. ಈ ಭಸ್ಮಕ್ಕೆ ತ್ರಿಫಲೆ, ತ್ರಿಕಟುಕ, ಗಂಟುಭಾರಂಗಿ, ವಾಯಿವಿಳಂಗ, ಇವಂ ಚೂರ್ಣಮಾಡಿ ಈ ಚೂರ್ಣ ಒಂಮ ಪಾಲು ಆ ಭಸ್ಮ ಒಂದುಪಾಲು, ಕೂಡಿ ಕಲಸಿ ಆ ರಸದಲ್ಲಿ ಮರ್ದಿಸಿ ಗುಳಿಗೆಯಂ ಮಾಡಿ ಆ ಗುಳಿಗೆಯನ್ನು ಜೇನುತುಪ್ಪದಲ್ಲಿ ಮೇಳನ ಮಾಡಿಕೊಳ್ಳಲು ಸರ್ವವ್ಯಾಧಿಹರ.

---

[1] ಹಿರಿಯಮದ್ದಿನ.

## D 1359

ವಜ್ರಕವಾಟ :—(ಅತಿಸಾರಕ್ಕೆ)—ಜಾಯಿಕಾಯಿ, ಜಾಯಿಪತ್ರೆ, ತೊರೆಸಾಣಿಬೇರು, ಕಸಕಸೆ, ಅಜವೋದ, ಹಿಪ್ಪಲಿ, ಎಲೆಮದ್ದು, ಭಂಗಿಯಸೊಪ್ಪು, ಇವನ್ನು ಪ್ರತ್ಯೇಕ ಸಮಾನ ವಾಗಿ ತೂಗಿಕೊಂಡು ಚೂರ್ಣವಂ ಮಾಡಿ, ದಾಳಿಂಬದ ಮುತ್ತಿದ ಕಾಯಂ ತಂದು ಮೇಲೆ ಬಟುವಾಗಿ ಚಿಪ್ಪು ಕೊಯ್ದುಮಡಗಿ ಒಳಗೆ ಇದಂ ತೆಗೆದು ಈ ಔಷಧವಂ ತುಂಬಿ ದಾಳಿಂಬದ ಬಟುವಾಗಿ ಕೊಯ್ದುದಂ ಇದ್ದಂತೆ ಮಡಗಿ ಸಾವಡೆಗೆ ಕೈಮಣ್ಣಂ ತೊಡೆದು ಸುತ್ತಿ ಕೆಮ್ಮಣ್ಣು ಸಿರುಮಣ್ಣುಗೊಂಡು ಹತ್ತು ಬೆರಣಿಯಲ್ಲಿ ಪುಟ ಹಾಕಿ ತೆಗೆದು ಕೊಂಡು ಸಿರುಮಣ್ಣು ತೆಗೆದು ಕಾಯನ್ನು ಔಷಧದ ಸಂಗಡ ಅರೆದು ಕಟ್ಟುವೊಸರು, ಜೇನುತುಪ್ಪದಲ್ಲಿ ಕೊಡಲು ಎಲ್ಲ ಅತಿಸಾರ ತೀರ್ಗುಂ.

## D 1372 & R 1373.

ವಜ್ರಕ್ಷಾರ :—ವಜ್ರಗಳಿಯ ಕೊಂಬು, ಎಕ್ಕೆ, ಉಮ್ಮತ್ತ, ಗದುಗು, ಉತ್ತರಾಣಿ, ಎರಡುಗುಳ್ಳ, ಆಣಿಲೆ, ನೆಲವಳಿ, ಚಿತ್ರಮೂಲ, ಇವು ಸಮೂಲ, ಹುಣಸೆಯ ಹುರುಪಲು, ಬಿಳಿಯ ತರಗು, ಉಲಿಗನ ಸೊಪ್ಪು, ಅಡುಸೋಗೆ, ಇವಂ ಸಮಾನಂಗೊಂಡು, ಸುಟ್ಟು ಆ ಬೂದಿಯಂ ನೀರಲ್ಲಿ ಕಲಸಿ, ಆನೀರಂ ಶೋಧಿಸಿ ತೆಗೆದುಕೊಂಡು, ಅದರೊಳಗೆ ಪಂಚಲವಣ ವನ್ನು ಕೂಡಿ ಇಡುವುದು. ತ್ರಿಕಟುಕ, ಇಂಗು, ಉಳ್ಳಿಯಂ ಕೂಡಿ ಅಡುವದು. ಸಮಸ್ತ ಶೂಲೆ, ಮಂದಾಗ್ನಿ, ಅಜೀರ್ಣಂಗಳಿಗೆ ಕೊಡಲು ಮಾಣುವುವು. ಇದು ವಜ್ರಕ್ಷಾರ.

## D 1400

ವಡಬಾನಲಚೂರ್ಣಕ್ಕೆ ಯೋಗ :—ಸೈಂಧವಲವಣ ೧ ತೂಕ, ಕಲ್ಲುಪ್ಪು ೧ ತೂಕ, ಯವಕ್ಷಾರ ೨ ತೂಕ, ಕರಿಉಪ್ಪು ಅರ್ಧಸೇರು, ಗಾಜುಲವಣ ಅರ್ಧಸೇರು, ಉತ್ತರಣಿ ಸಮೂಲ, ಚಿತ್ರಮೂಲಸಮೂಲ, ಈ ಎರಡಂ ಸುಟ್ಟು ಬೂದಿಯಂ ಮಾಡಿ ಅಗಣಿಯಲ್ಲಿ ಕಲಸಿ ಆ ಗಡಿಗೆಯ ಮುಚ್ಚಲು ಉಪ್ಪುಬಹುದು, ಆ ಉಪ್ಪು ಅರ್ಧಸೇರು, ಗಂಧಕ ನಾಲ್ಕು ಅಕ್ಕಿ ತೂಕ ಇಷ್ಟನ್ನೂ ಕುಟ್ಟಿ ಸಣ್ಣನಾಗಿ ಮಾಡಿ ಗರುಗದ ರಸದಲ್ಲಿ ಮೂರುದಿನ ನೆನೆಯಿಕ್ಕಿ ಅದಂ ಗರುಗದ ರಸದಲ್ಲಿ ಇಂಗುವ ಹಾಗೆ ಅಡುವುದು.

## D 1372 & R 1373

ವಡವಾನಲಚೂರ್ಣ :—ಸೈಂಧವಂ, ಜೀರಿಗೆ, ಓಮ, ಹಿಪ್ಪಲಿ, ಶುಂಠಿ, ಎಂಬಿವಂ ಭಾಗೋತ್ತರವೃದ್ಧಿಯಾಗಿ ಹೆಬ್ಬಗೆಯಂ ಕೂಡಿಕೊಂಡು ಅವುಗಳೆಲ್ಲವುಗಳ ಸಮಾನಂ ಅಳಲೇಕಾಯನ್ನು ಕೂಡಿಕೊಂಡು, ಚೂರ್ಣವಾಗಿ ಪುಡಿಮಾಡಿ ಬಿಸಿನೀರಿಂ ಕುಡಿಯಲು ವೈಶ್ವಾನರಾಗ್ನಿಸಮಾನವೆಂದು ಹೇಳಲ್ಪಟ್ಟಿದೆ. ಪ್ರತ್ಯಕ್ಷವಾಗಿ ಇದು ವಡಬಾಲನಯೋಗ.

ವಡಬಾನಲರಸ:—ರಸ,ಗಂಧಕ,ತುತ್ತ, ವಿಷ,ತ್ರಿಫಲೆ, ತ್ರಿಕಟುಕ, ಜಾಯಿಫಲ, ಯಷ್ಟಿ ಮಧುಕ ಈ ಎಂಟನ್ನು ಪ್ರತ್ಯೇಕ ೧ ಹಣ ತೂಕದ ಲೆಕ್ಕದಲ್ಲಿ ಚೂರ್ಣವಂ ಮಾಡಿ ಲೋಳೆ

ಸರದ ರಸದಲ್ಲೂ ೩ ದಿನ ಮರ್ದಿಸಿ ಮತ್ತೆ ಸುಲಿದ ಟಂಕಣ ಗ ೨ ತೂಕವನಿಕ್ಕಿ ಲೋಳಿಸರದ ಹಳುಕನಿಕ್ಕಿ ಅಂಕೋಲೆಯ ಕೋಲೊಳಗೆ ಮೂರು ದಿನ ಮರ್ದಿಸಿ ೧ ಗ ಪಚ್ಚೆಕರ್ಪೂರವನಿಕ್ಕಿ ಲೇಸಾಗಿ ಮರ್ದಿಸಿ ಉದ್ದಿನ ತೋರ ಗುಳಿಗೆಯಂ ಮಾಡಿ ಕೊಡಲು ಜ್ವರಂಗಳು ಮಾಣುವುವು. ಇದು ವಡಬಾನಲರಸ.

ವರಾಹಾದಿಚೂರ್ಣ:—(ಪ್ರಮೇಹಕ್ಕೆ)—ನೆಲದಾಳ, ತುರುವೆ, ನೆಗ್ಗಿಲು, ಬಿಳುಡಕಿಲು, ಆಷಾಢಿಯ ಬೇರು, ಅಂಗುರದ ಬೇರು, ಇವು ಪ್ರತ್ಯೇಕ ಒಂದುಪಲ, ಎಲವದ ಚೂರ್ಣ ಪಲ ೨, ಇವಂ ವಸ್ತ್ರಗಾಳಿತವ ಮಾಡಿ ಗ ೩ ತೂಕ ಜೇನುತುಪ್ಪದಲ್ಲಿ ಕಲಸಿ ಕೊಡುವುದು.

ವಾಲ್ಮೀಕೋದನಚೂರ್ಣ :—(ಪ್ರಮೇಹಕ್ಕೆ)—ಹುತ್ತದೊಳಗೆ ಗುಗ್ಗಿಗಳ ಹಾಗೆ ಹುಟ್ಟಿರುವುದು (ಬೇಲದ ಕಾಯಿಯ ಹಾಗೆ) ಅದನ್ನು ತಂದು ಅವುಗಳ ಸಮ ಎಳ್ಳುಹಿಂಡಿ ಯನ್ನು ಸೇರಿಸಿ ಚೂರ್ಣವಂ ಮಾಡಿ ಜೇನುತುಪ್ಪದಲ್ಲಿ ಕಲಸಿ ಕೊಡುವುದು.

ವಿಷಮುಷ್ಟಿತೈಲ :—ಇಷ್ಟಿಬೀಜದ ರಸ ಕೊಳಗ ೧, ಅಂಬಿಲ ಕೊಳಗ ೧, ನಿಂಬೇ ಹಣ್ಣಿನ ರಸ ಕೊಳಗ ೧, ಔಡಲದ ಎಣ್ಣೆ ಬಳ್ಳ ೧, ಎಳ್ಳೆಣ್ಣೆ ಬಳ್ಳ ೨, ಕಲ್ಲನಿಂಬೇಬೀಜದ ಚೂರ್ಣ ೧೨ ಪಲ, ಚಿತ್ರಮೂಲ, ತಪಸಿ, ಎರಡು ಗುಳ್ಳದ ಬೇರು, ಗಣಿಜಲಿಬೇರು, ಯಷ್ಟಿ ಮಧುಕ, ತ್ರಿಕಟುಕ, ಇವಂ ಚೂರ್ಣ ಮಾಡಿ ತುಪ್ಪದಿಂ ಲೇಹ್ಯಮಾಡಿ ಸೇವಿಸೆ ಎಲ್ಲಾ ಕ್ಷಯ ಹರ.

## D 1373 & 1374

ವೀರಭದ್ರರಸಂ :—ನಾಭಿಯನ್ನು ಎಕ್ಕೆಯ ಹಾಲಿನಲ್ಲಿ ಇಪ್ಪತ್ತೊಂದು ದಿನ ಭಾವ ನೆಯ ಕೊಟ್ಟು ಆ ನಾಭಿ ಗ ೭ ತೂಕ, ಶುದ್ಧರಸ ೨ ತೂಕ, ಶುದ್ಧಗಂಧಕ ೩ ತೂಕ, ಇಂಗಲೀಕ ೨ ತೂಕ, ಇಷ್ಟನ್ನು ಎಕ್ಕೆಯಬೇರಿನ ಕಷಾಯದಲ್ಲಿ ಮರ್ದಿಸಿ ಗುಂಜಿಪ್ರಮಾಣ ಗುಳಿಗೆಯಂ ಮಾಡಿ, ಲೊಕ್ಕಿಯ ರಸ, ಅಲ್ಲದ ರಸ, ಬೆಳ್ಳುಳ್ಳಿಯ ರಸ, ಒಂದು ಗುಳಿಗೆಯಂ ಈ ರಸಗಳಲ್ಲಿ ಅರೆದು ಕೊಟ್ಟರೆ ಸನ್ನಿಪಾತಂಗಳು ಮಾಣುವುವು. ಇದು ವೀರಭದ್ರರಸ. ಇದಕ್ಕೆ ಪಥ್ಯ ಗಂಜಿ.

## D 1400

ವೀರಭದ್ರರಸ:—(ಪಿತ್ತಜ್ವರಕ್ಕೆ)—ರಸ ೧ ತೂಕ, ಖಪ್ಪರಿಗ ೨ ತೂಕ, ಇಲಿಪಾಷಾಣ ೧ ತೂಕ, ಇಷ್ಟನ್ನೂ ಸಮತೂಕವಂ ಕೂಡಿ, ಹಾಗಲದ ಎಲೆಯಲ್ಲಿ ಎರಡು ಜಾವ ಮರ್ದಿಸಿ ಹೆಸರುಕಾಳಷ್ಟು ಗುಳಿಗೆಯಂ ಮಾಡಿ, ಒಂದು ಗುಳಿಗೆಯನ್ನು ಅಲ್ಲದ ರಸದಲ್ಲಿ ಕೊಡುವುದು. ಪಥ್ಯ ಹಾಲೋಗರ.

ವೀರಭದ್ರರಸ :—ರಸ ಗ ೪ ತೂಕ, ಗಂಧಕ ೪ ತೂಕ, ಕೃಷ್ಣಾಭ್ರಕ ಗ ೪ ತೂಕ, ಇಷ್ಟನ್ನೂ ನೆಲದಾಳೆರಸದಲ್ಲಿ ಮರ್ದಿಸಿ ಅದನ್ನು ಕುಪ್ಪಿಗೆಯಲ್ಲಿ ತುಂಬಿ ಅದರ ಬಾಯಿಗೆ ಬೆಣ್ಣೆ

ಯನ್ನು ಬೆಟ್ಟಿ ಕಾಚುಸುಣ್ಣವನ್ನು ಬೆಟ್ಟಿ, ಏಳುಸಿರಿ ಮಣ್ಣುಗೊಂಡು ಆ ಕುಪ್ಪಿಗೆಯ ಮಣ್ಣು ತೆಗೆದು ಆ ಕುಪ್ಪಿಗೆ ಸಹ ಅರೆದು, ಅದರೊಳು ಸದ್ಯಕ್ಷಾರ, ಯವಕ್ಷಾರ, ಲೋಳಿಸರ, ಸಂವತ್ಸರಲವಣ, ಬಿಡುಲವಣ, ಓಮ, ಇವೆಲ್ಲವನ್ನು ಪ್ರತ್ಯೇಕ ಒಂದೊಂದು ಚೂರ್ಣ ಮಾಡಿ, ತ್ರಿಕಟುಕ, ತ್ರಿಫಲೆ, ಇಂಗಲೀಕ, ವಿಜಯ, ವಾಯಿವಿಳಂಗದ ಹಗಿನು, ಜೀರಿಗೆ, ಇವೆಲ್ಲವಂ ಪ್ರತ್ಯೇಕ ಚೂರ್ಣಮಾಡಿ, ಆ ರಸದೊಳಗೆ ಮಿಶ್ರಿತವಮಾಡೆ ಆ ರಸ ಸಿದ್ಧವಹುದು. ಅದಕ್ಕೆ ದೇವತಾಪೂಜೆಯನ್ನು ಮಾಡುವುದು. ಬ್ರಾಹ್ಮಣಭೋಜನಮಾಡಿಸಿ, ನಾಲ್ಕು ಗುಂಜಪ್ರಮಾಣವನ್ನು ತಾಮ್ರದ ಬಟ್ಟಲಲ್ಲಿ ಇರಿಸಿ ಹಿಪ್ಪಲಿ ಬಿಸಿನೀರಲ್ಲಿ ಕೊಡುವುದು. ವಾತ ಕ್ಷಯಂ ಕೆಡುವುದು. ಆ ರಸದೊಳಗೆ ಐದು ಹಣತೂಕ ಶಂಖಚೂರ್ಣ ಜೇನುತುಪ್ಪದಲ್ಲಿ ಕೊಡುವುದು. ಅತಿಸಾರ, ತ್ರಿದೋಷ, ಸನ್ನಿಪಾತ, ಶೀತ, ಗುಲ್ಮ, ಶೂಲೆ, ಸಂಗ್ರಹಣಿ, ಅಷ್ಟಾದಶ ಕುಷ್ಠ, ವಾಯುರೋಗಂಗಳಿಗೆ ಅನುಪಾನದಲ್ಲಿ ಕೊಡುವುದು. ಈ ಔಷಧಕ್ಕೆ ಇಪ್ಪತ್ತು ಬಗೆ ವ್ಯಾಧಿಗಳೆಲ್ಲಾ ಕೆಡುವುವು.

## D 1359

ಶಂಖಭಸ್ಮ :—ಶಂಖವನ್ನು ಕೊಲುಮೆಯಲ್ಲಿ ಮೂರು ಮೂರು ಬಾರಿ ಕಾಸಿ ನಿಂಬೇ ಹುಳಿಯಲ್ಲಿ ಅದ್ದಿದರೆ ಭಸ್ಮವಕ್ಕು.

## D 1391 & R 1396

ಶಂಖಭಸ್ಮ :—ಹುಣಸೆ ಸುಟ್ಟ ಬೂದಿಯೊಳಗೆ ಪಂಚಲವಣವಂ ಕೂಡಿ ನಿಂಬೇಹುಳಿಯಲ್ಲರೆದು ಕದಡಿ ಶುದ್ಧಶಂಖವುಂ ಕಾಸಿ ಅದರೊಳಗೆ ಅದ್ದಿದರೆ ಏಳುಬಾರಿಗೆ ಶಂಖ ಬೆಂದು ಭಸ್ಮವಹುದು. ಈ ಭಸ್ಮದ ನಾಲ್ಕರೊಳೊಂದು ಭಾಗ ತ್ರಿಕಟುಕ, ಇಂಗು, ತ್ರಿಕಟುಕ ಇಂಗಿನ ನಾಲ್ಕರೊಳೊಂದು ಭಾಗ ರಸ, ಗಂಧಕ, ವತ್ಸನಾಭಿ, ಇವೆಲ್ಲವಂ ನಿಂಬೇಹುಳಿಯಲ್ಲಿ ಮರ್ದಿಸಿ, ಏರಂಡಬೀಜದ ಪ್ರಮಾಣ ಗುಳಿಗೆಯಂ ಮಾಡಿ ಒಂದು ಗುಳಿಗೆಯಂ ಅಲ್ಲದ ರಸ ದಲ್ಲಿಕೊಳ್ಳಲು, ಸರ್ವಶೂಲೆ, ಪಂಚಗುಲ್ಮ, ಅರೋಚಕ, ಅಗ್ನಿಮಾಂದ್ಯ, ಅತಿಸಾರ, ಗ್ರಹಣಿ, ಇವೆಲ್ಲವೂ ಮಾಣುವುವು.

## D 1358

ಶಂಖವಟಕ :—ಹುಣಸೇಚೆಕ್ಕೆಯ ಬೂದಿ ೧ ಪಲ, ಪಂಚಲವಣ ೧ ಪಲ,...... ಮಾನಿಂಬೇಹುಳಿಯಲ್ಲಿ ಅರೆದು ಸಗಣಿಗದಡ ಮಾಡಿ ಕೆಂಡದ ಹಾಗೆ ಶಂಖವನ್ನು ಏಳು ಬಾರಿ ಕಾಸಿ ಆ ಸೆಗಣಿಗದಡದಲ್ಲಿ ಅದ್ದಿದರೆ ಕರಗುವುದು. ಆ ಶಂಖವನ್ನು ಚತುರ್ಥಾಂಶ ವತ್ಸನಾಭಿ ತೂಕ ೧, ಪಾದರಸ ಒಂದು ತೂಕ, ಗಂಧಕ ಗ೧ ತೂಕ ಇವೆಲ್ಲವ ಕೂಡಿ ಅಲ್ಲದ ರಸದಲ್ಲೂ ಏಳುಬಾರಿ ಬಿಲ್ವದೊಳು ಮರ್ದಿಸಿ ಎರಡು ಹಣ್ಣಿನ ಪ್ರಮಾಣ ಗುಳಿಗೆಯ ಮಾಡಿ ತುಪ್ಪದಿಂದ ಕಲಸಿ ಮೆಲ್ಲಲು ಶೂಲೆ, ಗುಲ್ಮ, ಮುಂತಾದ ರೋಗ ಹರ,

## D 1359

ಶೀತಗಜಾಂಕುಶ :—ಒಂದು ಭಾಗ ರಸ, ಎರಡು ಭಾಗ ನಾಭಿ, ಮೂರು ಭಾಗ ಮೈಲು ತುತ್ತ, ನಾಲ್ಕುಭಾಗ ಕಪ್ಪ, ಇವನ್ನು ಉಮ್ಮತ್ತದ ರಸದಲ್ಲಿ ಮರ್ದನೆ ಮಾಡಿ ಡೋಲಾ ಯಂತ್ರದಲ್ಲಿ ತಿರುಗಿಸಿ, ಒಂದು ಜಾವ ಇರಿಸಿ, ಚೂರ್ಣವಂ ಮಾಡಿ ಗುಂಜಾಪ್ರಮಾಣ ಚಿಲಿ ಕೀರೆರಸದೊಂದಿಗೆ ಕೊಟ್ಟರೆ ಶೀತಜ್ವರಗಳು ಮಾಣುವುವು. ಇದು ಶೀತಗಜಾಂಕುಶರಸ ವೆಂಬುದು.

## D 1372 & R 1373

ಶುಂಠಿಕುಂತಾರವೆಂಬ ಔಷಧಿ :—ಪಂಚಲವಣ, ಚಿತ್ರಮೂಲ, ಸೂರಣದ ಗೆಡ್ಡೆ, ಕ್ಷಾರ, ತ್ರಿಫಲೆ, ಜೀರಿಗೆ, ಓಮ, ಅಜಮೋದ, ಇಂಗು, ಶುಂಠಿ, ಚಪ್ಪರಓಮ, ಮೆಣಸು, ಹಿಪ್ಪಲಿ, ಬೆಳ್ಳುಳ್ಳಿ, ಕಣ್ಣಿಲೆ, ಹುಳುಕನ ಗೆಡ್ಡೆ, ಮಂಜಿಷ್ಠೆಯ ಬೇರು, ಮಂಗರವಳ್ಳಿ, ಜಾಪಾಳದ ಬೀಜ, ದಂತಿ, ತಿಗಡೆ, ಇವಂ ಧಾತಿಗಳ್ಳಿಯ ಹಾಲಲ್ಲಿ ೩ ದಿನ ಭಾವನೆಯಂ ಕೊಟ್ಟು, ಆಕಳ ಹಾಲಲ್ಲಿ ಅರೆದು, ಕಡಲೆತೋರ ಗುಳಿಗೆಯಂ ಮಾಡಿ, ಶೂಲೆಯಾದವರಿಗೆ ೧ ಗುಳಿಗೆ ತುಪ್ಪದಿಂ ಮರ್ದಿಸಿ ಕೊಡುವುದು. ಬಿಸಿನೀರಿಂ, ಓಮ, ವತ್ಸನಾಭಿ, ತುತ್ತ, ಕಡಲನಾಲಿಗೆ, ಹಿಪ್ಪಲಿಸಮೂಲ, ದ್ರಪಳೆ, ನವಸಾರ, ಇವಂ ಉಮ್ಮತ್ತದ ರಸದಲ್ಲಿ ಹಿಂಡಿಕೊಂಡು, ತೇದು ಅದರಲ್ಲಿ ಎಕ್ಕದ ಹಾಲನ್ನೂ ಕೂಡಿ ತೇದುದನ್ನು ಆವಾವ ಠಾವಿನ ನರಶೂಲೆಗೆ, ಕಪಾಲ ಶೂಲೆಯ ಠಾವಿಗೆ ಶಸ್ತ್ರವನಿಕ್ಕಿಸಿ ಆ ಔಷಧಿಯನಿಕ್ಕಲು ಶೂಲೆ ಮಾಣ್ಗುಂ.

ಶುಂಠ್ಯಾದಿಪ್ರಯೋಗ:—(ಮೂಲವ್ಯಾಧಿ, ಗುಲ್ಮ, ಮಂದಾಗ್ನಿಗೆ)—ಶುಂಠಿ, ಹಿಪ್ಪಲಿ, ಮೆಣಸು, ನಾಗಕೇಸರಿ, ಕಮಲಪತ್ರಿ, ಲವಂಗದ ಎಲೆ, ಏಲಕ್ಕಿ, ಎಂಬಿವಂ ಪುಡಿಮಾಡಿ ಕ್ರಮದಿಂ, ಪಿರಿಚೆಲ್ವುಟವಂ (?) ತುದಿಯಿಂದ ಮೊದಲುತನಕಂ ಇದಂ ಮೆಲ್ಲುವುದು. ಈ ಮದ್ದು ಸಮಾನ ಸಕ್ಕರೆಯೊಳ್ವೆರಸಿದುದು ಮೂಲವ್ಯಾಧಿ, ಮಂದಾಗ್ನಿ, ಗುಲ್ಮ, ಅರೋಚಕ, ಶ್ವಾಸ, ಊರ್ಧ್ವಶ್ವಾಸ, ಕೊರಳೊಳಗಾದ ಎದೆಯೊಳಗಾದ ಅಷ್ಟವ್ಯಾಧಿಯೊಳು ಒಳ್ಳೆಯದು. ಇದಂ ಶುಂಠ್ಯಾದಿಪ್ರಯೋಗವೆಂಬರು.

ಶುದ್ಧರಸವಟಿಕ :—ಶುದ್ಧವಾದ ಪಾದರಸ ಗ ೫ ತೂಕ, ಶುದ್ಧವಾದ ಸೂಜಿಕಲ್ಲು ಗ ೫ ತೂಕ, ಜಲಗೊಟ್ಟೆ ಗ ೫ ತೂಕ, ಬಿಳಿಯ ಗುರುಗುಂಜಿ ಗ ೫ ತೂಕ, ಬಿಳಿಯ ಗುರು ಗುಂಜಿಯ ತಿಗಡು, ಅವರೆಯ ಪಂಚಾಂಗ ೫ ತೂಕ, ಬೇಲದ ಅಗಿಲು ಗ ೫ ತೂಕ, ಇಷ್ಟು ಔಷಧಗಳಿಗೆ ಮೂರುಮಡಿ ಶುದ್ಧವಾದ ಸೀಸವನ್ನು ತೂಗಿಕೊಂಡು, ಆ ಪಾದರಸ ಮೊದಲಾಗಿರುವ ಔಷಧಗಳನ್ನು ಅಂಬಿಲದಲ್ಲಿ ೩ ದಿನ ಅರೆದು ಹಸಿಯರಸಿನದಲ್ಲಿ ೩ ದಿನ ಅರೆದು ನೆಲ್ಲಿಯಕಾಯ ರಸದಲ್ಲಿ ೩ ದಿನ ಅರೆದು ಗ ೧ ತೂಕದಲ್ಲಿ ಗುಳಿಗೆಯಂ ಮಾಡಿ, ನೆರಳಲ್ಲಿ ಒಣಗಿಸಿ, ಹೊಸಮಡಕೆಯಲ್ಲಿ ಇರಿಸಿ ಒಂದು ಗುಳಿಗೆಯಂ ಚೂರ್ಣವ ಮಾಡಿ ಜೇನುತುಪ್ಪದಲ್ಲಿ ಕಲಸಿ ಮಜ್ಜಿಗೆಯಲ್ಲಿ ಕೊಡುವುದು.

## D 1400

ಶೂಲಕುಠಾರಯೋಗ :—ಶುಂಠಿ, ಗಂಧಕ, ಬಿಳುಗಾರ, ರಸ, ಇವೆಲ್ಲವೂ ನಾಲ್ಕು ವರಾಹ ತೂಕ, ಜೇಪಾಳ ಗ ೧೨ ತೂಕ ಇಷ್ಟನ್ನು ಖಲ್ಲವ ಮಾಡಿ ಭರಣಿಯಲ್ಲಿ ತುಂಬಿ ಗುಂಜಿಪ್ರಮಾಣ ಗುಳಿಗೆಯಂ ಮಾಡಿ, ಬೆಲ್ಲದಲ್ಲಿ ಕೊಡುವುದು. ಪಥ್ಯ ಹಾಲೋಗರ. ಶೂಲೆಯಾದರೆ, ಉಳ್ಳಿಯಲ್ಲಿ, ಅಲ್ಲದರಸದಲ್ಲಿ ಕೊಡುವುದು. ಇದು ಭೇದಿಗೆ. ಜೇಪಾಳ ಗ ೮ ತೂಕ, ಶುಂಠಿ ಗ ೪ ತೂಕ, ಗಂಧಕ ೨ ತೂಕ, ಮೆಣಸು ಗ......ತೂಕ, ಬಿಳುಗಾರ ೧ ತೂಕ ಇವನ್ನು......[1]ರಸದಲ್ಲಿ ಮರ್ದಿಸಿ ಗುಂಜಾಪ್ರಮಾಣ ಗುಳಿಗೆಯಂ ಮಾಡಿ ಎರಡು ಗುಳಿಗೆಯನ್ನೂ ಹತ್ತು ಮೆಣಸನ್ನೂ ಕೂಡಿ ಪುಡಿಮಾಡಿ ತುಪ್ಪದಲ್ಲಿ ತೆಗೆದುಕೊಳ್ಳುವುದು. ಅನುಪಾನ ತಣ್ಣೀರು.

## D 13/1 & R 1374

ಶೂಲಗಜಾಂಕುಶರಸಂ :—ಪಾದರಸಂ ಗ ೩, ಟಂಕಣ ಗ ೨, ಗಂಧಕಂ ಗ ೫, ಮುಳ್ಳುಮುತ್ತುಗದ ಭಸ್ಮ ಗ ೧, ಜಾಪಾಳ ಗ ೪, ತಾಮ್ರದ ಭಸ್ಮ ಗ ೮, ಇಷ್ಟನ್ನೂ ಕೂಡಿ ಇಷ್ಟರ ಸರಿ ಎಳ್ಳುತೊಳೆದ ಭಸ್ಮ, ಹುಣಸೇಕ್ಷಾರ ಗ ೨, ಸೈಂಧವಲವಣ ಗ ೬, ಯವಕ್ಷಾರ ಗ ೨,ಬಿಡುಲವಣ ಗ ೧,ಸಂವತ್ಸರಲವಣ ಗ ೩, ಸಮುದ್ರಲವಣ, ಹಿಪ್ಪಲಿ ಗ ೩,ಇವು ಎಲ್ಲವೂ ಭಾಗಕ್ರಮದಲ್ಲಿ ಕೂಡಿಸಿ ಕಲ್ಪದಲ್ಲಿ ಇಕ್ಕಿ ನಿಂಬೆಯ ಹುಳಿಯಲ್ಲಿ ಏಳುಬಾರಿ ಮರ್ದಿಸಿ, ಗುಂಜಾಪ್ರಮಾಣ ಗುಳಿಗೆಯ ಮಾಡಿ ಅಲ್ಲದರಸದಲ್ಲಿ ಕೊಳ್ಳಲು ಸರ್ವಶೂಲೆ, ಪಂಚಗುಲ್ಮ, ಅರುಚಿ, ಎದೆಬಾವು, ಅಡ್ಡಗಡಿ, ಗ್ರಂಥಿ, ಎಂಟು ಉದರರೋಗಂಗಳು ಮಾಣುವುವು.

## D 1372 & 1373

ಶ್ವೇತಗುಂಜಾದಿವಟಕ:—ಇದನ್ನು ಮಾಡುವಕ್ರಮ—ಬಿಳಿಯ ಗುರುಗಂಜಿ ಗ ೧ ತೂಕ, ಶುದ್ಧವಾಧ ಸೂಜಿಕಲ್ಲು, ಶುದ್ಧವಾದ ಅಭ್ರಕ, ಶುದ್ಧವಾದ ಹಿಪ್ಪಲಿಗಟ್ಟಿ, ಶುದ್ಧವಾದ ಸೀಸ, ಚಿಲಗೋಟೆ, ಅಗುಳುಶುಂಠಿ ಇಷ್ಟು ಔಷಧಗಳನ್ನು ಪ್ರತ್ಯೇಕ ೬ ರ ಲೆಖ್ಖದಲ್ಲೂ ಕೂಡಿ ಇವೆಲ್ಲವುಗಳ ಸಮ ಬೇಲದ ಆಗಿಲಂ ಕೂಡಿಸಿಕೊಂಡು, ಬೊಬ್ಬುಳಿ, ನೇರಳೆ, ಬೇವು, ಮತ್ತಿ, ಇವಂ ಪ್ರತ್ಯೇಕ ಗ ಸರಿಯಾಗಿ ತೂಗಿಕೊಂಡು ಗಟ್ಟಿಯ ಮಡಕೆಯೊಳಗೆ ಹಾಕಿ, ಇದರ ನಾಲ್ಕು ಮಡಿ ನೀರನೆರೆದು ಬಿಸಲಲ್ಲಿರಿಸಿ ಆ ರಸದಿಂ ಬಿಳಿಗುರುಗಂಜಿ ಮೊದಲಾಗಿರುವ ಔಷಧಗಳನ್ನು ಮೂರುದಿನಗಳರೆದು ಒಂದು ತೂಕದ ಗುಳಿಗೆಯಂ ಮಾಡಿ ನೆರಳಲ್ಲಿ ಒಣಗಿಸಿ, ಮಡಕೆಯಲ್ಲಿರಿಸಿ ಒಂದು ಗುಳಿಗೆಯಂ ಚೂರ್ಣಮಾಡಿ, ಜೇನುತುಪ್ಪದಲ್ಲಿ ಕಲಸಿ ಮಜ್ಜಿಗೆಯಲ್ಲಿ ಕದಡಿ ಕೊಡುವುದು.

## D 1370

ಸಂಜೀವಿನೀಗುಳಿಗೆ:—ಇದಕ್ಕೆ ಅನುಪಾನ—ಶ್ರೀತುಳಸಿ, ಒಂದೆಲಗ, ಹೊಮ್ಮುಗಳು, ಸಹದೇವಿ, ಹಿಪ್ಪಲಿ ಈ ಮೂಲ, ಕೊತ್ತುಂಬರಿ, ಶುಂಠಿ, ಜೀರಿಗೆ, ಇವೆಲ್ಲವನ್ನು ಪಿಟ್ಟನಿಕ್ಕಿ,

[1] ಅಲ್ಲದ.

ಈ ರಸದಲ್ಲಿ ಸಂಜೀವಿನೀಗುಳಿಗೆ ಅರೆದುಕೊಂಡರೆ ಹದಿಮೂರು ಸನ್ನಿ ಹರ. ನವಜ್ವರಕ್ಕೆ ದೇಶಾವರಜೀರಿಗೆ, ಒಳ್ಳೆಜೀರಿಗೆ, ಶುಂಠಿ ಈ ಮೂರನ್ನೂ ಅರೆದು ಸಂಜೀವಿನೀಗುಳಿಗೆ ಕೊಳ್ಳೆ, ನವಜ್ವರ, ನಂಜುಗೂಡಿದ ಜ್ವರ ನಿವಾರಣ. ಛಳಿಜ್ವರಕ್ಕೆ ಕಾಡಗರುಗ, ಪರ್ಪಾಷ್ಟಕ, ವಿಷ್ಣುಕ್ರಾಂತಿ, ಜೀರಿಗೆ ಸಹ ಕಲ್ಕವ ಮಾಡಿ ತೆಗೆದುಕೊಳ್ಳೆ ನಿತ್ಯಛಳಿ, ಆಹಿಕ, ಚಾತುರ್ಥಿಕ ನಿವಾರಣ. ಮಾತ್ರೆ ಮದ್ದಿನ ಸೊಪ್ಪಿನ ರಸದಲ್ಲಿ ಮೂರುವರಾಹ ತೂಕ ಮದ್ದನ್ನು ನೆನೆಯಿಕ್ಕಿ ಒಂದು ದಿನವಿರಿಸಿ ಆ ಮೇಲೆ ಈ ರಸದಲ್ಲಿಯೇ ಸಂಜೀವಿನೀಗುಳಿಗೆಯನ್ನು ಮಾಡಿ ನೀರಲ್ಲಿ ತೇದು ಕೊಡಲು ಚಾತುರ್ಥಿಕಹರ. ಶಲಧಿವರ್ಜ್ಯ.

## D 1400

ಸಂಜೀವಿನೀಯೋಗ :—ಇಂಗಲೀಕ, ವತ್ಸನಾಭಿ, ಹಿಪ್ಪಲಿ, ಈ ಮೂರನ್ನು ಸಮ ಭಾಗವಂ ಮಾಡಿ ನಿಂಬೇಹಣ್ಣಿನ ರಸದಲ್ಲಿ ಅರೆದು, ಉದ್ದಿನ ಪ್ರಮಾಣ ಗುಳಿಗೆಯಂ ಮಾಡಿ ಆ ರಸದೊಳಿದಂ ಮಿಶ್ರಮಾಡಿ ಜೀರಿಗೆ, ಸಕ್ಕರೆ, ಹಿಪ್ಪಲಿಯಲ್ಲಿ ಕೊಟ್ಟರೆ, ತಾಪಜ್ವರ ಮಾಣ್ಗುಂ.

## D 1359

ಸಂಜೀವಿನೀರಸ :—(ತಾಪಜ್ವರಕ್ಕೆ)—ರಸ ೩ ತೂಕ, ಕಪ್ಪಲಿ ೨ ತೂಕ, ಮೆಣಸು ಗ ೧ ತೂಕ, ಇಂಗಲೀಕ ಗ ೧ ತೂಕ, ಸಹವಾಗಿ ಹಸುವಿನ ಬೆಣ್ಣೆ, ನಿಂಬೇಹಣ್ಣಿನ ರಸ, ಆಕೇಸರ ಸಹ ಎರಡು ಜಾವ ಮರ್ದಿಸಿ ಗುಂಜಾಪ್ರಮಾಣ ಗುಳಿಗೆಯಂ ಮಾಡಿ, ವಾತಜ್ವರಕ್ಕೆ ಹಿಪ್ಪಲಿ, ಜೇನುತುಪ್ಪದಿಂದ, ಪಿತ್ತಜ್ವರಕ್ಕೆ ಮತ್ತು ವಿಷಮಜ್ವರಕ್ಕೆ ಸಕ್ಕರೆ, ಜೇನುತುಪ್ಪ ದಿಂದ, ಶ್ಲೇಷ್ಮಜ್ವರಕ್ಕೆ ಹಿಪ್ಪಲಿ, ಬೆಲ್ಲ, ಜೇನುತುಪ್ಪ, ಇವುಗಳಿಂದ ಕೊಡುವುದು.

## D 1370

ಸಕಲರೋಗಕ್ಕೆ ಚೂರ್ಣ :—ಶುಂಠಿ, ಹಿಪ್ಪಲಿ, ಅಜಮೋದ, ಸೈಂಧವಲವಣ, ಕರಿ ಜೀರಿಗೆ, ಬಿಳಿಜೀರಿಗೆ, ಹೊಮ್ಮುಗಳು, ಸಂವತ್ಸರಲವಣ, ಸದ್ಯಕ್ಷಾರ, ಬೆಳ್ಳುಳ್ಳಿ, ಮೆಂತ್ಯ, ಇಷ್ಟೂ ಸಮಭಾಗ ಪ್ರತ್ಯೇಕ ಎರಡು ಎರಡು ತೂಕ, ನೆಲಬೇವು ೪ ವರಹ ತೂಕ, ಚಿತ್ರ ಮೂಲ ೪ ವರಹ ತೂಕ, ಇಷ್ಟನ್ನೂ ಸಮಾನ ಚೂರ್ಣವಂ ಮಾಡಿ, ಈ ಚೂರ್ಣವನ್ನು ಮೊದಲು ತುತ್ತಿನಲ್ಲಿ ಉಂಡರೆ ಶರೀರಶುದ್ಧಿಯಕ್ಕುಂ. ಆವ ರೋಗವು ಹೊಂದಿದರೂ ಗುಣ. ಸಕಲವ್ಯಾಧಿಹರ. ಈ ಚೂರ್ಣವನ್ನು ಎಣ್ಣೆಯಲ್ಲಿ ಕಲಸಿ ಕಜ್ಜಿಗೆ ತೊಡೆಯೆ ಕಜ್ಜಿ ಮಾಣ್ಗುಂ. ಈ ಚೂರ್ಣವನ್ನು ಹಾಲಲ್ಲಿ ಕಲಸಿ ಕೊಳ್ಳೆ ಶೂಲೆ ಮಾಣ್ಗುಂ. ಚೂರ್ಣವಂ ತುಪ್ಪದಲ್ಲಿ ಕಲಸಿ ಕೊಳ್ಳೆ ಹೆನ್ನೆತ್ತರು ಮಾಣ್ಗುಂ. ಈ ಚೂರ್ಣವಂ ಎಣ್ಣೆಯಲ್ಲಿ ಕಲಸಿ ಕೊಳ್ಳೆ ವಾತ ಶ್ಲೇಷ್ಮ ಮೊದಲಾದ ವ್ಯಾಧಿಗಳಿಗೆ ಒಳ್ಳೆಯದು. ಪಥ್ಯ ಹಾಲು ಅನ್ನ. ತುಪ್ಪ ಓಗರ ಒಳ್ಳೆಯದು. ಇದು ಸಿದ್ಧಾಂತ. ಓಮ ೧೨ ತೂಕ, ಜೀರಿಗೆ ೧೩ ತೂಕ, ತಿಗಡೆ ೧೪ ತೂಕ, ಚಿತ್ರಮೂಲ ೧೫ ತೂಕ, ಯವಕ್ಷಾರ ನಾಲ್ಕು ಗದ್ಯಾಣ ತೂಕ, ಸೈಂಧವ

ಲವಣ ಐದು ಗದ್ಯಾಣ ತೂಕ, ಇಂಗು, ಗರುಗ ಸಹ ಇವುಗಳ ಚೂರ್ಣವಂ ಮಾಡಿ ಮೆದ್ದು ಬಿಸಿನೀರ ಕುಡಿಯಲು, ಅಗ್ನಿವರ್ಧನ, ಗುಲ್ಮ, ಶೂಲೆ, ಗ್ರಂಥಿ, ಗ್ರಹಣಿ, ಕ್ಷಯ, ಮೊದಲಾದ ಸರ್ವವ್ಯಾಧಿ ಹರ, ಪಥ್ಯ ಹುಳಿ, ಶಲಧಿ ವರ್ಜ್ಯ.

ಸಕಲವ್ಯಾಧಿಗೆ ಚೂರ್ಣ :—

ಧಾತ್ರೀ ವಿಳಂಗೈಲಲವಾನಿ ಮುಸ್ತಾ
ವ್ಯೋಷಂ ಚ ಪಥ್ಯಂ ತ್ರಿವೃತಾ ತ್ರಿಭಾಗವ್ ।
ಏತಾನಿ ಚೂರ್ಣಂ ಸಮಶರ್ಕರಾಣಾಂ
ಉಷ್ಣೋದಕೇನ ಪ್ರಪಿಬೇನ್ನರಾಣಾಮ್ ॥
ಕಾಸಾಗ್ನಿಮಾಂದ್ಯಂ ಗುದಜಾಂಕುರಾಣಾಂ
ಕುಷ್ಠಂ ಪ್ರಮೇಹಂ ಕೃಮಿಗುಲ್ಮನಾಶವ್ ।
ವಾತಂ ಚ ಪಿತ್ತಂ ಕಫಪಾಂಡುರೋಗಂ
ಹೃದ್ರೋಗನಾಶಂ ಹ್ಯವಿಪತ್ತಿಯೋಗವ್ ॥

ಟೀಕೆ :—ನೆಲ್ಲಿಚಟ್ಟು ಗ ೧ ತೂಕ, ವಾಯಿವಿಳಂಗ ೧ ತೂಕ, ಏಲಕ್ಕಿ ೧ ತೂಕ, ಲವಂಗಚಕ್ಕೆ ೧ ತೂಕ, ಲವಂಗಪತ್ರೆ ೧ ತೂಕ, ತುಂಗಮುಸ್ತೆ ೧ ತೂಕ, ಶುಂಠಿ ೨ ತೂಕ, ಹಿಪ್ಪಲಿ ೨ ತೂಕ, ಮೆಣಸು ೨ ತೂಕ, ಅಳಲೇಕಾಯಿ ೪ ತೂಕ, ತಿಗಡೆ ೪ ತೂಕ, ಇಷ್ಟನ್ನೂ ಚೂರ್ಣಮಾಡಿ ಸಮ ಸಕ್ಕರೆಯಂ ಬೆರೆಸಿ ಬಿಸಿನೀರಿಂದ ತೆಗೆದುಕೊಳ್ಳಲು ಸಕಲ ವಿಧವಾದ ವ್ಯಾಧಿಯ ನಿವಾರಣ.

## D 1371 & 1374

ಸರ್ವವ್ಯಾಧಿಗೆ ಗುಳಿಗೆ :—ಏಲಕ್ಕಿ, ಚಿತ್ರಮೂಲ, ಲವಂಗ, ಶುಂಠಿ, ಹಿಪ್ಪಲಿ, ಮೆಣಸು, ಭದ್ರಮುಸ್ತೆ, ಹಿಪ್ಪಲೀಮೂಲ, ಜೇಪಾಳ, ರೇಣುಕೆ, ನಾಗಕೇಸರಿ, ಗಂಧಕ, ಲೋಹಭಸ್ಮ, ತಾಮ್ರಭಸ್ಮ, ಪಾದರಸ, ಇಷ್ಟನ್ನೂ ಸಮಭಾಗವಾಗಿ ಕೂಡಿ ಚೂರ್ಣವಂ ಮಾಡಿ ತಣ್ಣೀರಲ್ಲಿ ಮರ್ದಿಸಿ ಇದರ ಇಮ್ಮಡಿ ಬೆಲ್ಲವಂ ಹಾಕಿ ಮರ್ದಿಸಿ ಕಡಲೆಯ ಪ್ರಮಾಣ ಗುಳಿಗೆಯ ಮಾಡಿ ಅನುಪಾನವಿಶೇಷದಲ್ಲಿ ಕೊಟ್ಟರೆ ಸರ್ವವ್ಯಾಧಿ ಹರ.

## D 1359

ಸನ್ನಿಪಾತಭೈರವರಸ :—ಗಂಧಕ, ನಾಭಿ, ಇವು ಸಮಾನಭಾಗ, ಇವುಗಳ ಸಮಾನ ತ್ರಿಕಟುಕ, ಕಲ್ವದಲ್ಲಿ ನಿಂಬೆಯಹುಳಿಯಿಂದ ಒಂದು ದಿನ ಮರ್ದಿಸಿ ಒಂದು ದಿನ ಸೂರ್ಯ ಪುಟದಲ್ಲಿ ಒಣಗಿಸಿ ಅದರ ನಾಲ್ಕನೇ ಭಾಗ ವಿಷದಲ್ಲಿ ಧೂಪವಿಕ್ಕಲು ರಸಶುದ್ಧಿ. ಗುಂಜಾ ತೂಕಮಾಗಿ ಇದಂ ಅಲ್ಲದ ರಸದಲ್ಲಿ ಕೊಡಲು ಸನ್ನಿಪಾತತ್ರಿದೋಷ, ಶಾಖ, ಪಿತ್ತ, ವಾತು ಇಲ್ಲದೇ ಕಣ್ಣುಮುಚ್ಚಿ ಹಲ್ಲು ಗಿಟಕಿರುವುದೆಲ್ಲ ವಾಣ್ಗುಂ.

## D 1363

ಸತ್ವಭಸ್ಮ :—ಸತ್ವ ಕರಗಿಸಿ ಮುತ್ತುಗದ ಮೇಣ ಹಾಕಿ ಬೆರಸಿ ಬೆಣ್ಣೆ ಹಾಕಲು ಭಸ್ಮವಾಗುವುದು. ಜ್ವರಾದಿಗಳಿಗೂ ಮಹಾರೋಗಕ್ಕೆ ಒಳ್ಳಿತು.

## D 1372 & R 1373

ಸಮರಸಗುಟಿಕೆ :—ರಸ, ಗಂಧಕ, ......... ಚಿತ್ರಮೂಲ, ತ್ರಿಕಟುಕ, ಭದ್ರಮುಸ್ತೆ, ವಿಳಂಗ, ಬೋಳ, ಬಜೆ, ಮಡುವಾಗಲಗೆಡ್ಡೆ, ಇವಂ (ಚೂರ್ಣ) ಮಾಡಿ, ಗರುಗದ ರಸದಲ್ಲಿ ೩ ದಿನ ಮರ್ದಿಸಿ ಏರದ ಹಣ್ಣಿನ ತೋರ ಗುಳಿಗೆಯಂ ಮಾಡಿ (ಕೊಡಲು ರೊಗಂ)ಗಳು ಮಾಣುವುವು. ಒಂದು ತಿಂಗಳು ಕೊಡಲು ಮಹಾರೋಗಂಗಳು ಮಾಣುವುವು.

## D 1372 & R 1373

ಸಿದ್ಧರಸಃ—(ವಾತಕ್ಕೆ)—ಬೆಳ್ಳುಳ್ಳಿ ೧೨ ಪಲ, ತ್ರಿಕಟುಕ ೬ ತೂಕ, ಇಂಗು ೨ ತೂಕ, ಸದ್ಯಕ್ಷಾರ ೨ ತೂಕ, ಹಿಪ್ಪಲೀಮೂಲ ೨ ತೂಕ, ವಾಲುಕಾಯಂತ್ರದಿಂ ೧೨ ಜಾವ ಅಟ್ಟು, ಆ ಸತ್ವ ೨ ತೂಕ, ತಾಮ್ರದಭಸ್ಮ ೮ ತೂಕ, ಲೋಹಭಸ್ಮ ೪ ತೂಕ, ವತ್ಸನಾಭಿ ೨ ತೂಕ, ಜೇಪಾಳ ೨ ತೂಕ, ವಿಳಂಗ ೨ ತೂಕ, ...... ೨ ತೂಕ, ಗ್ರಂಥಿ ೨ ತೂಕ, ಬಿಳುಗಾರ ೨ ತೂಕ, ಹಿಪ್ಪಲಿ ೩ ತೂಕ, ಶುಂಠಿ ೨ ತೂಕ, ಮೆಣಸು ೨ ತೂಕ, ತ್ರಿಫಲೆ ೬ ತೂಕ, ಏಲಕ್ಕಿ ೨ ತೂಕ, ಜೀರಿಗೆ ೨ ತೂಕ, ಚಿತ್ರಮೂಲ ೨ ತೂಕ, ಭದ್ರಮುಸ್ತೆ ೨ ತೂಕ, ಇವೆಲ್ಲವಂ ಕೂಡಿ ಲೊಕ್ಕಿ, ವೊಳೆಯಾದ ಔಡಲದಗೆಡ್ಡೆ ಇವುಗಳ ಕಷಾಯದಿಂ ಒಂದು ಜಾವ ಅರೆದು ಶುಷ್ಕಂ ಮಾಡಿ ಆ ಕಷಾಯದಿಂ ೩ ಬಾರಿ ಅರೆದು ಚೂರ್ಣಂ ಮಾಡಿ ಜೇನುತುಪ್ಪದಿಂ ಕಲಸಿ ರೋಗಿಗೆ ಒಂದು ಹಣ ತೂಕವಂ ಕೊಡಲು ವಾತ, ಗುಲ್ಮ, ಚಲನ, ಶೂಲೆ, ಪಾಂಡು, ಪ್ರಮೇಹ, ಶ್ವಾಸ, ಕಾಸ, ಈ ರೋಗಂಗಳು ತೀರುವುವು. ಈ ರಸಮಂ ಒಂದು ಮಂಡಲ ಕೊಂಬುದು. ಇದು ಸಿದ್ಧರಸ.

## D 1371 & R 1374

ಸೀಸಭಸ್ಮ :—ಸೀಸಭಸ್ಮವಂ ಮಾಡುವಕ್ರಮ—ಮಣಿಸಿಲೆಯನ್ನೂ ಎಕ್ಕೆಹಾಲನ್ನೂ ಕೂಡ ಅರೆದು ಸೀಸಪತ್ರಂಗಳ ತೊಡೆದು ಪುಟವನಿಕ್ಕಲು (ಸೀಸ) ಭಸ್ಮವಕ್ಕು.

## D 1372 & R 1373

ಸೀಸಭಸ್ಮ :—ಸೀಸಭಸ್ಮವಂ ಮಾಡುವ ಪ್ರಕಾರ—ತ್ರಿಫಲೆಯ ಚೂರ್ಣ ಗ ೯೯ ವರಹ ತೂಕ, ಶುದ್ಧವಾದ ಸೀಸ ೧೦೦ ತೂಕ, ಮರದರಿಸಿನ... ತೂಕ, ಮೂರುಪಲ ಬೇಲದ ಬೇರು, ಒಂದು ಪಲದಲ್ಲಿ ಕಷಾಯವಂ ಮಾಡಿ ಆ ಕಷಾಯದಲ್ಲಿ ಔಷಧಂಗಳನ್ನು (ಕೂಡಿಸಿ) ಗುಳಿಗೆಯಂ ಮಾಡಿ ಮಜ್ಜಿಗೆಯಲ್ಲಿ ಒಂದು ಗುಳಿಗೆಯನ್ನು ಅರೆದು ಕುಡಿಯುವುದು, ಒಂದು ವರಹತೂಕ ಜೇನುತುಪ್ಪಸಹಿತ ಕೊಡುವುದು.

**ಸೀಸವಟಿಕ** :—ಸೀಸವನ್ನು ಏಳುಬಾರಿ ಕರಗಿಸುವುದು. ಆನೆಯ ಮೂತ್ರದಲ್ಲಿ ಇಡುವುದು. ಆ ಸೀಸವನ್ನು ಕಬ್ಬಿಣದ ಬಟ್ಟಲಲ್ಲಿ ಇಕ್ಕಿ ಕರಗಿಸಿ ಹುಣಸೆಯ ತಿಗಡು, ಅರಳಿಯತಿಗಡು, ಈ ಎರಡನ್ನೂ ಸರಿಯಾಗಿ ಚೂರ್ಣವಂ ಮಾಡಿ ಆ ಸೀಸದ ನಾಲ್ಕರಲ್ಲಿ ಒಂದು ಭಾಗವಂ ಹಾಕಿ ಲೋಹದ ಸಟ್ಟುಗದಲ್ಲಿ ತೊಳಸುತ್ತಾ ಬರುವುದು. ಅದು ಭಸ್ಮವಹುದು. ಅದು ಎಷ್ಟು ಹೊತ್ತಿಗೆ ಭಸ್ಮವಹುದೋ ಅಷ್ಟು ಹೊತ್ತು ಪರ್ಯಂತರ ಆ ಚೂರ್ಣವನ್ನು ಹಾಕಿ ತೊಳಸುತ್ತಾ ಬರುವುದು. ಅದು ಭಸ್ಮವಹುದು. ಆ ಭಸ್ಮಕ್ಕೆ ಸರಿಯಾಗಿ ಮಣಿಸಿಲೆಯಂ ಕೂಡಿಸಿ ಮಾದಲದ ಹಣ್ಣಿನ ರಸದಲ್ಲಾಗಲೀ ನಿಂಬೇಹಣ್ಣಿನ ರಸದಲ್ಲಾಗಲೀ ಅರೆದು ಶ್ರಾವೆಯೊಳಗಿಕ್ಕಿ ಮೇಲೊಂದು ಶ್ರಾವೆಯಂ ಮುಚ್ಚಿ ಸಂದಿಗೆ ಅಳಲೇಕಾಯ ಚೂರ್ಣವನ್ನೂ ಒಗರನ್ನೂ ಸರಿಯಾಗಿ ಅರೆದು ಸಂಶಯ ಹುಟ್ಟಿದ ಸಂದಿಗೆ ಎರಡು ಮೂರು ಹದದಲ್ಲೂ ತೊಡೆದು ಒಣಗಿಸಿ ಆ ಮೇಲೆ ಅರಿವೆಯನ್ನಿಕ್ಕಿ ಸಿರುಮಣ್ಣುಗೊಂಡು ಆ ಶ್ರಾವೆ ಕಾಣಬರದ ಹಾಗೆ ಮಾಡಿ ಅದಕ್ಕೆ ತಕ್ಕಷ್ಟು ಬೆರಣಿಯನ್ನಿಕ್ಕುವುದು. ಈ ಪ್ರಕಾರದಲ್ಲಿ ಅರುವತ್ತು ಪುಟವನ್ನಿಕ್ಕುವುದು. ಆ ಭಸ್ಮವನ್ನು ಮಿತ್ರಪಂಚಕದಿಂದ ಕರಗಿಸುವುದು. ಮಿತ್ರಪಂಚಕವೆಂದರೆ ಬೆಲ್ಲ, ತುಪ್ಪ, ಗುಂಜಿ, ಜೇನುತುಪ್ಪ, ಬಿಳಿಗಾರ. ಇದಂ ಅರೆದು ಜತನವಾದರೆ ಹಿಂದೆ ಹೇಳಿದ ಹಾಗೆ ಪುಟವನ್ನಿಕ್ಕುವುದು. ಆ ಶುದ್ಧಭಸ್ಮ, ಶಿಲಾಜಿತು, ವಟಕ ಮಾಡುವುದು.

## D 1372 & R 1373

**ಸೀಸಾದಿಚೂರ್ಣ** :—ಹಿಂದೆ ಸೀಸವಟಿಕವಂ ಹೇಳಿರುವ ಹಾಗೆ ಸೀಸವಂ ಶುದ್ಧಿಯ ಮಾಡಿ ಭಸ್ಮವಂ ಮಾಡಿಟ್ಟು ಚೂರ್ಣ ೧ ಪಲ ಅದರ ಸರಿಯಾಗಿ ಮಂಡೆಗೊಂಬಿನ ಅರಸಿನದ ಚೂರ್ಣವಂ ಮಾಡಿ ಅವರೆಯ ಬಿತ್ತದ ಚೂರ್ಣವಂ ಮಾಡಿ ಈ ಚೂರ್ಣಗಳನ್ನು ಬೇರೆ ಬೇರೆ ಇರಿಸಿ ಸೀಸದ ಚೂರ್ಣ ಗ ೧ ತೂಕ,ಅರಸಿನದ ಚೂರ್ಣ ಗ ೧ ತೂಕ, ಅವರೇ ಬಿತ್ತದ ಚೂರ್ಣ ಗ ೧ ತೂಕ, ಇಂತು ಗ ೩ ತೂಕವನ್ನು ಜೇನುತುಪ್ಪದಲ್ಲಿ ಕಲಸಿ ಲೇಹ್ಯವಾಗಿ ಕೊಡುವುದು.

**ಸುನೇತ್ರಿ** :—ತ್ರಿಫಲ, ತ್ರಿಕಟುಕ, ಗಂಗುಂಗೆಯಬೀಜ, ಹೆಗ್ಗುಳ್ಳದಬೀಜ, ಹುರಿಗಿಲಬೀಜ, ಇವು ಪ್ರತ್ಯೇಕ ೧೦ ಭಾಗ, ತಾವರೇಬೀಜ, ಅಷ್ಟಮಧುಕ, ತಾಮ್ರ, ಸೈಂಧವ, ಸ್ಪಟಿಕ, ಶಂಖ, ಇವು ಪ್ರತ್ಯೇಕ ಭಾಗ ೩, ಬಜೆ, ನೀಲಾಂಜನ, ಕಾವಿಯಕಲ್ಲು, ಶ್ರೀಗಂಧ, ರತ್ನಾಂಜನ, ಅರುಗು, ಅರಸಿನ, ಲೋಧ್ರ, ಇವು ಪ್ರತ್ಯೇಕ ೨ ಭಾಗ, ತುತ್ತ ಭಾಗ ೧, ಪಿತ್ತರೋಹಿಣಿ ೧ ಭಾಗ, ಇವಂ ಹುಲಿಗಿಲಿರಸದಲ್ಲಿ ಮರ್ದಿಸಿ ಹಿಪ್ಪಲಿಯ ಹಾಗೆ ಗುಳಿಗೆಯಂ ಮಾಡಿ ನಿಂಬೇರಸದಲ್ಲಿಯಾಗಲೀ, ನೀರಲ್ಲಾಗಲೀ ತೇದು ಕಣ್ಣಿಗಿಕ್ಕಲು, ಕಾಚು, ಪಟಲ, ಹಣ್ಣುಗಣ್ಣು, ನೀರುಸುರಿಯುತ್ತಿರುವುದು ಮಾಣುವುವು. ಇದು ಸುನೇತ್ರಿ.

**ಸೂಚಿಕಾಭರಣರಸ** :—ಶೋಧಿಸಿದ ರಸವನ್ನು ಶುಂಠಿಯಲ್ಲಿ ಪಾಷಾಣದೊಳಗೆ ಮರ್ದಿಸಲು ದೋಷಹೋಗಿ ಬೆಣ್ಣೆಯ ಹಾಗೆ ಅಹುದು. ಅದಂ ನವಿಲ ಕಾಲುಎಲುಬಿನ ಕಣಿಗೆ

ಯಲ್ಲಿ ತುಂಬಿ ಅದರ ಬಾಯಿಗೆ ಮುಚ್ಚಳವನ್ನು ಮುಚ್ಚಿ ಧಾನ್ಯರಾಶಿಯೊಳಗೆ ಒಂದು ತಿಂಗಳು ಹೂಳಿ ಇರಿಸಿ ಗಣಾಧಿಪತಿ, ದುರ್ಗೆ, ಭೈರವನ ಪೂಜೆಗಳಂ ಮಾಡಿ ತೆಗೆದುಕೊಂಡರೆ ಸನ್ನಿಪಾತಜ್ವರ, ತ್ರಿದೋಷಜ್ವರದಿಂದ ಕೈಕಾಲು ತಣ್ಣಗೆ ಆಗಿ ಕಣ್ಣುಮುಚ್ಚಿ ನಾಡಿ ನಿಂತು ಹಲ್ಲು ಹಲ್ಲಿಗೆ ಗಟ್ಟಿಯಾಗಿ ಕಚ್ಚಿಹೋಗಿರುವಂತಹವನಿಗೆ ಕಾಲಿನ ಹೆಬ್ಬೆರಳಿನ ಉಂಗುಷ್ಠದಲ್ಲಿ ಸೂಜಿಯಂ ಹೊಯ್ದು ಆ ಸ್ಥಾನದಲ್ಲಿ ಸೂಜಿಯ ಮೊನೆಯುಲ್ಲೂ ಆ ತಳಿಗೆಯ ರಸವಂ ತೆಗೆದು ಇಕ್ಕಿ ಬೆರಳಿಂದ ಆ ಸ್ಥಾನವನ್ನೊರಸುವುದು. ಬ್ರಹ್ಮಸ್ಥಾನದಲ್ಲಿ ಸೂಜಿಯನ್ನಿಕ್ಕಿ ಸೂಜಿಯ ಮೊನೆಯಂ ತೆಗೆದಿಕ್ಕಿ ಬೆರಳಿಂದೊರಸುವುದು. ಅವನು ಎಚ್ಚತ್ತು ಜ್ವಾಲೆ ಎಂದರೆ ಆಗ ತಪ್ಪಿಸಿ ರೋಮಾಂಚವಾಗುವ ತನಕ ಬರಮಾಡುವುದು. ನೆಲ್ಲೋಗರ, ಮೊಸರು, ದ್ರಾಕ್ಷೆ ದಾಳಿಂಬದ ಹಣ್ಣು, ಖರ್ಜೂರಂಗಳು ಪಥ್ಯ. ಶೈತ್ಯೋಪಚಾರಂಗಳು ಮಾಡುವುದು. ಸುಗಂಧಾನುಲೇಪ ಮಾಡುವುದು. ಪರಿಮಳಪುಷ್ಪಂಗಳಂ ಮುಡಿಸಿ ನಿರ್ವಾತಸ್ಥಾನದಲ್ಲಿರಿಸುವುದು. ಮೂರುದಿನಕ್ಕೆ ಆರೋಗ್ಯಸ್ನಾನವನ್ನು ಮಾಡಿ ಯಥಾಶಕ್ತಿ ದಾನವಂ ಮಾಡುವುದು. ಇದು ಸೂಚಿಕಾಭರಣರಸ.

ಸೂಚೀಮುಖರಸ :—ರಸ, ಗಂಧಕ, ತಾಳಕ, ಮಣಿಸಿಲೆ, ಮಾಕ್ಷಿಕ, ತುತ್ತ, ಜಾಪಾಳ, ವಿಷ, ಟಂಕಣ, ಬೆಲ್ಲವತ್ತದ ಹಣ್ಣು, ಇವನ್ನು ಕಲ್ಲಲ್ಲಿ ಕಜ್ಜಳವಾಗುವಂತೆ ಮರ್ದಿಸಿ ಕಲ್ನಾಗರ ಪಿತ್ತದಲ್ಲಿ ಲೇಸಾಗಿ ಭಾವನೆಯಂ ಮಾಡಿ ಗಾಜಿನ ಕುಪ್ಪಿಗೆಯಲ್ಲಿ ತುಂಬಿ ಬ್ರಹ್ಮಸ್ಥಾನದಲ್ಲಿ ಸೂಜಿಯಂ ಹೊಯ್ದು ಗುಂಜಿಯ ತೂಕವಿಕ್ಕಿ ಉರಿಸಲು ದಾಡೆಬಂಧ, ಕಣ್ಣು ಮುಚ್ಚಿರುವುದು, ಧನುರ್ವಾತ, ಕೈಕಾಲು ಶೈತ್ಯಮಾಡಿರುವುದು, ಕಿವಿಕೇಳದಿರುವುದು, ವಾಯು, ಅಪಸ್ಮಾರ, ತ್ರಿದೋಷ, ಹದಿಮೂರು ಪ್ರಕಾರದ ಸನ್ನಿಪಾತ ಹರ. ಶೈತ್ಯೋಪಚಾರ ಮಾಡುವುದು. ಇದು ಸೂಚೀಮುಖರಸ.

ಸೂಜಿಕಲ್ಲು:—ಸೂಜಿಕಲ್ಲಂ ಸಿಂದೂರ ಮಾಡುವ ಪ್ರಕಾರ—ಸೂಜೀಹಿಡಿಯುವಂತಹ ಸೂಜೀಕಲ್ಲನ್ನು ಮೂರು ದಿವಸ ನೆನೆಯಿಕ್ಕಿ ಆ ಮೇಲೆ ತೆಗೆದು ಸುಣ್ಣಕಲ್ಲಂ ಉರಿಸುವ ಹಾಗೆ ಉರಿಸಿ ಕೆಂಡದ ಹಾಗೆ ಕಾಸಿ ಒಂದೆಲೆ ತಾವರೆಯ ರಸದಲ್ಲಿ ಹಾಕಿ ಈ ಮರ್ಯಾದೆಯಲ್ಲಿ ಮೂರು ಬಾರಿ ಹಾಕಿ ಕಾಸುವುದು. ಹೀಗೆ ಶುದ್ಧವಾದ ಸೂಜೀಕಲ್ಲನ್ನು ತ್ರಿಫಲೆ ಕಷಾಯದಲ್ಲಿ ಹಾಕಿ ಮೂರು ದಿವಸಗಳಿರಿಸಿ ಆ ಮೇಲೆ ತೆಗೆದು ಆ ರಸದಲ್ಲೂ ಅರೆದು ಬೆರಣಿಯಲ್ಲಿ ಇಪ್ಪತ್ತು ಪುಟವನ್ನಿಕ್ಕುವುದು. ಆ ಸೂಜೀಕಲ್ಲನ್ನು ಗುಳಿಕಲ್ಲಿನಲ್ಲಿ ಹಾಕಿ ಚೂರ್ಣವಂ ಮಾಡಿ ಪಾರಿವಾಣದ ತಿಗಡಿನ ರಸದಲ್ಲಿ ಕಲಸಿ ಆರುಬಾರಿ ಬೆರಣಿಯಲ್ಲಿ ಪುಟವನ್ನು ಹಾಕಿ ತೆಗೆದು ಕೊಂಡು ಒಂದು ಹಣತೂಕ ಮೊದಲಾಗಿ ಒಂದು ಅರೆಪಲ ಪರ್ಯಂತರ ಶರೀರಧಾತುವನ್ನರಿತು ನೆಲ್ಲಿಯಕಾಯರಸದಲ್ಲಿಯಾಗಲೀ ಜೇನುತುಪ್ಪದಲ್ಲಿಯಾಗಲೀ ಕದಡಿ ಕೊಳ್ಳುವುದು.

ಹರಿದ್ರಾರವಟಕ :—ಅರಸಿನ, ಶುಂಠಿ, ಹಿಪ್ಪಲಿ, ಮೆಣಸು, ಕೊತ್ತುಂಬರಿಯ ಬೀಜ, ಬೇವಿನ ಎಲೆ, ಅಮರದವಳ್ಳಿಯ ಎಲೆ, ಇಷ್ಟನ್ನೂ ಸರಿಯಾಗಿ ಆಡಿನ ಮೂತ್ರದಲ್ಲಿ ಅರೆದು

ಮೂರು ದಿನ ಸಣ್ಣನಾಗಿ ಅರೆದು ಗ ೩ ತೂಕ ಪ್ರಮಾಣದ ಗುಳಿಗೆಯಂ ಮಾಡಿ ನೆರಳಲ್ಲಿ ಒಣಗಿಸಿ ಹೊಸ ಮಡಕೆಯೊಳಗಿಟ್ಟುಕೊಂಡು ಒಂದು ಗುಳಿಗೆಯಂ ಚೂರ್ಣವಂ ಮಾಡಿ ಜೇನುತುಪ್ಪದಲ್ಲಿ ಕಲಸಿ ಉದಯದಲ್ಲಿ ಕೊಡುವುದು.

## 1359

ಹಿಂಗ್ವಾದಿಚೂರ್ಣ :—ಹಿಂಗು ೧ ಭಾಗ, ಬಜೆ ೨ ಭಾಗ, ಬೇಲದಹಣ್ಣು ೩ ಭಾಗ, ಶುಂಠಿ ೪ ಭಾಗ, ಇವಂ ಚೂರ್ಣಮಾಡಿ ಬಿಸಿನೀರು, ಅಲ್ಲದ ರಸದಿ ಕೊಳ್ಳೆ ಮಲಶೂಲೆ, ಗುಲ್ಮಶೂಲೆ, ಮಹೋದರ, ಮಲಬಂಧ, ಆಧ್ಮಾನಪಟ್ಟುಶೂಲೆ, ಕಿಬ್ಬೆಸೆಯ ಶೂಲೆ, ಅಳ್ಳೆಶೂಲೆ, ವಿಷೂಚಿಶೂಲೆ, ಇಷ್ಟಿಲವೆಂಬ ಹೊಟ್ಟೆಯೊಳಗೆ ಹುಟ್ಟುವ ೮ ಪ್ರಕಾರ ರೋಗಂಗಳು, ಕ್ರಿಮಿ, ಶ್ವಾಸ, ನಾಸವಾತ, ಶೂಲೆ ಎಲ್ಲಾ ಮಾಣ್ಗುಂ.

## D 1372 & R 1374

ಹುತಾಶರಸ :—ಪಾದರಸ ೧ ತೂಕ, ಗಂಧಕ ೧ ತೂಕ, ನಾಭಿ ೩ ತೂಕ, ಹಿಯ್ಯವಳಿ ಗ ೪ ತೂಕ, ಹಿಯ್ಯವಳಿ ಇಲ್ಲದಿದ್ದರೆ ಸಮುದ್ರಪಾಳದ ಬೀಜವ ಹಾಕಿ ತೆಗೆದುಕೊಳ್ಳುವುದು. ಇಷ್ಟನ್ನು ಚೂರ್ಣವ ಮಾಡಿ ನಿಂಬೇಹುಳಿಯಲ್ಲಿ ಮರ್ದಿಸಿ ಗುಂಜಾಪ್ರಮಾಣ ಗುಳಿಗೆಯಂ ಮಾಡಿ ಒಂದು ಗುಳಿಗೆಯನ್ನು ಮೂರುಬೆರಳು ಮೆಣಸಿನ ಚೂರ್ಣದಲ್ಲಿ ಕೊಡಲು, ಅರುವತ್ತನಾಲ್ಕು ವಾಯುಭೇದ, ನಾಲ್ಕು ಶ್ಲೇಷ್ಮ, ಕುಷ್ಠ, ಗುಲ್ಮ, ಸರ್ವವ್ಯಾಧಿ ಮಾಣುವುವು.

## D 1370

ಹೃದ್ರೋಗಗಜಕೇಸರಿ:—ದಶಮೂಲ, ಪಂಚಲವಣ, ಹಿಂಗು,ವಜೆ, ರಾಮನಾಗಕೇಸರಿ, ನಾಗಪಕ್ಷ, ರಾಷ್ಮೆ, ಪುನತಾರೆ, ತಾ.........ಪುನರ್ನವ, ಶಿವಘೃತ, ತ್ರೈಲಾನ್ಯ, ಸಹ ಎರಡು ಉಕ್ಕುಬರುವ ತನಕ ಕಾ೩ ಸೇರು ಸಕ್ಕರೆ ಹಾಕಿ ಪ್ರಾತಃಕಾಲ ಆಮಲಕಪ್ರಮಾಣ ಸಿಂದೂರವನ್ನು ಹಾಕಿಕೊಳ್ಳಲು ಅರತಿ, ಹೃದ್ರೋಗಂ ಗುಣ.

---

## ಮೂರನೆಯ ಪ್ರಕರಣ

### ಚಿ ಕಿ ತ್ಸೆ ಗ ಳು

### D 1349

ವಮನದ್ರವ್ಯಂಗಳು :—

[1] ಮದನಮಧುಕಲಂಬಾನಿಂಬಬಿಂಬೀವಿಶಾಲಾ
ತ್ರಪುಸಕುಟಜಮೂರ್ವಾದೇವದಾಲೀಕೃಮಿಘ್ನಂ ।
ವಿದುಲದಹನಚಿತ್ರಾಃ ಕೋಶವತ್ಯೌ ಕರಂಜಃ
ಕಣಲವಣವಚೈಲಾಸರ್ಷಪಾಶ್ಛರ್ದನಾನಿ ॥೧॥

ಟೀಕೆ :—ಮದನ = ಮಗ್ಗಾರೆ, ಮಧುಕ = ಯಷ್ಟಿಮಧುಕ, ಲಂಬಾ = ಕಹಿಸೋರೆ, ನಿಂಬ = ಬೇವು, ಬಿಂಬೀ = ಕಹಿದೊಂಡೆ, ವಿಶಾಲಾ = ಹಾವುಮೆಕ್ಕೆ, ತ್ರಪುಸ = ಕಹಿಮೆಕ್ಕೆ, ಕುಟಜ = ಕೊಡಸಿಗ, ಮೂರ್ವಾ = ಕುರಟಿಗೆ, ದೇವದಾಲೀ = ದೇವದಾಳಿಯು, ಕ್ರಿಮಿಘ್ನಂ = ವಾಯಿವಿಳಂಗ, ವಿದುಲ = ನೀರುಹಚ್ಚೆ, ದಹನ = ಚಿತ್ರಮೂಲ, ಚಿತ್ರಾ = ಇಲಿಕಿವಿ, ಕೋಶ ವತ್ಯೌ = ಘಂಟಾಲಿಕೆಗಳು (ಅದೊಂದು ಹೊಂಬಣ್ಣದ ಹೀರೆ, ಒಂದು ಕಹಿಹೀರೆ) ಕರಂಜ = ಹೊಂಗೆ, ಕಣ = ಹಿಪ್ಪಲಿ, ಲವಣ = ಸೈಂಧವಲವಣ, ವಚಾ = ಬಜೆ, ಏಲಾ = ಏಲಕ್ಕಿ, ಸರ್ಷಪಾಃ = ಸಾಸಿವೆಯೆಂಬುವು, ಛರ್ದನಾನಿ = ವಮನದ್ರವ್ಯಂಗಳು.

ವಿರೇಚನದ್ರವ್ಯಂಗಳು :—

[2] ನಿಕುಂಭಕುಂಭತ್ರಿಫಲಾಗವಾಕ್ಷೀ
ಸ್ನುಕ್‌ಶಂಖಿನೀನೀಲಿನಿತಿಲ್ವಕಾನಿ ।
ಶಮ್ಯಾಕಕಂಪಿಲ್ಲಕಹೇಮದುಗ್ಧಾ
ದುಗ್ಧಂ ಚ ಮೂತ್ರಂ ಚ ವಿರೇಚನಾನಿ ॥೨॥

ಟೀಕೆ :—ನಿಕುಂಭ = ದಂತಿ, ಕುಂಭ = ತಿಗಡೆ, ತ್ರಿಫಲಾ = ಅಣಲೆ, ನೆಲ್ಲಿ, ತಾರೆ, ಗವಾಕ್ಷೀ = ಹಾವುಮೆಕ್ಕೆ, ಸ್ನುಕ್ = ಮುಂಡುಗಳ್ಳಿ, ಶಂಖಿನೀ = ಕಟ್ಟುವತ್ತಿಗೆ, ನೀಲಿನಿ ನೀಲಿ, ತಿಲ್ವಕಾನಿ = ಲೋಧ್ರನೆಂಬುವು, ಶಮ್ಯಾಕ = ಶಕ್ಕೆ, ಕಂಪಿಲ್ಲಕ = ಹೊರ, (ವಸಾರೆ) ಹೇಮದುಗ್ಧಾ = ಕನಕಕ್ಷೀರಿ, ದುಗ್ಧಂ = ಹಾಲು, ಮೂತ್ರಂ = ಗೋಮೂತ್ರವೆಂಬುವು, ವಿರೇಚ ನಾನಿ = ವಿರೇಚನದ್ರವ್ಯಗಳು.

---

[1] ಅಷ್ಟಾಂಗಹೃದಯ, ಸೂತ್ರಸ್ಥಾನ, ಅಧ್ಯಾಯ ೧೫, ಶ್ಲೋಕ ೧.

[2] ಅಷ್ಟಾಂಗಹೃದಯ, ಸೂತ್ರಸ್ಥಾನ, ಅಧ್ಯಾಯ ೧೫, ಶ್ಲೋಕ ೨.

ನಿರೂಹದ್ರವ್ಯಗಳು :—

[1] ಮದನಕುಟಜಕುಷ್ಠದೇವದಾಲೀ
ಮಧುಕವಚಾದಶಮೂಲದಾರುರಾಸ್ನಾಃ ।
ಯವಮಿಸಿಕೃತವೇಧನಂ ಕುಲತ್ಥೋ
ಮಧುಲವಣಂ ತ್ರಿವೃತಾ ನಿರೂಹಣಾನಿ ॥೩॥

ಟೀಕೆ :—ಮದನಂ=ಮಗ್ಗಾರೆ, ಕುಟಜ=ಕೊಡಸಿಗೆ, ಕುಷ್ಠಂ=ಕೋಷ್ಠ, ದೇವದಾಲೀ=ದೇವದಾಲಿ, ಮಧುಕ=ಯಷ್ಟಿಮಧುಕ, ವಚಾ=ಬಜೆ, ದಶಮೂಲಂ=ದಶಮೂಲಂಗಳು, ಅದೆಂತೆಂದೊಡೆ—

ವ್ಯಾಘ್ರೀ ಬೃಹತ್ಯತಿಗುಹಾ ಚ ಗುಹಾ ಸ್ವದಂಷ್ಟ್ರಾ
ಶ್ರೀಪರ್ಣಿನೀಜ್ವಲನಮಂಥವಸಂತದೂತೀ ।
ದುಂಡೂಕಬಿಲ್ವಮಿತಿ ತದ್ದಶಮೂಲಸಂಜ್ಞಾ
ಶೋಫಾಗ್ನಿಮಾಂದ್ಯಮರುದಾಮಯಜಿತ್ಪ್ರಶಸ್ತಂ ॥

ಟೀಕೆ :—ವ್ಯಾಘ್ರೀ=ನೆಲಗುಳ್ಳ, ಬೃಹತೀ=ಗುಳ್ಳ, ಅತಿಗುಹಾ=ಮೂರೆಲೆಹೊನ್ನೆ, ಗುಹಾ=ಸರದಾಲೀ, ಸ್ವದಂಷ್ಟ್ರಾ=ನೆಗ್ಗಿಲಮುಳ್ಳು, ಶ್ರೀಪರ್ಣಿನೀ=ಶಿವನಿ, ಜ್ವಲನಮಂಥಾ=ನರುವಲು, ವಸಂತದೂತೀ=ಪಾದರಿ, ದುಂಡೂಕ=ಹೆಮ್ಮರ, ಬಿಲ್ವ=ಬೆಲ್ಲವತ್ತ ಇವು ದಶಮೂಲಂಗಳು.

ದಾರು=ದೇವದಾರು, ರಾಸ್ನಾ=ರಾಸ್ನೆ, ಯವ=ಇಂದ್ರಯವೆ, ಮಿಸಿ=ಸಬ್ಬಸಿಗೆ, ಕೃತವೇಧನಂ=ಹೊಂಬಣ್ಣದ ಕಹಿಹೀರೆ, ಕುಲತ್ಥ=ಹುರುಳಿ, ಮಧು=ಜೇನುತುಪ್ಪ, ಲವಣಂ=ಸೈಂಧವಲವಣ, ತ್ರಿವೃತಾ=ತಿಗಡೆ, ಎಂಬಿವು ನಿರೂಹಣಾನಿ=ನಿರೂಹದ್ರವ್ಯಂಗಳು.

D 1.59

ತಲೆನೋವಿಗೆ :—ಕವಡೆಯನು ತೇದು, ತುರುಬೆಯ ಬೇರನ್ನು ತೇದು ತೊಗರೀಕಾಳಷ್ಟು ನೀರಲ್ಲಿ (ಅರೆದು ಹಚ್ಚಲು) ತಲೆನೋವು ಮಾಣ್ಗುಂ.

ತಲೆಯಹುಣ್ಣಿಗೆ :—ಉಮ್ಮತ್ತಿದ ಬೇರು, ಚಿಲಿಕೀರೆಬೇರು, ಆಲದ ಬಂದಣಿಕೆ, ಕಣಿಗಿಲೆಬೇರು, ಚಿತ್ರಮೂಲಬೇರಿನ ತೊಕ್ಕು, ಬೆಲ್ಲಗಣಿಕೆಸೊಪ್ಪಿನ ರಸ, ಇವಂ ಅರೆದು ಪೂಸೆ ತಲೆಹುಣ್ಣು ಮಾಣ್ಗುಂ.

---

[1] ಅಷ್ಟಾಂಗಹೃದಯ, ಸೂತ್ರಸ್ಥಾನ, ಅಧ್ಯಾಯ ೧೮, ಶ್ಲೋಕ ೩.

ನಾಳಕಿವಿಗೆ :—ಮತ್ತುರಾಣಿಸೊಪ್ಪಿನ ರಸ ಇಳುಹಿ ಕಿವಿಗೆ ಬಿಡಲು, ನಾಳಕಿವಿ ಮಾಣ್ಗುಂ.

ಇಸುಬಿನ ಹುಣ್ಣಿಗೆ :—ಮತ್ತುರಾಣಿಯಂ ಸಮೂಲವಂ ಸುಟ್ಟ ಬೂದಿ, ಬಿಳಿಯ ಸಜ್ಜರಸ, ಗೇರಹರಳ ಸುಟ್ಟ ಬೂದಿ, ಇಷ್ಟನ್ನೂ ಪುಡಿಮಾಡಿ, ಉಮ್ಮತ್ತದ ಸೊಪ್ಪಿನ ರಸ, ಹಾಗಲದ ಸೊಪ್ಪಿನ ರಸ, ಇವುಗಳಲ್ಲಿ ಮರ್ದಿಸಿ, ನೆಳಲಲ್ಲಿ ಇಕ್ಕಿ ಒಣಗಿಸಿ, ಹಸುವಿನ ಬೆಣ್ಣೆಯಲ್ಲಿ ಮರ್ದಿಸಿ ಇಕ್ಕಲು ಇಸುಬಿನ ಹುಣ್ಣು ಮಾಣ್ಗುಂ.

ಗುರುಗುಂಜಿಯ ವಿಷಕ್ಕೆ :—ಚಿಲಿಕೀರೆಯ ಸೊಪ್ಪಿನ ರಸವನ್ನು ಶರ್ಕರೆಯ ಮಿಶ್ರವ ಮಾಡಿ ಕುಡಿಯಿಸಲು ಗುರುಗುಂಜಿವಿಷ ಕೆಡುಗು. ಇದು ಸಿದ್ಧಪ್ರಯೋಗ. ಪುತ್ರಜೀವಿಯ ಮಣಿಯಂ ಸೀಗೆಕಾಯ ರಸದಲ್ಲಿ ಅರೆದು ಅಲ್ಪಕಾಸಿ ಕುಡಿಯಿಸಲು ಗುರುಗುಂಜಿಯ ವಿಷ ಮಾಣ್ಗುಂ.

ತಲೆಯ ಹುಣ್ಣಿಗೆ :—ಲೊಕ್ಕಿಸೊಪ್ಪಿನ ರಸದಲ್ಲಿ ಎಕ್ಕದ ಬೀಜ ತೇದು ಪೂಸಲು ಮಾಣ್ಗುಂ.

ಕಂಪಕ್ಕೆ:—ಅರಳಿಯ ತಿಗುಡಂ ಸುಟ್ಟು ಬೂದಿಯನ್ನೂ ಹೊಸ ಸುಣ್ಣವನ್ನೂ ಮರ್ದಿಸಿ ತುಪ್ಪದ ಅರಿವೆಯಲ್ಲಿ ಒಂದು ಬೊಟ್ಟಸಿಕ್ಕಲು ಬೊಗಿಸಿ ಸುರಿದು ಹೋಗುವುದು.

ಕಿವಿಹಾಲೆ ಸಣ್ಣದಾಗಿ ಬರುವುದಕ್ಕೆ :—ಹಿರಿಯ ಮದ್ದಿನ ಬೇರು, ಆಸಡಿಯ ಗೆಣಸು, ನೆಲದಾಳು, ಬಜೆ, ಈ ಮೂಲಿಕೆಗಳನ್ನು ಪುಡಿ ಮಾಡಿ ಎಮ್ಮೆಯ ಬೆಣ್ಣೆಯಲ್ಲಿ ಮರ್ದಿಸಿ ಸಣ್ಣನಾಗಿರುವ ಹಾಗೆ ಲೇಪನವ ಮಾಡಿ ದಪ್ಪವಾಗಿ ಇದ್ದ ಹಾವಿಗೆ ಸಣ್ಣಪಾವಡೆಯ ಸುತ್ತಿ ಅದರ ಮೇಲೆ ನೂಲ ಸುತ್ತುವುದು. ಹನ್ನೆರಡು ದಿವಸಕ್ಕೆ ದೊಡ್ಡ ಓಲೆಯನಿಕ್ಕುವ ಹಾಗೆ ಆಗುವುದು. ಇದು ತಪ್ಪದು ಸಿದ್ಧಾಂತ. ಪೂಜ್ಯಪಾದಸ್ವಾಮಿಯ ಪಾದವೇ ಗತಿ.

ಮಂಡಲದಂಷ್ಟ್ರವಿಷಕ್ಕೆ :—ಮಣಿದೊಂಡೆ, ಹಾವುನೊಕ್ಕೆ, ಈ ಎರಡರ ಬೇರಂ ನಿಂಬೇಹುಳಿಯಲ್ಲಿ ಅರೆದು ಗಾಯಕ್ಕೆ ಪೂಸೆ ವಿಷ ಕೆಡುಗು. ಒಡಲಿಗೆ ಕುಡಿಯಿಸೆ ವಿಷ ಹರ. ಇದನ್ನು ಕಟ್ಟಿದ ಬಾವಿಗೆ ಗಜ್ಜುಗದ ಸೊಪ್ಪನು ನಿಂಬೇಹುಳಿಯಲ್ಲಿ ಅರೆದು ತೊಡೆಯುವುದು.

ಸರ್ಪವಿಷಹರ ಮಂತ್ರ :—ಗ್ರಹಣದ ಬಿಡುಗಡೆಯಲ್ಲಿ ಸ್ನಾನಮಾಡಿಕೊಂಡು ಸಿದ್ಧಿ ಮಾಡುವುದು. [1]ಓನ್ನಮೋ ಭಗವತೇ ಪಾರ್ಶ್ವನಾಥಾಯ ಸ್ಥಾವರಜಂಗಮಕೃತ್ರಿಮವಿಷ ಸಂಹಾರಾಯ ಹಂ, ಝಂ, ಝ್ರಿಂ, ಕ್ಷಿಂ, ಹಂಸ, ಪಾರ್ಶ್ವನಾಥದೇವರಾಜ್ಞಾ,' ವಿಷಹರಣಮಲ್ಲಿನಾಥದೇವರಾಜ್ಞಾ, ತ್ರಿಭುವನಗರುಡನಾಜ್ಞಾ, ಶ್ರೀಧರದೇವರಾಜ್ಞಾ, ಶೀಘ್ರಂ ನಿರ್ವಿಷಂ ಕುರು, ಹುಂ ಫಟ್ ಸ್ವಾಹಾ. [2]

---

[1] ಖಗೇಂದ್ರಮಣಿದರ್ಪಣ, ಪುಟ ೧೩.

[2] ಇದರ ನಂತರ ತಾಳಪತ್ರಕೋಶದಲ್ಲಿ ಹೀಗಿದೆ—"ಪೂಜ್ಯಪಾದಸ್ವಾಮಿಯ ಪಾದ ಸನ್ನಿಧಿಯಲ್ಲಿ ಸೌಮ್ಯಸಂವತ್ಸರದ ಕಾರ್ತಿಕಶುದ್ಧ ೨ ಸ್ಥಿರವಾದ ಬರೆದೆನು. ಭದ್ರಂ ಭೂಯತ್."

## D 1351

ನೇತ್ರಬಾವಿಗೆ ತೈಲಮಾಡುವ ಕ್ರಮ [1] :— ಹರಳೆಣ್ಣೆ ೮, ಎಳ್ಳೆಣ್ಣೆ ೮, ಹಸುವಿನ ತುಪ್ಪ ೮, ಹೊಂಗಸಗೆ ೮; ಇದರ ಒಳಕ್ಕೆ ಹೊಯ್ಯುವ ರಸಗಳು— ಹೊನಗನ್ನೆ ಸೊಪ್ಪಿನ ರಸ ೮, ಗರುಗನ ರಸ ೮, ಕೊಳುಗುಳಿಕೆ ಸೊಪ್ಪಿನ ರಸ ೮, ಜಾಜೀಸೊಪ್ಪಿನ ರಸ ೮, ಎಕ್ಕದಹಣ್ಣೆಲೆರಸ, ಈ ಆರು ಸೊಲ್ಲಗೆ ೫; ಕಷಾಯದಬೇರು— ಕತ್ರಿಲೋಕಿಬೇರು, ಬದನೇಬೇರು, ನೆಲದುಂಬೆ, ಹಾಗಲದ ಬೇರು, ಅಪ್ಪಿಸೊಪ್ಪಿನ ಗೆಡ್ಡೆ, ನೆಲದಾಳೆಗೆಡ್ಡೆ, ಈ ೬ ಬಗೆ ಬೇರನು ಕುಟ್ಟಿ ಕಷಾಯವನಿಕ್ಕಿ ಅಷ್ಟಾವಶೇಷವಾಗಿ ಕಾದ ಕಷಾಯ ಸೊಲ್ಲಗೆ ೮ ನು ಬೆರಕೆ ಹೊಯ್ದು ಎಣ್ಣೆ, ತುಪ್ಪ, ಹರಳೆಣ್ಣೆ, ಈ ಮೂರು ಬಗೆಯನ್ನು ಹೊಯ್ದು ಕಾಳಾಕಿನ ಹಾಲ ಸೊಲ್ಲಗೆಯನ್ನು ಹೊಯ್ದು, ಇದರ ಒಳಕ್ಕೆ ಹಾಕುವ ಚೂರ್ಣದ್ರವ್ಯ— ವಾಯಿವಿಳಂಗ ಗ ೧, ಕಸ್ತೂರಿ ಗ ೧, ಅರಿಸಿನ ಗ ೧, ಅತಿಬಜೆ ಗ ೧, ವಳಿಬಜೆ ಗ ೧, ಇದನ್ನು ಕುಟ್ಟಿ ಚೂರ್ಣವ ಮಾಡಿ ಈ ಕಷಾಯದ ಒಳಕ್ಕೆ ಹಾಕಿ ಒಳ್ಳಿತಾದ ಮಡಿಕೆಗೆ ಎಲ್ಲವನ್ನೂ ಹೊಯ್ದು ಒಲೆ ಮೇಲೆ ಇಕ್ಕಿ ವಿಶೇಷ ಉರಿಯನಿಕ್ಕದೇ ಕಾಸಿ ತೈಲಪಾಕದ ಹದದಲ್ಲಿ ಇಳುಹಿ ಇದಂ ತೈಲ ಕ್ರಮದಿಂದ ನಾಲ್ಕುದಿನಕ್ಕೊಂದುಬಾರಿ ಮಂಡೆಗೆ ಒತ್ತಿಕೊಂಡು ಚುಚ್ಚಲಚಿಕ್ಕೆರಸದಲ್ಲಿ ಒರಸಿ ಮಿಂದರೆ ಕಣ್ಣು ಚೆನ್ನಾಗುವುದು.

ಕಣ್ಣು ಎವೆಗಳು ಬಾತುಕೊಂಡು ನೀರು ಸೋರುತ್ತಾ ಇದ್ದರೆ :— ಕೆಂಪಿನ ಕಣಿಗಿಲ ಹೂವನು ಐದು ಯಾ ಆರು ದಿನ ಕಟ್ಟಲು ಬಾವು ತೆಗೆಯುವುದು, ಕಣ್ಣುಗೆಂಪು ಹರವಹುದು. ಆಮೇಲೆ ಕಪ್ಪನು ಕಣ್ಣಿಗೆ ಉಜ್ಜಿಕೊಂಬೋಣ. ಕಪ್ಪು ಇದಂ ಮಾಡುವ ಪ್ರಕಾರವು— ಎಲೆ ಕಪ್ಪುರ ಕಾಸು ೧, ಮೈಲುತುತ್ತ ಕಾಸು ೧, ಈ ಎರಡನ್ನೂ ಪುಡಿ ಮಾಡಿ ಹಸುವಿನ ಬೆಣ್ಣೆ ಹಾಳಿತವರಿತು ಹಾಕಿಕೊಂಡು ನುಗ್ಗೆಸೊಪ್ಪಿನ ರಸವನು ಕೂಡಿ ಕಂಚಿನ ತಳಿಗೆಯ ಮೇಲೆ ತಾಮ್ರದ ಚೆಂಬಿನಲ್ಲಿ ಚೆನ್ನಾಗಿ ಮರ್ದಿಸಿದರೆ ಕಪ್ಪು ಆಗುತ್ತದೆ. ಇದನ್ನು ತಾಮ್ರದ ಭರಣಿಗೆ ಇಕ್ಕಿಕೊಂಡು ಕಣ್ಣಿಗೆ ಉಜ್ಜಿಕೊಂಬೋಣ.

## D 1353

ಚಾಳಾಯಿಸಕ್ಕೆ :— ಕವಡೆಯನು ತಾಮ್ರದ ಬಟ್ಟಲಲ್ಲಿ ಇರಿಸಿ, ನಿಂಬೇಹಣ್ಣು ಹಿಂಡಲು ಕರಗುವದು. ಆ ಕರಗಿದುದಕ್ಕೆ ಎಣ್ಣೆ ಬೀಳಿಸುವದು, ಮರ್ದಿಸಿ ಗುಳಿಗೆಯ ಕವಿಯುವುದು. ಆ ಗುಳಿಗೆಯನ್ನು ಮೊಲೆಹಾಲಿಂದ ತೇದು ಹಚ್ಚಲು ಗುಣ. ಬಿಳಿಕೊಮ್ಮೆ ಬೇರಂ ನಿಂಬೇರಸದಿಂದ ತೇದು ಹಚ್ಚಲು ಚಾಳಾಯಿಸವು ಮಾಣ್ಗುಂ.

ಇರುಳುಗಣ್ಣಿಗೆ :— ಚಿಟವ್ರುಡಲದ ಹರಳ ತಿರುಳು ಎಮ್ಮೆಮೊಸರಲ್ಲಿ ತೇದು ಹಚ್ಚಲು ಇರುಳುಗಣ್ಣು ಮಾಣ್ಗುಂ. ಆ ತಿರುಳಂ ನಿಂಬೇಹುಳಿಯಲ್ಲಿ ತಳಿಗೆಯ ಮೇಲೆ ತೇದು

---

[1] ತಾಲಪತ್ರಕೋಶದಲ್ಲಿ ಇದರ ನಂತರ— " ರಂಗಪ್ಪ ಬರೆಸಿದ್ದು " ಎಂದಿದೆ.

ಹಚ್ಚಲು ನಂಜಿಗಣ್ಣು ಮಾಣ್ಗುಂ. ಹೊಂಗೇಬೀಜ, ಹೊರಿಯ (?) ಇವಂ ಸಮಾನಂ ಗೊಂಡು ಗೋಮೂತ್ರದಲ್ಲಿ ತೇದು ಹಚ್ಚಲು ಇರುಳುಗಣ್ಣು ಮಾಣ್ಗುಂ. ಕಹಿಸೋರೆ ಬೀಜದ ತಿರುಳಂ ಮೊಲೆಹಾಲಿಂದ ತೇದು ಹಚ್ಚಲು ಇರುಳುಗಣ್ಣು ಮಾಣ್ಗುಂ. ಎಲಹೂಲಿಯ ಸೊಪ್ಪಿನ ರಸದಲ್ಲಿ ನವಣೆಅಕ್ಕಿ ಹಾಕಿ ಅಯೋಮಿಶ್ರವಾಗಿ ಉಣ್ಣಲು ಇರಳುಗಣ್ಣು ಕಾಣಬರುವುದು. ಸೈಂಧವಲವಣವಂ ಅಂಬಿಲದಲ್ಲಿ ತೇದು ಹಚ್ಚಲು ಇರುಳುಗಣ್ಣು ಮಾಣ್ಗುಂ. ನುಗ್ಗೆಯ ಬೀಜವಂ ಗೋಮಯದ ನೀರಲ್ಲಿ ತೇದು ಹಚ್ಚಲು ಇರಳುಗಣ್ಣು ಮಾಣ್ಗುಂ. ಹಾಗಲದ ಸೊಪ್ಪಿನ ರಸ, ಎಣ್ಣೆ ಈ ಎರಡನ್ನು ಮರ್ದಿಸಿ ಹಚ್ಚಲು ಇರುಳುಗಣ್ಣು ಮಾಣ್ಗುಂ. ಚಿಟವುಡಲದ ಹಸಳ ತಿರುಳುಎಣ್ಣೆ ಯಲ್ಲಿ ಅರಸಿನವಂ ತೇದು ಹಚ್ಚಲು ಮಾಣ್ಗುಂ. ಹೊನಗೊನ್ನೆರಸವಂ ನಸಿಕಿ ಒತ್ತು ವುದು, ಹೊನಗೊನ್ನೆರಸದಲ್ಲರೆಯುವುದು, ಯವಹಿತ್ರಿ, ಜೆಕರ್ಮದ, ಈ ಎರಡನ್ನು ಜೇನು ತುಪ್ಪದಲ್ಲಿ ಹಚ್ಚಲು ಇರುಳುಗಣ್ಣು ಮಾಣ್ಗುಂ. ಒಳಸೀರೆ ೩, ಹೊರಸೀರೆ ೩, ಜೋಳ, ಮೂರುಹಿಡಿ ಬನ್ನಿಸೊಪ್ಪು, ಇವನ್ನು ಕೂಡಿ ಹಾಕಿ ಇಡಿದು ತೆಗೆದುಕೊಂಡು ಕೂಟಗೊಳಿಸಿ ಮೇಕೆತುಪ್ಪವ ಹುಯಿದುಕೊಂಡು ಮೂರು ದಿನ ಮೆಲ್ಲಲು ಕಣ್ಣುಕಾಂಬುದು. ಹುಳಿ, ಉಪ್ಪು ಮುಟ್ಟಲಾಗದು. ಅರ್ಜುನವೆಂದರೆ ತೋರೆಮತ್ತಿ, ಸಕ್ಕರೆ, ಸಮುದ್ರದ ಫೇನ, ಇವಂ ಮೊಲೆಹಾಲಿಂದ ಅರೆದು ಕಲಸಿ ಹಚ್ಚಲು ಇರುಳುಗಣ್ಣು ಮಾಣ್ಗುಂ. ಹಿವತ್ಯರಸಾಂಜನ, ತ್ರಿಕಟುಕ, ಇದಂ ಆಡಿನ ಹಾಲಲ್ಲಿ ಹಚ್ಚಲು ಕಣ್ಣು ಕಾಣಲಕ್ಕುಂ. ತಗುತ್ತೆಂಗು, ಕೋಳಿ ಜುಟ್ಟಿನ ರಕ್ತದಿಂ ಅರೆದು ಗುಳಿಗೆಯಂ ಮಾಡಿ ಚೆಂದೆಂಗಾಯಿಎಳೆಂಸದಲ್ಲೂ, ಆ ಬೀಜ ದಲ್ಲೂ ತೇದು ಹಚ್ಚಲು ಇರುಳುಗಣ್ಣು ಮಾಣ್ಗುಂ.[1]

ನೂತಿಹುಣ್ಣಿಗೆ :—ಬಾಳೆಹೂವು, ಹುರುಳಿ, ಗೇಂಹರಳು ಇವಲ್ಲಟ್ಟು ಇಳುಹಿ, ಗೇರ ಹರಳು ಮೆಲಲು ನೂತಿ ಮಾಣ್ಗುಂ. ಹುಚ್ಚುಕಾವುಡಿಕೊನಗು, ನಿಂಬೇಹುಳಿಯಲ್ಲಿ ಅರೆದು ಅದಂ ಬತ್ತಿಯಲ್ಲಿ ರಸವ ಹಿಂಡಿಕೊಂಡು ಮೊದಲು ಬೆಲ್ಲದ ಬತ್ತಿಯಂ ಹಾಕಿ, ಆ ಹಿಂದೆ ಅದಂ ತೆಗೆದು ಈ ಔಷಧದ ಬತ್ತಿಯಂ ಹಾಕಲು ನೂತಿ ಮಾಣ್ಗುಂ. ಉತ್ತರಣಿಯ ಅಕ್ಕಿಯ ಹಿಟ್ಟನ್ನು ಕೂಡಿಸಿ ಬತ್ತಿಗೆ ಆಲದ ಹಾಲ ತೊಡೆದು ಈ ಹಿಟ್ಟಿನೊಳಗೆ ಹೊರಳಿಸಿ ಕೊನೆಗೆ ಸಕ್ಕರೆಯನ್ನು ಕೊಡುವುದು. ಮೊದಲು ಬೆಲ್ಲದ ಬತ್ತಿಯ ಹಾಕಿ, ಆ ಮೇಲೆ ಅದಂ ತೆಗೆದು ಈ ಮದನಬತ್ತಿಯನ್ನು ಹಾಕಲು ನೂತಿ ಮಾಣ್ಗುಂ.

## D 1357.

ಜ್ವರಭ್ರಮುಮೂರ್ಛೆಗಳಿಗೆ :—ಏಲಕ್ಕಿ, ಎರಡು ಬಗೆ ಜೀರಿಗೆ, ಯಷ್ಟಿಮಧುಕ, ಮೋತುಮುರ್ತಿ, ಶುಂಠಿ, ಶಿಲಾಜಿತ್, ದ್ರಾಕ್ಷೆಹಣ್ಣು, ಶ್ರೀಗಂಧ, ನೆಲ್ಲಿಚಟ್ಟು, ಕಿರುಗುನಟ,

---

[1] ತಾಲಪತ್ರಕೋಶದಲ್ಲಿ ಇದರ ನಂತರ—" ಶ್ರೀಗಂಗಾಧರಾಯನಮಃ "—ಎಂದಿದೆ.

ಇವಂ ವೊಸರ ನೀರಲ್ಲಿ ಅರೆದು ಸಕ್ಕರೆ ಬೆರಸಿಕೊಂಡು ತೆಗೆದುಕೊಳ್ಳಲು ಜ್ವರ ಭ್ರಮ ಮೂರ್ಛೆ ಹರ.

D 1359

ಪ್ರಮೇಹಕ್ಕೆ ಅಪಥ್ಯ :—

ದಧಿಘೃತಗುಡಶುಂಠೀಕ್ಷೀರಮಮ್ಲಂ ಚ ಹಿಂಗು
ರ್ಲಶುನಲವಣನಿದ್ರಾವ್ಯೈಥುನಂ ಮತ್ಸ್ಯಮಾಂಸಮ್ ।
ತ್ರಿಕಟುಕತಿಲಚೂರ್ಣಂ ನಾಲಿಕೇರಸ್ಯ ಪಿಷ್ಟಂ
ಪನಸಬದರಮೂಲಂ ಮೇಹಿನಾಂ ಶತ್ರುವರ್ಗಃ ॥

ಕೈಹುಣ್ಣು ಒಡೆಯುವದಕ್ಕೆ :—ತುತ್ತ, ಕಪ್ಪಲಿ, ಅರಿದಳ, ರಸ, ಮೇಣ, ಎಣ್ಣೆ ಬೆರಸಿ ಮರ್ದಿಸಿ ತೊಡೆಯೆ ಮಾಣ್ಗುಂ.

ಶೂಲೆಗಂಟಿಗೆ :—ಹುಣಸೆಚಿಕ್ಕೆಕೆಂಡವಾಗಲೀ, ಕರಟದ ಕೆಂಡವಾಗಲೀ ಹಾಕಲು ಶೂಲೆಗಂಟು ಮೊದಲಾದುದೆಲ್ಲ ಮಾಣ್ಗುಂ. ಸಜ್ಜರಸ, ಅರಿಸಿನ, ಇಂಗಲೀಕ, ಮೆಣಸು, ಮುಸ್ತಕೀರಸ, ತುತ್ತ, ಲವಂಗ, ಜಾಯಿಕಾಯಿ, ಮುಳ್ಳುಗೋರಟೀಸೊಪ್ಪು, ಕರಿಯನುಗ್ಗೇ ಸೊಪ್ಪು, ಕರಿನಾಭಿ, ಇಷ್ಟನ್ನು ಸಮಾನಂಗೊಂಡು ಹುಡಿಗೈದು, ಗುಳಿಗೆಯಂ ಕಟ್ಟಿ, ಮೊದಲು ಕೆಂಡದ ಹಾಗೆ ಮಾಡಿ ಹೊಗೆಯ ಹಾಕಲು ಫಿರಂಗಿಹುಣ್ಣು ಶೂಲೆ ಎಲ್ಲಾ ಮಾಣ್ಗುಂ.

ಪುರುಷವ್ಯಾಧಿಗೆ :—ಮುಸ್ತಕಿಯ ಚೂರ್ಣವಂ ಮಾಡಿ ಬೆಣ್ಣೆಯಲ್ಲಿ ಕಲಸಿ ತಳಿಗೆ ಯೊಳಗೆ ನೀರು ಹೋಯ್ದು ಮರ್ದಿಸಿ ಕಾವಿಕಲ್ಲಲ್ಲಿ ಅಲ್ಲವ ತೇದು ಪಾದರಸ ಹಣ ತೂಕ ಮರ್ದಿಸುವುದು. ತುತ್ತ, ಗಂಧಕ ಸಮಾಂಶ, ಅವೆರಡರ ಅಷ್ಟಾಂಶವಾದ ಪಾದರಸವ ಕೂಡಿಸಿಕೊಂಡು ಬೆಣ್ಣೆಯಲ್ಲಿ ತಳಿಗೆಯ ಮೇಲೆ ಜಾರಿಸಿ ಫಿರಂಗಿ. ಮೊದಲಾದ ನಾನಾಹುಣ್ಣು ಗಳು ಮಾಣುವುವು.

ಹಲಕುರುವಿಗೆ :—ನೆಗ್ಗಿಲಬೇರಂ ಆತನ ಹೆಸರು ಹೇಳಿ ತಲೆಕೆಳಗಾಗಿ ಹೂಳಲು ಮಾಣುವುದು.

ಪೀನಸಕ್ಕೆ ನಸ್ಯ :—ಗುಳ್ಳದ ಬೇರು, ನೆಲಗುಳ್ಳದ ಬೇರು, ಹಿರಿಯ ಮದ್ದು, ಕೊಮ್ಮೆ ಬೇರು, ನಾರುಬೇಳೆ, ತವಸ, ಸಿಂಧು, ಹಾವುಮೊಕ್ಕೆ ಬೇರು, ಚಿನ್ನೆಗ್ಗಿಲು, ಆಡುಸೋಗೆ, ಭದ್ರಮುಸ್ತೆ, ಚಿತ್ರಮೂಲ, ಔಡಲದ ಬೇರು, ಹಿರಭಿ, ನಾಭಿ, ನರಭೇದಿ, ಅರಿದಳ, ಮಣಿ ಸಿಲೆ, ಪಚ್ಚೆತುತ್ತ, ಕಪ್ಪಲಿ, ಮಸ್ತಕಿ, ತಾಳೀಸಪತ್ರೆ, ಬೇಲದ ಬೀಜ, ಬಿಳಿಪಾಷಾಣ, ಕೆಂಪಿನ ಪಾಷಾಣ, ಗೌರೀಪಾಷಾಣ, ಯಷ್ಟಿಬೀಜ, ಕಸ್ತೂರಿ, ಕುಂಕುಮ, ಇವಂ ಎಲ್ಲಮಂ

ಪ್ರತ್ಯೇಕ ತೂಕ ೩, ಎಳ್ಳೆಣ್ಣೆ ಬಳ್ಳ ೧, ಸುಪಾಕದಲ್ಲಿ ಅಟ್ಟು ಇಳುಹುವುದು. ಇದು ನಾಸಿಕಕ್ಕೆ ಬತ್ತಿನಸ್ಯ.[1]

ಅಪಸ್ಮಾರ :—

ಭುಕ್ತಸ್ಯ ಸದ್ಯಃಸ್ನಾತಸ್ಯ ನಿದ್ರಿತಸ್ಯೋಪವಾಸಿನಃ ।
ವ್ಯಾಯಾಮಶ್ರಾಂತದೇಹಸ್ಯ ಭೂತವಿದ್ಧಸ್ಯ ಕ್ರೋಧಿನಃ ॥
ಸುಂದರೀಣಾಂ ಚ ಸಂಯೋಗೇ ಮದ್ಯಪಾನೇ ಮತಿಭ್ರಮಃ ।
ಗಾಂಧಾರೀಭಕ್ಷಣೇ ಚೈವ ಪವನಾಭ್ಯಾಸಸಾಧನೇ ॥
ಕುಕ್ಕುಟಶ್ಯಶಮಂಡೂಕಸರ್ವಮಾಂಸಾದಿಭಕ್ಷಣೇ ।
ಅಪಸ್ಮಾರಕ್ರಾಂತದೇಹಿನಾಡೀ ಸಮ್ಯಕ್ನ ಭಣ್ಯತೆ ॥

ಭೋಜನ ಮಾಡಿದವರಿಗೆ, ಮಿಂದವರಿಗೆ, ನಿದ್ರೆಯ ಮಾಡಿ ಎದ್ದವರಿಗೆ, ಹಸಿದಿದ್ದವರಿಗೆ, ನಡೆದು ಬಂದು ಆಲಸ್ಯವಾಗಿದ್ದವರಿಗೆ, ದೈವ ಹಿಡಿದವರಿಗೆ, ಕೋಪದಲ್ಲಿದ್ದವರಿಗೆ, ಸ್ತ್ರೀಸಂಭೋಗವಾಗಿ ಇದ್ದವರಿಗೆ, ಮದ್ಯಪಾನಿಗಳಿಗೆ, ಕಜ್ಜಾಯ ತಿಂದವರಿಗೆ, ಸಾಧನ ಮಾಡಿದವರಿಗೆ, ಮಾಂಸಭಕ್ಷಕರಿಗೆ, ಇಂಥವರಿಗೆ ನಾಡಿ ದುಡುಕಾಗಿ ಆಗುವುದು.

ವೈದ್ಯಲಕ್ಷಣ :—

ವ್ಯವಹಾರೀ ಜ್ಯೋತಿಷೀ ಚ ಭೈಷಜ್ಯಕರ್ಮಕಾರಕಃ ।
ಯದಿ ಶಾಸ್ತ್ರಂ ವಿನಾ ಕುರ್ಯಾತ್ ತಮಾಹುರ್ಬ್ರಹ್ಮಘಾತಕಮ್ ॥

ವ್ಯವಹಾರಿಕನು, ಜ್ಯೋತಿಷ್ಕನು, ವೈದ್ಯನು, ಶಾಸ್ತ್ರವರಿಯದೆ ನಡೆಸಬಾರದು. ನಡೆಸಿದರೆ ಬ್ರಹ್ಮಹತ್ಯವಕ್ಕು.

ನಾಲಗೆದ್ರವಕ್ಕೆ :—ಕೋಷ್ಠ, ಮಧುಕ, ಆಕಲಕರೆ, ಪುತ್ರಜೀವಿಯ ಮಣಿ, ಕೊಮ್ಮೆಬೇರು, ಉತ್ತರಣೆಯ ಬೇರು, ತುಂಬೇಬೇರು, ಬೆಲ್ಲಗಣಿಕೆಯ ಬೇರು, ಚಿಲಕೀರೆಯ ಬೇರು, ಕಹಿಹೀರೆಯ ಬೇರು, ಬೆಂದತೊಪ್ಪೆ, ಬೆಲ್ಲವತ್ತದ ತೊಪ್ಪೆ, ಮುತ್ತು, ಹವಳ, ಕಸ್ತೂರಿ, ಕುಂಕುಮ, ಇವಂ ನೀರಿಂದ ತೇದು, ನಾಲಿಗೆ ತೊಡೆಯಲು ಬಿದ್ದ ನಾಲಿಗೆ ಬಕ್ಕು. ದ್ರವವಕ್ಕು. ಬಲಿಚೂರ್ಣ, ತ್ರಿಕಟುಕಚೂರ್ಣ, ಇವಂ ಕೈಕಾಲಿಗೆ ತಿಕ್ಕಲು ಸನ್ನಿಪಾತಮರತ್ತಿ ತಿಳಿಯುವುದು.

ಹಳೆಯ ಹುಣ್ಣಿಗೆ :—ಗಂಧಕ, ಪಾಷಾಣ, ಮಣಿಸಿಲೆ, ಪಚ್ಚೆತುತ್ತ, ರಸ, ಇವನ್ನು ಹಸುವಿನ ಬೆಣ್ಣೆಯಲ್ಲಿ ಮರ್ದಿಸಿ ತೊಡೆಯಲು ಹಳೆಯ ಹುಣ್ಣು ಮಾಣ್ಗುಂ.

---

[1] ಇದರ ನಂತರ ತಾಳಪತ್ರಕೋಶದಲ್ಲಿ—“ ನಿಂಗರಸ್ಪೈಯನ ಕರಣ ”—ಎಂದಿದೆ,

ಫಿರಂಗಿಹುಣ್ಣಿಗೆ ರಸೌಷಧಿ :—ಗಂಧಕ, ನವಸಾರ, ತಾಳಕ, ಮಣಿಸಿಲೆ, ತುತ್ಥ, ನಾಭಿ, ರಸ, ಗೇರಹರಳು, ಇವಂ ಅರೆದು, ಬೆಣ್ಣೆಯಲ್ಲಾಗಲೀ, ಎಣ್ಣೆಯಲ್ಲಾಗಲೀ ಗೇರತುಪ್ಪ ಬಿಡುವ ಹಾಗೆ ಕಾಸಿ, ಶೋಧಿಸಿ, ಆ ತೈಲವಂ ಪಾವಡೆಗೆ ತೊಡೆದು ಹುಣ್ಣಿಗೆ ಹಾಕಲು ಎಂಥಹ ಫಿರಂಗಿಹುಣ್ಣು ವಾಣ್ಗುಂ.

[1]ಲಾಜಂ ಪಾಯಸನಾರಿಕೇಳಸಲಿಲಂ ಮೂತ್ರಂ ಜಲಂ ಕಾಂಜಿಕಂ
ದ್ವಾತ್ರಿಂಶತ್ಪ್ರಮಿತಂ ತದರ್ಧಮುದಿತಂ ಪ್ರಸ್ಥಂ ರಸಂ ಚೌಷಧಮ್ ।
ತೈಲಕ್ಷೌದ್ರಘೃತಂ ಚ ವಿಂಶತಿಪಲಂ ಕ್ಷೀರಂ ಚ ತ್ರಿಂಶತ್‌ಪಲಂ
ದಧ್ನಃ ಪಂಚಕಪಂಚಕಂ ಗುಡಪಲಂ ತ್ವಷ್ಟಾದಶಂ ಚೋಚ್ಯತೇ ॥

ಹರಳುಗಂಜಿ, ಎಳನೀರು, ನೀರು, ಗೊಮೂತ್ರ, ಧಾನ್ಯಾಂಬಿಲ, ಇಷ್ಟು ಮತ್ತು ಎರಡು ಹಲಕ್ಕೆ ಒಂದು ಬಳ್ಳ, ಚೂರ್ಣ ಮೊದಲಾಗಿದ್ದಂಥವುಗಳು ೧೬ ಹಲಕ್ಕೆ ಬಳ್ಳ ೧, ಜೇನುತುಪ್ಪ, ಎಳ್ಳೆಣ್ಣೆ, ತುಪ್ಪ ಇವು ೨೦ ಹಲಕ್ಕೆ ಬಳ್ಳ ೧, ಮೊಸರು ೨ ಹಲಕ್ಕೆ ಬಳ್ಳ ೧, ಸಕ್ಕರೆ ೧೮ ಹಲಕ್ಕೆ ೧ ಬಳ್ಳ.

ಜ್ವರಕ್ಕೆ :—ರಸ, ಮದ್ದು, ನಸುಗುನ್ನಿಯ ಬೀಜ, ಸಮುದ್ರಶೋಭಬೀಜ, ಕೊಳವಳಿಕೆಬೀಜ, ನುಗ್ಗೇಬೀಜ, ಜಾಯಿಕಾಯಿ, ಜಾಯಿಪತ್ರೆ, ಭಂಗಿ, ಲವಂಗ, ಸಿರೆಹೂವು, ಪುರುಷರತ್ನ, ಲವಂಗದ ಚಿಕ್ಕೆ, ಇವಂ ಹೊವಾದ ತೆಂಗಿನಕಾಯ ನೀರಲ್ಲಿ ಅರೆದು ಆ ಕಾಯಿಗೆ ತುಂಬಿ ನುಗ್ಗೆ, ಬೆಣ್ಣೆಯನಿಕ್ಕಿ ಪಾವಡೆ ಸುತ್ತಿ ಸಿರುಮಣ್ಣುಗೊಂಡು ಕೊರ್ಮಪುಟವಿಕ್ಕಿ ಒಳಗಣಕಾಯಿಯಷ್ಟು ಬೆಲ್ಲವ ಹಾಕಿ ಅರೆದು ಗಜ್ಜುಗ ಪ್ರಮಾಣದಲ್ಲಿ ಗುಳಿಗೆಯಂ ಮಾಡಿ ಬೆಲ್ಲ, ತುಪ್ಪದಲ್ಲಿ ಮೆಲ್ಲುವುದು. ಪಥ್ಯ ಮಧುರಕ್ಷಾರ, ಹಣ್ಣು ಕಾಯಿ ಮೆಲ್ಲುವುದು. ಲವಣಾಮ್ಲವರ್ಜ್ಯ.

(ಜ್ವರದೊಳು) ಲೇಪಕ್ಕೆ :—ರಸ ೧ ತೊಲ, ಹಾಗಲದಕಾಯಿರಸ ಪಾದರಸದಲ್ಲಿ ಮರ್ದಿಸಿ ನಸುಗುನ್ನಿಬೇರಂ ತೇದು ಭರಣಿ ತುಂಬಿ ಗುಳ್ಳದ ಹಣ್ಣಿನ ರಸದಲ್ಲಿ ಪಚ್ಚೆಕರ್ಪೂರವ ಮರ್ದಿಸಿ ಭರಣಿ ತುಂಬಿಸುವುದು.

ಹೊಟ್ಟೆಬೇನೆಗೆ :—ಅಪಿನಿ, ಅಳಲೇಕಾಯಿ, ಜಾಯಿಕಾಯಿ, ಗಜ್ಜುಗದ ತಿರುಳು, ಶುಂಠಿ, ಇವು ಪ್ರತ್ಯೇಕ ೧ ತೊಲ, ಇವೆಲ್ಲವನ್ನು ಅರ್ಧಭಾಗವಂ ಎಣ್ಣೆಯೊಳಗೆ ಕೆಂಪಾಗುವ ಹಾಗೆ ಹುರಿದು, ಆ ಹಸಿಯನ್ನೂ ಈ ಹುರಿದುದನ್ನೂ ಆ ಎಣ್ಣೆಯಲ್ಲಿ ಹನಿಸಿಕೊಂಡು ಸಣ್ಣದಾಗಿ ಅರೆದು ಲೇಹ್ಯದ ಹಾಗೆ ಮಾಡಿರಿಸಿಕೊಂಡು ಇರುವುದು. ಗ್ರಹಣಿ ಅತಿಸಾರ ಎಲ್ಲಾ ತೀರ್ಗುಂ.

---

[1] ಇದಕ್ಕಿಂತ ಮುಂಚೆ ತಾಳಪತ್ರಕೋಶದಲ್ಲಿ ರೋಗದ ನಿರ್ದೇಶವಿಲ್ಲ, ಮದ್ದಿನ ಕ್ರಮ ಮಾತ್ರವಿದೆ.

ಹೊಟ್ಟೆಕಳೆದರೆ :—ಕೊಳವಳಿಕೆಬೀಜ, ಹಂಗರೇ ಬೀಜ, ೧ ಸೊಲ್ಲಗೆ ಪುರುಷರತ್ನ, ೧ ಸೊಲ್ಲಗೆ ಮುತ್ತುಗದ ಬೀಜ, ಇಷ್ಟು ಬೀಜ ಬೆಲ್ಲ ಮೂರು, ಇವೆಲ್ಲವನ್ನು ಅರೆದು ರೊಟ್ಟಿಯಂ ಸುಟ್ಟು ಅಡಿಕೆಗಾತ್ರವ ಮುದ್ದು, ಹೊಟ್ಟೆ ಕಳೆದವರಿಗೆ ಎಲವದ ಹಗಿನೂ, ಆಲದ ಮೊಗ್ಗು, ಏಲಕ್ಕಿ, ಜೀರಿಗೆ, ಈ ನಾಲ್ಕು ಸಾಮಾನು ಸರಿಯಾಗಿ ಕೊಡುವುದು. ಮಧುರಾಕ್ಸಾರ, ನಿಂಬೇಹುಳಿಯೂ ಶಾಂತಿ.

ವಾಂತಿ ನಿಲ್ಲುವುದಕ್ಕೆ :—ಬಿಳುಗಾರದ ಲವಲೂ, ನೀರುಳ್ಳೀರಸ, ಜೇನುತುಪ್ಪ, ನಿಂಬೇ ಹುಳಿಯಲ್ಲಿ ಚೆನ್ನಾಗಿ ಮರ್ದಿಸಿ ಕೊಳ್ಳೆ, ವಾಂತಿ ನಿಲ್ಲುವುದು. ಬಿಳಿಪಾಷಾಣ, ಪಚ್ಚೆತುತ್ಥ, ಗೌರಿಪಾಷಾಣ, ಕಪ್ಪಲಿ, ಮಣಿಸಿಲೆ, ಇಷ್ಟನ್ನೂ ಸಮಾನತೂಕವಂ ಉಮ್ಮತ್ತದ ರಸದಲ್ಲಿ ಭಾವನೆ, ಮುತ್ತುಗದ ಚಕ್ಕೇಸದಲ್ಲಿ ಭಾವನೆ, ಮದ್ದಿನ ಪ್ರಮಾಣ ಗುಳಿಗೆ.

ಗುಲ್ಮಕ್ಕೆ :—ಕಹಿಕೋಟಿಕಾಯಿ ೫, ......ಳಿಕಾಯಿ ೮, ಕಲ್ಲುಪ್ಪು ಬಳ್ಳ ೧, ಬೆಳ್ಳುಳ್ಳಿಬೇಳೆ ಎರಡು ಮಾನ, ಶುಂಠಿ, ಹಿಪ್ಪಲಿ, ಮೆಣಸು, ತ್ರಿಫಲೆ ಪ್ರತ್ಯೇಕ ಒಂದೊಂದು ಮಾನ ಇವಂ ೮ ಗ ಅಲ್ಲವಂ ಕೂಡಿ ಸೂಕ್ಷ್ಮಚೂರ್ಣವಂ ಮಾಡಿ ಕೊಟ್ಟೆಯಕಾಯ ಒಳಗೆ ಎಲ್ಲ ಚೂರ್ಣವಂ ತುಂಬಿ ಅದಂ ಗಡಿಗೆಯಲ್ಲಿರಿಸಿ ಸಿರುಮಣ್ಣುಗೊಂಡು ತಿಂಗಳು ತಿಪ್ಪೆಯಲ್ಲಿ ಹೂಳಿ ತೆಗೆದು ತುಪ್ಪದಿಂದ ಕೊಳ್ಳಲು ಗುಲ್ಮ ಮಾಣ್ಗುಂ.[1]

ಮೂತ್ರಕೃಛ್ರಕ್ಕೆ :—ತಿಗಡೆ, ತ್ರಿಫಲೆ, ಸಮಾಸಿಸಿ, ಕರ್ಪೂರ, ಸಿಲಾದಾಯಿ, ಏರಂಡ ರಸ, ಈಚೂರ್ಣ ಜೇನುತುಪ್ಪದಲ್ಲಿ ತೆಗೆದುಕೊಳ್ಳೆ ಮೇಹದವರಿಗೆ ವಿವೇಕವಹುದು. ಮುಳ್ಳು ಮುತ್ತುಗದ ಒಳಸಾರಂ ಚೂರ್ಣವಂ ಮಾಡಿ ಕರ್ಪೂರ, ಶಿಲಾಧಾತು ಬೆರಸಿ ಮಜ್ಜಿಗೆ, ಜೇನು ತುಪ್ಪದಲ್ಲಿ ಕೊಳ್ಳೆ ಮೂತ್ರವ್ಯಾಧಿ ಮಾಣ್ಗುಂ.

ಕಾಲಬೀಟೆಗೆ :—ಕತ್ತುರಿಯ ಕಾಯಂ, ತುಂಬೇಸೊಪ್ಪಂ ಅರೆದು ಕಾಲಿಗೆ ಪೂಸೆ ಗೆಲ್ಗುಂ. ಆಲದ ಹಾಲು, ಎಣ್ಣೆ, ಜೇನುಮೇಣವಂ ಕಾಸಿ ತೊಡೆಯಲು ಕಾಲ ಬೀಟೆ ಹರ. ಹಿಡಿಹಿಡಿಕೆಯನ್ನೂ, ಮೆಣಸನ್ನೂ ಸೇರಿಸಿ ಅಂಬಿಲದಲ್ಲಿ ತೊಳೆಯಲು ಗರ್ಭುವಾಗದು.

---

[1] ಇದರ ನಂತರ ತಾಳಪತ್ರಕೋಶದಲ್ಲಿ ಕೆಳಗಿನ ಶ್ಲೋಕವಿದೆ :—

ಆವರ್ತಃ ಸಂಶಯಾನಾಮವಿನಯಭವನಂ ಪತ್ತನಂ ಸಾಹಸಾನಾಂ ।
ದೋಷಾಣಾಂ ಸನ್ನಿಧಾನಂ ಕಪಟಶತಮಯಂ ಕ್ಷೇತ್ರಮಪ್ರತ್ಯಯಾನಾಂ ॥
ಸ್ವರ್ಗದ್ವಾರಸ್ಯ ವಿಘ್ನೋ ನರಕಪುರಮುಖಂ ಸರ್ವಮಾಯಾಕರಂಡಂ ।
ಸ್ತ್ರೀಯನ್ತ್ರಂ ಕೇನ ಸೃಷ್ಟಂ ವಿಷಮಮೃತಮಯಂ ಪ್ರಾಣಿಲೋಕಸ್ಯ ಪಾಶಃ ॥

ಭರ್ತೃಹರಿ ಶೃಂಗಾರಶತಕ, ಶ್ಲೋಕ ೪೮.

ಮಸಕಿಗೆ :—ತುರುವೆಯ ಸೊಪ್ಪನ್ನು ಹಿಸುಕಿ ಮೂಸಿದರೆ, ಕಾಡಸಂಪಿಗೆತಿಗುಡು, ಇಂಗುಳದ ಬೇರಿನ ತಿಗುಡು, ಚೂರ್ಣವಂ ಮಾಡಿ, ಅದರ ಸಮಾನ ಕಣಿಕೆ ಆಡಿನ ಹಾಲಲ್ಲಿ, ಆ ತುಪ್ಪದಲ್ಲಿ ತೆಗೆದುಕೊಳ್ಳಲು ಎಂತಹ ಕೈಮಸುಕು ಸಹ ಮಾಣ್ಗುಂ. ನೀಲೀರಸಮಂ ಅರಿವೆಗೊತ್ತಿ ತೊಡೆಯಲು ಕೈಮಸಕು ಹರ. ಕೊಳವಳಿಕೆಯ ಬೀಜವನ್ನು ಮೊಲೆಹಾಲಲ್ಲಿ ಅರೆದು ಪೂಸೆ ಮಕ್ಕಳ ರೋಗ ಹರ.

ಶೂಲೆಗೆ:—ಮಾಕ್ಷಿಕ, ರಸ, ಗಂಧಕ, ತಾಳಕ, ಇಂಗಲೀಕ, ತುತ್ಥ, ಮಣಿಸಿಲೆ, ಕಪ್ಪಲಿ, ಪಟಿಕೆ, ಬಿಳುಗಾರ, ಮುಸ್ತ್ರಕಿ, ಇಲಿಪಾಷಾಣ, ಛಿದ್ರಪಾಷಾಣ, ಕೆಂಪಿನ ಪಾಷಾಣ, ನಾಭಿ, ಮುರುದಾಳ, ಶೃಂಗಿ, ಕೋಷ್ಠ, ಚಂದ್ರ, ಇಷ್ಟನ್ನೂ ಸಮಾನತೂಕ ವಸ್ತ್ರಗಾಳಿತವಂ ಮಾಡಿ ಇವೆಲ್ಲವುಗಳ ಸಮಾನ ಶೋಧಿಸಿದ ಜೇನುಮೇಣ, ಇವೆಲ್ಲವುಗಳ ಸಮಾನ ಚಿಟಾಡಲದ ಎಣ್ಣೆ, ತುಪ್ಪ, ಎಳ್ಳೆಣ್ಣೆ, ಈ ಎಣ್ಣೆತುಪ್ಪಗಳ ಕಾಸಿ ಅದರ ಕೂಡೆ ಮೇಣವಂ ಹಾಕಿ ಮೇಲೆ ಚೂರ್ಣವಂ ಹಾಕಿ ಚೆನ್ನಾಗಿ ಕಾಸಿ ಎಲ್ಲವನ್ನೂ ಸಮ್ಮಿಲಿತವಂ ಮಾಡಿ ಇಳುಹಿಕೊಂಡು ಸಕಲಫಿರಂಗಿಹುಣ್ಣು, ಶೂಲೆ, ಎಂಭತ್ತುತರದ ಫಿರಂಗಿಯಿಂದ ಗಂಟುಕಟ್ಟಿದರೆ ಏಳು ದಿನ ಮೈಗೆ ಜಾವ ಜಾವ ಮರ್ದನೆ.

ಸರ್ವವ್ರಣಗಳಿಗೆ :—ಶುದ್ಧರಸ ೧ ತೂಕ, ಗೋಧಿಹಿಟ್ಟು ೧ ಸೊಲ್ಲಗೆ, ಕಂಭತ್ತದ ಅಕ್ಕಿಹಿಟ್ಟು ಸೊಲ್ಲಗೆ ೧, ಜೇನುತುಪ್ಪ, ಇವನ್ನು ಅರೆಯುವ ಕಲ್ಲಿನಲ್ಲಿ ಚೆನ್ನಾಗಿ ಇಡಿದು, ಗಜ್ಜುಗದ ಪ್ರಮಾಣ ಗುಳಿಗೆಯಂ ಮಾಡಿ ಉದಯಸಂಜೆಯಲ್ಲಿ ಜೇನುತುಪ್ಪದಲ್ಲಿ ಒಂದು ಗುಳಿಗೆಯಂ ನುಂಗುವುದು. ದಿನ ೭ ಕ್ಕೆ ೧೪ ಗುಳಿಗೆ. ಪಥ್ಯ ಹಾಲನ್ನ. ೭ ದಿನಕ್ಕೆ ಗುಣ. ಮೇಣುಹುಣ್ಣು, ಗಂಡುಹುಣ್ಣು, ಸರ್ವವ್ರಣಗಳು ಗುಣ.

ಗ್ರಹಣಿಗೆ :—ಜಾಯಿಕಾಯಿ, ಹಿಪ್ಪಲಿ, ಅಪಿನಿ, ಭಂಗಿ, ಲವಂಗ, ಉಮ್ಮತ್ತದ ಬೀಜ, ಏಲಕ್ಕಿ, ಸಮುದ್ರಶೋಭೆಯ ಬೀಜ, ಇವನ್ನು ಸಮಾನಂಗೊಂಡು ಚೂರ್ಣಿಸಿ ಭಂಗಿ ಸೊಪ್ಪಿನ ರಸದಲ್ಲಿ ಅರೆದು ಗುಂಜಾಪ್ರಮಾಣದಲ್ಲಿ ಗುಳಿಗೆಯಂ ಮಾಡಿ ಸಕ್ಕರೆ, ಜೇನುತುಪ್ಪದಲ್ಲಿ ಕೊಳ್ಳೆ ಸ್ತಂಭನೆ, ಮಧುರಾಹಾರ ಪಥ್ಯ. ಗ್ರಹಣಿಗೆ ಅನುಪಾನವರಿತು ಕೊಡುಯುವುದು.

ಹೊಟ್ಟೆಬೇನೆಗೆ :—ಅಪಿನಿ, ಅಳಲೇಕಾಯಿ, ಜಾಯಿಕಾಯಿ, ಗಜ್ಜುಗದ ತಿರುಳು, ಶುಂಠಿ, ಇವುಗಳ ಪ್ರತ್ಯೇಕ ತೊಕ್ಕು, ಇವೆಲ್ಲವಂ ಅರ್ಧಭಾಗವಂ ಎಣ್ಣೆಯೊಳಗೆ ಕೆಂಪಾಗುವ ಹಾಗೆ ಹುರಿದು ಆ ಕಾಯನ್ನು ಎಣ್ಣೆಯ ಹಸಿಸಿಕೊಂಡು ಸಣ್ಣವಾಗಿ ಅರೆದು ಲೇಹ್ಯದ ಹಾಗೆ ಮಾಡಿಂಸಿಕೊಂಡು ಅವರ ತ್ರಾಣವರಿತು ಕೊಳ್ಳುವುದು, ಮಕ್ಕಳಿಗೆ ತಾಯ ಮೊಲೆಗೆ ತೊಡೆಯುವುದು. ಅತಿಸಾರ, ಗ್ರಹಣಿ ಮಾಣ್ಗುಂ.

ಪೀನಸಕ್ಕೆ :—ಗಂಧಕ, ಹುಲಿಯುಗುರು, ಬಜೆ, ನುಗ್ಗೆಯ ಬೇರು, ತುಳಸಿ, ಪದಕ, ಎಣ್ಣೆ, ಅಜಮೂತ್ರದಲ್ಲಿ ಬೆರಸಿ ಅಟ್ಟು ನಸ್ಯಂಗೈಯ್ಯೆ ಪೀನಸ ಮಾಣ್ಗುಂ.

ಸರ್ವಾಂಗದ ತಿಮಿರಕ್ಕೆ :—ಕೆಂಪಿನ ಕಣಿಗಿಲುಬೇರ ತೊಕ್ಕು, ಕಕ್ಕೇಚಿಗುರು, ಚಗಿತಿಬೀಜ, ವಾಯಿವಿಳಂಗ, ಸೈಂಧವ, ಅರಿಸಿನ, ಇವಂ ನಿಂಬೇಹುಳಿಯಲ್ಲರೆದು ಲೇಪವಂ ಮಾಡೆ ಮೈಯ ಸರ್ವತಿಮಿರ ಮಾಣ್ಗುಂ.

ಕಜ್ಜಿಗೆ :—ಕಾಚನ್ನು ಕರಿಹಾಗಲದ ರಸದಲ್ಲಿ ಪೂಸಲು ಕಜ್ಜಿ ಮಾಣ್ಗುಂ. ಅರಸಿನ, ಎಕ್ಕೆಯ ಹಾಲು, ಗೇರ ಹರಳು, ಹೊಂಗೇಬೀಜ, ಇವನ್ನು ಸಮಾನಂಗೊಂಡು ಎಣ್ಣೆಯಲ್ಲಟ್ಟು ಪೂಸಲು ಸರ್ವಕಜ್ಜಿ ಮಾಣ್ಗುಂ.

ಬಾಹುಭಗದಳಕ್ಕೆ :—ಕಹಿಪಡವಲದ ಬೇರು, ಕಾಡಹೀರೆಯ ಬೀಜ, ಇವಂ ಔಡಲದ ಎಣ್ಣೆಯನಡುವ ಹಾಗೆ ಅಟ್ಟು ತೆಗೆದು, ಕೋಳಿಕುಟುಮನ ಗೆಡ್ಡೆ, ವತ್ಸನಾಭಿ, ಇವಂ ಆ ತೈಲದೊಳರೆದು ಇಂಸಿ ಮೊದಲು ಮಾಂಸವನ್ನು ಕಟ್ಟುವುದು. ಆ ಮಾಂಸವಂ ಹುಳು ತಿಂದ ಬಳಿಕ ಮೊದಲು ಅರೆದ ಮದ್ದಿನ ಬತ್ತಿಯಂ ಹಾಕುವುದು. ಮತ್ತೆ ಹಿಂದೆ ಹೇಳಿದ ಹಾಗೆ ಮಾಂಸವ ಕಟ್ಟುವುದು. ಮತ್ತೆ ಬೆಲ್ಲದ ಬತ್ತಿಯ ಹಾಕುವುದು. ಹುಳು ಸತ್ತು ಬಾಹುಭಗದಳ ಮಾಣ್ಗುಂ. ಅದಕ್ಕೆ ಕರಿ—ದನವಿನ ಕರು ಸಹ (ಇದ್ದ) ತೊಟ್ಟೆಯ ಸೊಪ್ಪು, ಇದಂ ಹಂಚಿನಲ್ಲಿ ಅತಿಕರುಕಾಗಿ ಹುರಿದು ಮತ್ತೆ ಮೆಣಸಿನ ಕರಿಯ ಮಾಡಿಕೊಂಡು ಅದನ್ನು ಒಂದಾಗಿ ಬೆರಸಿಕೊಂಡು ಎಣ್ಣೆಯ ತೊಡೆದು ಕರಿಯ ಹಾಕುವುದು. ಆ ಹುಣ್ಣು ಈ ಕರಿ ಆ ಎಣ್ಣೆಯಿಂ ಮಾಣ್ಗುಂ. ಈ ತೈಲದಿಂ ಕಜ್ಜಿ, ಇಸುಬಿನ ಹುಣ್ಣು, ಊತಿ, ಪಳೇಹುಣ್ಣು, ಸಿರಮಾಲೆ, ಗಂಡಮಾಲೆ, ದನವಿನವ್ರಣ, ಇವೆಲ್ಲಾ ಮಾಣ್ಗುಂ.

ಶ್ವಾಸಕ್ಕೆ :—ಇಂಗಲೀಕ ತೂಕ ೧, ಚವ್ಯ ತೂಕ ೨, ವಿಳಂಗ ತೂಕ ೩, ಸೈಂಧವ ತೂಕ ೪, ಬಿಡುಲವಣ ತೂಕ ೫, ಶುಂಠಿ ತೂಕ ೬, ಮೆಣಸು ತೂಕ ೭, ಹಿಪ್ಪಲಿ ತೂಕ ೮, ಕಪ್ಪ ತೂಕ ೯, ಅಳಲೇಕಾಯಿ ತೂಕ ೧೦, ಚಿತ್ರಮೂಲ ತೂಕ ೧೧, ಅಜಮೋದ ತೂಕ ೧೨, ಇವೆಲ್ಲವಂ ಚೂರ್ಣವಂ ಮಾಡಿ ಇಮ್ಮಡಿ ಸಕ್ಕರೆ ಬೆರಸಿ ಮೂರು ತೂಕಮಂ ಸೇವಿಸಿದರೆ ಶ್ವಾಸ, ಅಷ್ಟಗುಲ್ಮ, ಅಜೀರ್ಣ, ಇವೆಲ್ಲ ಮಾಣುವುವು.

ಫಿರಂಗಿಶೂಲೆಗೆ:—ರಸ, ಗಂಧಕ, ಮಣಿಸಿಲೆ, ಜೇಪಾಳ, ಗುಗ್ಗುಳ, ಮೆಣಸು, ಬಿಳಿಯ ಪಾಷಾಣ, ಹಳದಿಯ ಪಾಷಾಣ, ಇವಂ ಚೂರ್ಣವಂ ಗೈದು, ಚಿಟ್ಟಾಡಲದೆಣ್ಣೆ, ಎಳ್ಳೆಣ್ಣೆ, ಇವಂ ಕೊಂಡು ತೈಲಪಾಕಕ್ರಮದಲ್ಲಿ ಒಲೆಯ ಮೇಲೆ ಇಟ್ಟು ತೂಕ ೧೦ ಗೇರಹರಳ ಕುಟ್ಟಿ ಬೀಜವ ತೆಗೆದು ಬಿಂಕದ ಹಾಗೆ ಕಾಸಿ ಆ ಚೂರ್ಣವಂ ಹಾಕಿ ಮೂರು ಕುದಿ ಬರಲು ಅಟ್ಟು ಇಳುಹಿ ಭೂಮಿಯಲ್ಲಿ ೧೫ ದಿನವಿರಿಸಿ ತೆಗೆದು ಫಿರಂಗಿಶೂಲೆಯಾಗಿದ್ದ ಠಾವಿಗೆ ದಿನ ಒಂದಕ್ಕೆ ಮೂರುಬಾರಿ ತೊಡೆದು ಮಾಯಲು ೫ ದಿನದ ಮೇಲೆ ಕೀವು ಬರುವುದು. ಪಥ್ಯ ಹಾಲೋಗರ, ಕುರುಕುಸಾಲೆಯ ಸೊಪ್ಪು. ಮಧುರಾಕ್ಷಾರವನುಂಬುದು.

ವಿರೇಚಕಕ್ಕೆ :— ಇಂಗಲೀಕ, ತ್ರಿಕಟುಕ, ಟಂಕಣ, ತಿಗಡೆ, ಸೈಂಧವ, ಬಜೆ, ದಂತಿ, ಇಂಗು, ವಿಳಂಗ, ಅಜಮೋದ, ಓಮ, ಇವು ಪ್ರತ್ಯೇಕ ಸಮ, ಇವೆಲ್ಲವುಗಳ ಸಮ ಜೇಪಾಳ, ಇವಂ ಕೂಡಿ ನಿಂಬೇ ಹಣ್ಣಿನ ರಸದಲ್ಲಿ ಒಂದು ಜಾವ ಮರ್ದಿಸಿ ಗುಂಜಿಯ ಪ್ರಮಾಣದಲ್ಲಿ ಗುಳಿಗೆಯಂ ಮಾಡಿ ನೆಳಲಲ್ಲಿ ಒಣಗಿಸಿ ಉದಯದಲ್ಲಿ ಬಿಸಿನೀರು, ಬೆಲ್ಲದಲ್ಲಿ ಕೊಳ್ಳಲು ವಿರೇಕವಾಗುವುದು.

ವಿರೇಚಕಕ್ಕೆ :—

ತ್ರಿಕಟುತ್ರಿಫಲಾಶೂಕಗಂಧಪಾಷಾಣಟಂಕಣೈಃ ।
ಸರ್ವೈಃ ಸಮಾಸನೇಪಾಳಂ ಕುಮಾರೀರಸಸಂಯುತಂ ॥
ಮರ್ದಯೇದ್ದಿನಮೇಕಂ ತು ವಟೀವಲ್ಲಪ್ರಮಾಣಕಂ ।
ಉಷ್ಣೋದಕೇನ ಸಂಪೀತ್ವಾ ರಾಜಯೋಗ್ಯವಿರೇಚನಂ ॥
ಕಫಪಿತ್ತಹರಂ ಪ್ರೋಕ್ತಮಾಮತೀತಜ್ವರಾಪಹಂ ।
ವಿಶೇಷಾತ್ ಕಾಯಸಿದ್ಧ್ಯರ್ಥಂ ಕಾಯಾನಲಸುದೀಪನಂ ॥

ಪುರುಷವ್ಯಾಧಿಗೆ :— ಬಿಳಿ ಔಷಧ—ರಸ, ಹೊನ್ನೇತ್ರೊಕ್ಕು, ತುತ್ತ, ಪಟಿಕೆ ಮೂರು ವರಹ ತೂಕ, ಮುಸ್ತಕಿ ಐದು ವರಹ ತೂಕ, ಘೂಸದ ಹಕುಕು ಮೂರು ವರಹ ತೂಕ, ಬೆಣಚಿನ ಕಲ್ಲ ಪುಡಿ ನಾಲ್ಕು ವರಹ ತೂಕ, ಇಷ್ಟನ್ನೂ ಒಳ್ಳೇಎಣ್ಣೆಯಲ್ಲಿ ಮರ್ದಿಸಿ, ಅಲ್ಲ, ಬಿಸಿನೀರ ಬಿಟ್ಟು ಕೊಂಬುದು. ಇದು ಪುರುಷವ್ಯಾಧಿಗೆ ಸಿದ್ಧಪ್ರಯೋಗ.

ಪೀನಸಕ್ಕೆ :— ...... ......ಕಷ್ಟ, ಅರಿವಳ, ಈ ನಾಲ್ಕು ಪ್ರತ್ಯೇಕ ಒಂದು ತೂಕ, ರಸಾಂಜನ, ಬಿಳಿಪಾಷಾಣ, ಗೌರೀಪಾಷಾಣ. ಈ ಮೂರು ಪ್ರತ್ಯೇಕ ಅರ್ಧ ತೂಕ, ಏಲಕ್ಕಿ, ಲವಂಗ, ಮೆಣಸು, ಕಚೋರ, ಕೋಷ್ಟ. ಇವು ಪ್ರತ್ಯೇಕ ವರಹ ತೂಕವ ಹಾಕಿ ಕಾಸಿ ನಸ್ಯವ ಮಾಡೆ ಸರ್ವಪೀನಸ ಹರ.

ಕರ್ಣಶೂಲೆಗೆ :— ಬಜೆ, ಇಂಗು, ದೇವದಾರು, ಸೈಂಧವ, ಕೋಷ್ಟ, ಇವಂ ಸಮಾನಂಗೊಂಡು ಚೂರ್ಣವಂ ಮಾಡಿ ಆಕಳ ಸಗಣಿ, ರಸದಿಂ ಕೂಡಿ ಅಡಿಗೆಯಂ ಮಾಡಿ ಕಿವಿಯಲ್ಲಿ ಎರೆಯೆ ಕರ್ಣಶೂಲೆ ಮಾಣ್ಗುಂ. ಸೈಂಧವವನ್ನು ಹೋತನ ಮೂತ್ರದಲ್ಲರೆದು ಕಿವಿಯಲ್ಲಿರೆಯೆ ಕರ್ಣಶೂಲೆ ಮಾಣ್ಗುಂ. ಕೆಂಪಿನ ದಾಸವಾಳದ ಮರದ ಒಳನಾರು, ಜೀರಿಗೆ, ಏಲಕ್ಕಿ, ಕೆಂದೆಹಸುವಿನ ಹಾಲಲ್ಲಿ ಕುಟ್ಟಿ ಅರೆದು ರಾಯಪುರಿಯ ಸಕ್ಕರೆಯ ಹಾಕಿ ಮೂರು ದಿನ ಅರೆದುದಂ ಉದಯದಲ್ಲಿ ತೆಕ್ಕೊಳ್ಳುವುದು. ಹಾಲೋಗರ ಪಥ್ಯ.

ಹುಳುಕಡ್ಡಿಗೆ :— ದರೆಜ್ಜುಬೆಗುರ ನಿಂಬೆಯ ಹುಳಿಯಲ್ಲಿ ಅರೆದು ಹುಳುಕಡ್ಡಿಯ ಬೆರಣಿಯಲ್ಲಿ ಮಜಿಗೆಂಪ ಮಾಡಿ ತೊಡೆಯೆ ಹುಳುಕಡ್ಡಿ ಮಾಣ್ಗುಂ. ನೇರಳೆಹಣ್ಣಾಂ ಬೆಂಕಿಗೆ ಹಾಕಿ ಕಾಸಿ ರಸವ ತೆಗೆದು ನೆಲಾವರೇಬೇರಂ ತೇದು ಬೆರಣಿಯಲ್ಲಿ ಮಜಿಗೆಂಪ ಮಾಡಿ ತೊಡೆಯೆ ಹುಳುಕಡ್ಡಿ ಮಾಣ್ಗುಂ.

ರಕ್ತವಮನಕ್ಕೆ :—ಮರಗೆಡ್ಡೆಸೊಪ್ಪು, ಮರಹತ್ತಿಸೊಪ್ಪು, ಈ ಎರಡನ್ನೂ ಸಮಾನವಾಗಿ ತೆಗೆದುಕೊಂಡು ತುಳಿದು ಒಂದು ಸೊಲ್ಲಿಗೆ ರಸವ ತೆಗೆದುಕೊಂಡು ಶೋಧಿಸಿಕೊಂಡು ಆ ರಸವನ್ನು ಕುಡಿಸುವುದು. ಆರಸವ ನಡುನೆತ್ತಿಗೊತ್ತಿ ಬಾಯಲ್ಲಿ ಸುರಿಯುವ ರಕ್ತ ಮೂಗಿನಲ್ಲಿ ಸುರಿಯುವ ರಕ್ತ ಮೂರು ದಿನ ತೆಗೆದುಕೊಳ್ಳೆ ನಿಲ್ಲುವುದು.

ನೀರಕೊಂಬಿಗೆ :—ನರಗುಂಜಿಸೊಪ್ಪು ತಂದು ನೀರ ಬಿಟ್ಟುಕೊಂಡು ತುಳಿದು ಸೊಲ್ಲಗೆ ರಸವ ತೆಗೆದು ಅದನ್ನು ಹಸುವಿನ ಮಜ್ಜಿಗೆ ಬೆರಸಿ ಕೊಳ್ಳೆ ನೀರಕೊಂಬಿನ ವ್ಯಾಧಿ ಮಾಣ್ಗುಂ. ಉಮ್ಮತ್ತದ ರಸ, ಮೂರುಬೊಟ್ಟು ಹಸುವಿನ ಮಜ್ಜಿಗೆಯಲ್ಲಿ ಕುಡಿಯಲು ಹಿಂದೆ ಹೊಟ್ಟೆ ಹರಿದು ಮುಂದೆ ಕಾರುವುದು ನಿಲ್ಲುವುದು.

ಹೊಟ್ಟೆಶೂಲೆಗೆ :—ಜೆಣತಕ್ಕಿಯ ನೆನೆಯಿಸಿ ಸಣ್ಣಾವಾಗಿ ಅರೆದುಕೊಂಡು ನಿಂಬೇಹಣ್ಣನ್ನು ಕತ್ತಿಯಲ್ಲಿ ಇರಿದು ತುಂಬಿ ಕೆಸ್ವಂಗಿನಲ್ಲಿ ಪುಟವ ಹಾಕಿ ಎರಡು ಹೋಳನ್ನೂ ಮೆಲ್ಲಲು ಆ ಕ್ಷಣವೇ ಹೊಟ್ಟೆಶೂಲೆ ಮಾಣ್ಗುಂ. ಯವಕ್ಷಾರ, ಮೆಣಸಿನ ಪುಡಿ, ಈ ಎರಡನ್ನೂ ನಿಂಬೇಹಣ್ಣಿನ ರಸದಲ್ಲಿ ಕೊಡಲು ಆ ಕ್ಷಣವೇ ಹೊಟ್ಟೆಶೂಲೆ ಮಾಣ್ಗುಂ.

ಹೊಟ್ಟೆಶೂಲೆಗೆ :—ನಾರುಬೇಳೆ, ಅಗುಶುಂಠಿ, ಗಂಟುಭಾರಂಗಿ, ಈ ಮೂರನ್ನೂ ಕಷಾಯವಂ ಕಾಸಿ ಬೆಳುಗಾರವಂ ಬೆಂಕಿಯಲ್ಲಿ ಶುದ್ಧಿಸಿಕೊಂಡು ಕಷಾಯದಲ್ಲಿ ಕೊಳ್ಳೆ ಹೊಟ್ಟೆಶೂಲೆ ಮಾಣ್ಗುಂ. ಬೆಳುಗಾರವ ಬೆಂಕಿಯಲ್ಲಿ ಶುದ್ಧಿಸಿ ಚಿಟವ್ರಡಲದ ಎಣ್ಣೆಯಲ್ಲಿ ಕೊಳ್ಳೆ ಹೊಟ್ಟೆಶೂಲೆ ಮಾಣ್ಗುಂ. ಹಿಪ್ಪಲಿ, ಹಿಪ್ಪಲಿಮೂಲ, ಚವ್ಯ, ಚಿತ್ರಮೂಲ, ಶುಂಠಿ, ಈ ೫ ರ ಕಷಾಯವಂ ಕಾಸಿ ಕೊಳ್ಳೆ ಪಂಚಶೂಲೆ ಮಾಣ್ಗುಂ.

ಮೂತ್ರ ಬಿಡುವುದಕ್ಕೆ—ಬಿಳಿಸಟ್ಟುಗದ ರಸ, ಇಲಿಕಿಕ್ಕೆ, ಜೇಪಾಳದ ಬೀಜ, ಬಿಳಿಗುರುಗುಂಜಿ, ಬಿಳಿಸಟ್ಟುಗದರಸದಲ್ಲಿ ಮರ್ದಿಸಿ ಕಬ್ಬಿಣದ ಸಾಟಿನಲ್ಲಿ ಬಿಸಿಮಾಡಿಸಿ ಹೊಕ್ಕುಳು ತಪ್ಪಿಸಿ ಕೆಳಗೆ ಲೇಪವಂ ಮಾಡೆ ಮೂತ್ರ ಬಿಡುವುದು.

ಛರ್ದಿಗೆ :—ಬೇಲದಹಣ್ಣಿನ ತಿರುಳು, ಹಿಪ್ಪಲಿ, ನೆಲ್ಲಿಚಟ್ಟು, ಇದು ಒಂದು ಯೋಗ. ತ್ರಿಫಲೆ, ಶುಂಠಿ, ಲಾಜ, ಇದು ಒಂದು ಯೋಗ. ಸೀರುಳ್ಳಿ ಬೀಜದ ತಿರುಳು, ಮಾವಿನಬೀಜದ ತಿರುಳು, ಇದು ಒಂದು ಯೋಗ. ಈ ಯೋಗದೊಳು ಆವುದೊಂದು ಯೋಚಿಸಿ ಕೊಳ್ಳೆ ಛರ್ದಿ ಹರ.

ರಕ್ತಪ್ರಮೇಹಕ್ಕೆ :—ಬೂದಿಬಾಳೇಹಣ್ಣು ಕೂಡಿ ೫ ಕರ ಅಷ್ಟಿ ಆಗಸೇಮರದ ಒಳನಾರು ತಳಿಗೆ ಹಾಕಿ ಕಿವಿಚಲು, ಒಳ್ಳೆಯ ಎಳನೀರ ಹಾಗೆ ಬಿಡುವುದು. ಕಾಲುಘಳಿಗೆ ಕೇದಿ ಹಚ್ಚುವುದು. ಕಿವಿಚಿದರೆ ಒಳ್ಳೆ ಎಳನೀರಿನ ಹಾಗೆ ಬಿಟ್ಟುದನ್ನು ತೆಗೆದುಕೊಂಡು ಅರಸಿನದೊಳಗೆ ಸೇರು ಹಿಟ್ಟೆಳಿಕನ ರಸವ ಬೆರಸಿಕೊಂಡು ಸಕ್ಕರೆ ಬೆರಸಿ ಕೊಂಬುದು. ಆರು ಬಗೆ ಪ್ರಮೇಹ ಮಾಣ್ಗುಂ. ಪಥ್ಯ ಮೊಸರೋಗರ, ಬೂದಿಬಾಳೆಕಾಯಿ, ಎಳೆಬದನೇಕಾಯಿ,

ಹದುವೆಸೊಪ್ಪು, ಉಪ್ಪು, ಹುಳಿ ವರ್ಜ್ಯ. ದಿನ ಬಿಡದೇ ಕೊಂಬುದು. ಸಿದ್ಧಾಂತ ತಪ್ಪದು. ಕೆರೆದವನವನು ಹಸಿಹಾಲಿನಲ್ಲಿ ಕೊಳ್ಳೆ ರಕ್ತಪ್ರಮೇಹ ಮಾಣ್ಗುಂ. ಉತ್ತರಣೆ ಬೇರಂ ಎಳನೀರಲ್ಲಿ ತೆಗೆದುಕೊಳ್ಳೆ ರಕ್ತಪ್ರಮೇಹ ಮಾಣ್ಗುಂ. ಗುಂಪುಬಸರೆಸೊಪ್ಪು ಹಾಲಲ್ಲಿ ತೆಗೆದುಕೊಳ್ಳೆ ರಕ್ತಪ್ರಮೇಹ ಮಾಣ್ಗುಂ. ಉಬ್ಬಸರೆಯ ಸೊಪ್ಪನ್ನು ಹಾಲಲ್ಲಿ ಕೊಳ್ಳೆ ರಕ್ತಪ್ರಮೇಹ ಮಾಣ್ಗುಂ.

ದಂತಶೂಲೆಗೆ :—ನೆಲಗುಳ್ಳದ ಬೇರು, ಶುಂಠಿ, ತವಸ, ಚಿತ್ರಮೂಲ, ಇವಂ ಕಾಸಿದ ನೀರಂ ಮುಕ್ಕಳಿಸೆ ದಂತಶೂಲೆ ತೀರ್ಗುಂ. ನೆಲಗುಳ್ಳದ ಬೇರು, ಅರಸಿನ, ಇವನ್ನಿಕ್ಕಿ ಕಾಸಿ ಈ ಕಷಾಯದೊಳು ಎಣ್ಣೆಯ ಕೂಡಿಸಿ ಮುಕ್ಕಳಿಸೆ ಹಲ್ಲುಶೂಲೆ ಎಲ್ಲಾ ತೀರ್ಗುಂ. ಬಿಳಿ ಕೊಮ್ಮೆ ಬೇರು, ನೆಲಗುಳ್ಳದ ಬೇರು, ಅರಸಿನ ಇವನ್ನಿಕ್ಕಿ ಕಾಸಿದ ಕಷಾಯದೊಳು ಮುಕ್ಕಳಿಸೆ ದಂತಶೂಲೆ ತೀರ್ಗುಂ. ಎಕ್ಕೆಕುಡಿಯಂ ಕೆಂಡದೊಳು ಕಾಸಿ ಸೇಕಂಗೊಳ್ಳೆ ದಂತಶೂಲೆ ತೀರ್ಗುಂ. ಅಡಕೆಯ ಬೇರು, ತೆಂಗಿನ ಬೇರು, ಇವುಗಳ ಕಷಾಯವಂ (ಮುಕ್ಕಳಿಸೆ ದಂತಶೂಲೆ ತೀರ್ಗುಂ.)

ಅರೆದಲೆಬೇನೆಗೆ :—ತಾಳಕದ ಹಣ್ಣಂ ಮೊಲೆಹಾಲಲ್ಲಿ ತೇದು ನಸ್ಯಮಾಡೆ ಅರೆದಲೆ ಬೇನೆ ಮಾಣ್ಗುಂ.

ಶ್ವಾಸ ಕಾಸ ಇವುಗಳಿಗೆ :—ರಸ ತೂಕ ೭, ಇಂಗಲೀಕ ತೂಕ ೩,......ಎಲೆಗಪ್ಪಲಿ ತೂಕ ೧, ಕಪ್ಪಲಿಸತ್ವ ತೂಕ ೨, ತಾಳಕ ತೂಕ ೧, ಪಚ್ಚೆತುತ್ತ ತೂಕ ೧, ಪಾಷಾಣ ತೂಕ ೨, ಚಿತ್ರಮೂಲ ತೂಕ ೪, ಇಷ್ಟನ್ನೂ ಕರಿಕತ್ತೀಸೊಪ್ಪಿನ ರಸದಲ್ಲಿ ಮರ್ದಿಸಿ ತಾರೇ ಕಾಯ ಪ್ರಮಾಣದ ಗುಳಿಗೆಯಂ ಮಾಡಿ (ಕೊಳ್ಳೆ ಶ್ವಾಸ ಕಾಸ ಇವೆಲ್ಲಾ ಮಾಣುವುವು.)

ಕರಿಲೊಕ್ಕಿಯ ರಸ, ಕುರುಡಿಗೆರಸ, ಗಪುಗದ ರಸ, ಆಡುಸೋಗೆರಸ, ನೆಲಗುಳ್ಳದ ರಸ, ಬಿಳಿಸುಂಡೇರಸ, ಇವುಗಳ ಮ...ರ ಮಾನಕ್ಕೆ ಬೆಲ್ಲ ೧ ಮಾನ, ಇದಂ ಹದದಲ್ಲಿ ಕಾಸಿ, ಹಿಪ್ಪಲಿ, ಶುಂಠಿ, ಹಿಪ್ಪಲೀಮೂಲ, ರಾಷ್ಮೆ, ಮೆಣಸು ಇವಂ ಚೂರ್ಣವಂ ಮಾಡಿ ಆ ಪಾಕಕ್ಕೆ ಹಾಕಿ ಜೇನುತುಪ್ಪ ಬೆರಿಸಿ ಕೊಳ್ಳೆ ಶ್ವಾಸ, ಕಾಸ ಎಲ್ಲಾ ಮಾಣುವುವು.

ಮುತ್ತುಗದ ಬೇರಂ ತರೆದು ಆ ಚೂರ್ಣವ ಮಾಡಿ ಹಾಕಿ, ತುಪ್ಪ ಒಂದು ಬಳ್ಳವಂ ಹನಿಸಿ ಮೃದುವಾದ ಹದ ನೋಡಿ ಇಳುಹಿಕೊಂಡು ತಾರೇಕಾಯ ಪ್ರಮಾಣ ಹೊಟ್ಟೆಗೆ ಕೊಡುವುದು. ಮೂಗಿಗೆ ಆ ತುಪ್ಪವನ್ನೇ ಇಪ್ಪತ್ತನಾಲ್ಕು ದಿನ ನಸ್ಯವಂ ಮಾಡಿದರೆ ಸಕಲ ಮದ, ಸಕಲ ಅಪಸ್ಮಾರ, ಸ್ಮೃತಿಭ್ರಂಶ, ಜಿಹ್ವಾಸ್ತಂಭಗಳು, ಈ ಮೊದಲಾದವುಗಳೆಲ್ಲಾ ಮಾಣುವುವು.

ಯಷ್ಟಿಮಧುಕ, ಇಂಗು, ಬಜೆ, ಬಿಳಿಯ ಸಾಸುವೆ, ಸೈಂಧವ, ಇವನ್ನು ಆಡಿನಮೂತ್ರ ದಲ್ಲಿ ಕುಡಿಗೆ; ಮೇಣು ನಸ್ಯವಂ ಮಾಡುಗೆ; ಉನ್ಮಾದ, ಅಪಸ್ಮಾರಂ, ದ್ವಾದಶಕಾಸಂ(ಇವೆಲ್ಲಾ

ಮಾಣುವುವು.) (ಇದಕ್ಕೆ ಮಂತ್ರ) ಓಂ ನಮೋ ಪಾರ್ಶ್ವನಾಥಾಯ ಧರಣೇಂದ್ರಪದ್ಮಾ ವತೀಸಹಿತಾಯ ಪಚಪಚ ಛಿಂದಿಛಿಂದಿ ಹನ ಕಂಪ ಮರ್ದಯ ಜ್ವಾಲಯ ಜ್ವಾಲಯ ಮರ್ದಯ ವಿಧ್ವಂಸಯ ಘಾತಯ ಉಗ್ರಚಂದ್ರಪ ಸ್ವಾಹಾ.

ಸಿವಳಿಗೆಗೆ :— ಕಹಿಬ್ರಹ್ಮಿಯ ರಸವಂ, ಶ್ರೀಖಂಡ, ಇದರ ಸಮಾನ ಗೋಮಯ ಮೂರು ದಿನ ಕುಡಿಯೆ ಸಿವಳಿಗೆ ಮಾಣ್ಗುಂ.

ಹೆಗಳಿಗೆ :— ಕಮ್ಮಾರರ ಮನೆಯ ಇಲ್ಲಣ, ಹೊಸಸುಣ್ಣ, ಇಂಗು, ಅಡಿಕೆಗಾತ್ರ ಬೆಲ್ಲ. ಸೊಲ್ಲಗೆ ಎಣ್ಣೆ, ಇವಂ ಕೂಡಿ ಎರಡು ದಿನ ನೀರ್ಗೆಲ್ಲಿ (ಅರೆದು) ಮೂರು ದಿನ, ಆರು ದಿನ, ಒಂಭತ್ತು ದಿನ ಕೊಳ್ಳೆ ಯವಾಗುಗಂಜಿ ಬೆರೆಯೆ ಹೆಗಳು ಮಾಣ್ಗುಂ.

ಮೇಲ್ನಾಗುರುವಿಗೆ : — ಬಿಳಿಜಗತೆಸೊಪ್ಪು, ಮೆಣಸು, ಬೆಳ್ಳುಳ್ಳಿಜೇಳಿ, ಇವಂ ಅರೆದು ಕಿವಿಗೆ ಬಿಡೆ ಮೇಲ್ನಾಗುರು ತೀರ್ಗುಂ.

ಸನ್ನಿಪಾತಕ್ಕೆ ನಸ್ಯ:— ಅಗಸೇಸೊಪ್ಪಿನ ರಸದಲ್ಲಿ ತ್ರಿಕಟುಕ, ಸೈಂಧವ, ತೇದು ನಸ್ಯಂ ಮಾಡಲು ಶ್ಲೇಷ್ಮ ಸುರಿದು ನಾಲಿಗೆ ಬಿದ್ದ ಸನ್ನಿ ಮಾಣ್ಗುಂ.

ಸನ್ನಿಗೆ ಅಂಜನ :— ಸೀಸದ ಬೀಜ, ಹಿಪ್ಪಲಿ, ಮೆಣಸು, ಸೈಂಧವ, ಇವಂ ಗೋಮೂತ್ರದಲ್ಲರೆದು ಮತ್ತೆ ಚಿತ್ರಮೂಲದ ಕಷಾಯದಲ್ಲರೆದು ಗುಳಿಗೆಯಂ ಮಾಡಿ ಇರಿಸಿಕೊಂಡು ನಿಂಬೇಹುಳಿಯಲ್ಲಿ ತೇದು ಬೆಚ್ಚಗೆ ಮಾಡಿ ಇಡಲು ಸನ್ನಿ ಮಾಣ್ಗುಂ.

ರಸಹತ್ತಿದರೆ:— ಹೊನಗೊನ್ನೆ, ಗರುಗ, ಮೊಸರು, ನಿಂಬೇಹುಳಿ, ಈ ೪ ಅರೆದು ಹಿಂಡಿಕೊಂಡು ಆ ರಸವ ಕುಡಿದು ನೆತ್ತಿಗೆ ಅಂಗಾಲಿಗೆ ಒತ್ತಿ ಆ ಹಿಪ್ಪೆಯ ಕಟ್ಟಲು ಹತ್ತಿದ ರಸ ಇಳಿಯುವದು.

ಪುಷ್ಟಿಗೆ :— ಆಪಡಿಗೆಣಸು, ನೆಗ್ಗಿಲ ಜೇರು, ಹಿರಿಯಮದ್ದಿನ ಬೇರು, ಬಿಳಿಕೊಮ್ಮೆ ಜೇರು, ಕಳ್ಳಂಗಡಲೇಬೇರು, ನೆಲದೆಂಗಿನ ಗೆಣಸು, ಇವಂ ಸಮಾನಂಗೊಂಡು ಚೂರ್ಣಿಸಿ ತುಪ್ಪಸಕ್ಕರೆಯಲ್ಲಿ ಕೊಳ್ಳೆ ಪುಷ್ಟಿವರ್ಧನವಕ್ಕುಂ.

ಧನುರ್ವಾತಕ್ಕೆ :— ಗುಗ್ಗುಲು ೧ ಭಾಗ, ಹಿಪ್ಪಲಿ ೪ ಭಾಗ, ಕೋಷ್ಠ ೪ ಭಾಗ, ಇವಂ ಕೂಡಿ ಗುಳಿಗೆಯಂ ಮಾಡಿ ಲೊಕ್ಕಿಸೊಪ್ಪಿನ ರಸದಲ್ಲಿ ಕುಡಿಯೆ ಧನುರ್ವಾತ ಮಾಣ್ಗುಂ.

ಮೊಡವಿಗೆ :— ಸಿರಿಸಬೀಜವಂ ಗೋಮೂತ್ರದಲ್ಲರೆದು ಪೂಸೆ ಮೊಡವು ಮಾಣ್ಗುಂ.

ಕಾಸಕ್ಕೆ :— ಕಳ್ಳಂಗಡಲೆ ೫೦ ಹಲ, ನೆಲ್ಲಿಚಟ್ಟು ... ಹಲ, ಅದಕ್ಕೆ ೧೬ ಕೊಳಗ ನೀರಿನಲ್ಲಿ ಈ ಔಷಧವನ್ನು ಶೋಧಿಸಿ ಅಷ್ಟಾವಶೇಷವಾಗಿ ಕಷಾಯವ ಕಾಸಿ ಅದರೊಳಗೆ ಎಣ್ಣೆ ೩ ಬಳ್ಳ, ಹಸುವಿನ ಹಾಲು ೬ ಬಳ್ಳ ಅರೆದು, ಇಕ್ಕುವ ಕಲ್ಕದ್ರವ್ಯ

ಗಳು—ಶ್ರೀಗಂಧ, ಅಗಿಲು, ತಕ್ಕೋಲ ೧ ಭಾಗ, ಏಲಕ್ಕಿ ೨ ಭಾಗ, ಲವಂಗ ೧ ಭಾಗ, ಮೆಣಸು ೨ ಭಾಗ, ಹಿಪ್ಪಲಿ ೨ ಭಾಗ, ಶುಂಠಿ ೧೬ ಭಾಗ, ಗಂಟುಭಾಂರ್ಗಿ ೮ ಭಾಗ, ಸಕ್ಕರೆ ೩೦ ಭಾಗ, ಇವಂ ಚೂರ್ಣವಂ ಮಾಡಿ ಸೇವಿಸೆ ಪೈತ್ಯ, ಶ್ವಾಸ, ಕಾಸ ಮಾಣ್ಗುಂ.

ಮೂಲವ್ಯಾಧಿಗೆ :—

ಸಕ್ಷೌದ್ರಮೂತ್ರೈಃ ಫಲಕುಷ್ಠದಂತೀ
ಸಿದ್ಧಾರ್ಥಕೃಷ್ಣಾಬಿಡಧೂಮಚೂರ್ಣಂ ।
ತ್ರಿಂಶಾಂಶಕಾಂಗುಷ್ಠನಿಭಾಂಗಕಂದ್ರಾ
ಗ್ಗುದೇ ರುಜೋ ತಾಪಹರಂ ವಿದಧ್ಯಾತ್ ॥

ಟೀಕೆ :—ಜೇನುತುಪ್ಪ, ಗೊಮೂತ್ರ, ಬೋನಾಗರೆ, ಕೋಷ್ಟ, ದಂತಿ, ಬಿಳಿಸಾಸುವೆ, ಹಿಪ್ಪಲಿ, ಬಿಡುಲವಣ, ಇಲ್ಲಣ, ಇವೆಲ್ಲವುಗಳ ಚೂರ್ಣಮಂ ಕೈಯ್ಯ ಬೆರಳ ತೊರ ಬತ್ತಿಯಂ ಮಾಡಿ ತುಪ್ಪವಮಂ ಪೂಸಿ ಕುಂಡೆಯೊಳಗಿರಿಸುವುದು. ಆ ಔಷಧಿಯ ಕಲ್ಕವಂ ಬತ್ತಿಗೆ ತೊಡೆದು ಮೇಲೆ ತುಪ್ಪವಮಂ ಪೂಸಿ ಕುಂಡೆಯೊಳಗೆ ಇರಿಸೆ ಮೂಲವ್ಯಾಧಿ ಮಾಣ್ಗುಂ. ಇದು ದಿವ್ಯಯೋಗ.

ಮಂಡಶೂಲೆಗೆ ತೈಲ :—ಲಾಮಂಚ, ಮುಡಿವಾಳ, ಕಚೋರ, ಭದ್ರಮುಸ್ತೆ, ಏಲಕ್ಕಿ, ನೆಲ್ಲಿಚಟ್ಟು, ದ್ರಾಕ್ಷೆಹಣ್ಣು, ರಕ್ತ, ಚಂದನ, ಲವಂಗ, ಯಷ್ಟಿಮಧುಕ, ನೆಳಲು, ನಾಗಕೇಸರ, ಕತ್ತುರಿ, ಬೆಬಡೆಬೀಜ, ಮರದರಿಸಿನ, ಇವು ಪ್ರತ್ಯೇಕ ೮ ತೂಕ, ಇವೆಲ್ಲವನ್ನು ಹಾಲಲ್ಲಿ ಅರೆದು ಕದಡಿ ಸುಪಾಕದಲ್ಲಿ ಅಟ್ಟು ಎಣ್ಣೆಯ ಹಿಂಡಿಕೊಂಡು ಪಚ್ಚೆಕರ್ಪೂರ ೩ ತೂಕವನ್ನು ಆ ಎಣ್ಣೆಯಲ್ಲಿ ಕದಡಿ ಮಂಡೆಗೊತ್ತಲು ಅಸ್ಥಿಯ ಕಟ್ಟೊ ವಾತಪಿತ್ತ ಶ್ಲೇಷ್ಮದಿಂದಾದ ಮಂಡೆಶೂಲೆಯೆಲ್ಲಾ ಮಾಣ್ಗುಂ.

ವಿರೇಚನಕ್ಕೆ :—ಮೆಣಸು ೧ ತೂಕ, ಜೇಪಾಳದ ಬೀಜ ೨ ತೂಕ, ಇವಂ ನಿಂಬೇ ಹುಳಿಯಲ್ಲಿ ಅರೆದು ಗುಂಜಾಪ್ರಮಾಣ ಗುಳಿಗೆಯಂ ಮಾಡಿ ಶುಂಠಿಯ ರಸವಾಗಲೀ, ತುಪ್ಪ ವಾಗಲೀ ಇದರಲ್ಲಿ ಕೊಳ್ಳಲು ವಮನವಿರೇಚನವಕ್ಕು.

ಬೆಂದಹುಣ್ಣಿಗೆ :—ಅರಳಿಯ ತಿಗುಡಂ ನೀರಲ್ಲಿ ಅರೆದು ತಿಲತೈಲದಲ್ಲಿ ಕಲಸಿ ಪೂಸೆ ಬೆಂದಹುಣ್ಣು ಮಾಣ್ಗುಂ. ಎಳ್ಳನ್ನರೆದು ಹಾಲಲ್ಲಿ ಅಟ್ಟು ಪೂಸೆ ಬೆಂದಹುಣ್ಣು ಮಾಣ್ಗುಂ. ಹಳೆಯ ಜೋಳದ ಕಣಿಕೆಯಂ ಸುಟ್ಟು ಆ ಕರಿಯಂ ಬೆಣ್ಣೆಯಲ್ಲಿ ಕಲಸಿ ಬೆಂದ ಹುಣ್ಣಿಗೆ ಪೂಸೆ ಮಾಣ್ಗುಂ.

ಕಿವುಡಿಗೆ :—ಬೆಲ್ಲವತ್ತ್ರದ ಬೀಜ, ಲವಂಗ ಇವಂ ತೇದು ಹಿಂಡೆ ಕಿವುಡು ಮಾಣ್ಗುಂ.

ಮೈಯ್ಯತಿಮಿರಕ್ಕೆ :—ಕೋಷ್ಟವಮಂ ಅರೆದು ಎಮ್ಮೆಯ ಮೊಸರಲ್ಲಿ ಕಲಸಿ ಮೈಯ್ಗೆ ಪೂಸಲು ಮೈಯ್ಯ ತಿಮಿರ ಮಾಣ್ಗುಂ. ಬಾಳೆಯ ಗೆಡ್ಡೆಯನ್ನು ಹಸುವಿನ ಹಾಲಲ್ಲರೆದು ಕೊಳ್ಳೆ ಜಂತು ಬೀಳ್ಗುಂ.

ಪ್ರಮೇಹಕ್ಕೆ :—ಕುಂಬಳದ ಬೀಜವನ್ನು ನೀರಲ್ಲರೆದು ಒಂದು ದಿನ ಇರಿಸಿ ಮರು ದಿನದ ಉದಯದಲ್ಲಿ ಬೆಲ್ಲ ಬೆರಸಿ ಮೂರು ದಿನ ಕೊಳ್ಳಲು ಪ್ರಮೇಹದ ಕಲ್ಲು ಬೀಳ್ಗುಂ.

ಮೂತ್ರಬಿಡುವುದಕ್ಕೆ :—ಇಲಿಹಿಕ್ಕೆಯನ್ನು ನೀರೊಳಗರೆದು ಕಿಬ್ಬೊಟ್ಟೆಗೆ ಪೂಸೆ ಮೂತ್ರ ಬಿಡುವುದು. ಕಿರುಕುಸಾಲೆಯ ಬೀಜವಂ ನೀರಲ್ಲರೆದು ಕಿಬ್ಬೊಟ್ಟೆಗೆ ಪೂಸೆ ಮೂತ್ರ ಬಿಡುವುದು.

ಅಂಡವಾತಕ್ಕೆ :—ಬಾಡಬಾಕನ ಸೊಪ್ಪಂ ನೀರಿಂ ಅರೆದು ಎಣ್ಣೆಯಾಗಲೀ ಹಸುವಿನ ತುಪ್ಪವಾಗಲೀ ಕೂಡಿಸಿ ಆರು ದಿನ ಕೊಂಡರೆ ಅಂಡವಾತ ಮಾಣ್ಗುಂ.

ಛಳಿಗೆ :—ಶುಂಠಿ, ಮೆಣಸು, ಬೆಳ್ಳುಳ್ಳಿ, ತುಳಸೀಸೊಪ್ಪಿನ ರಸ, ಇವಂ ಸಮಾನಂಗೊಂಡು ಅರೆದು ತಾರೇಕಾಯ ಪ್ರಮಾಣ ಗುಳಿಗೆಯಂ ಮಾಡಿ ಮೂರು ದಿನ ಕೊಳ್ಳಲು ಛಳಿ ಮಾಣ್ಗುಂ. ವಾಕುಚಿಯ ಬೇರಂ ತಂದು ಅಕ್ಕಿಗಚ್ಚಿನಲ್ಲಿ ಅರೆದು ಕುಡಿಯೆ ಛಳಿ ಮಾಣ್ಗುಂ.

ಗರ್ಭಬೀಳುವುದಕ್ಕೆ :—ಉತ್ತರಣೆಯ ಬೇರಂ ಯೋನಿಯೊಳಗೆ ಇಕ್ಕೆ ಪ್ರಸೂತಿಯಕ್ಕು.

ಇಸುಬಿನಹುಣ್ಣಿಗೆ :—ಹುಳಿಸೊಡಲಿಯ ತೊಕ್ಕೆಯಂ ನಿಂಬೆಯ ಹುಳಿಯಲ್ಲಿ ಅರೆದು ಪೂಸೆ ಮಾಣ್ಗುಂ.

ಚಾತುರ್ಥಿಕಕ್ಕೆ :—ಕಹಿಸೋರೆಯ ಬೇರು, ಹಾವುಮೆಕ್ಕೆಯ ಬೇರು, ಇವಂ ತಂದು ತಲೆಯಲ್ಲಿ ಕಟ್ಟೆ ಮಾಣ್ಗುಂ.

ಕಿವಿಯ ಕೊರಚೆಗೆ :—ಜೇಪಾಳದ ಬೀಜವಂ ನಿಂಬೇಹುಳಿಯಲ್ಲಿ ಅರೆದು ಮೇಲು ವೆಲೆಯ ಸುರುಟೆ ಕಿವಿಗೆ ಇಕ್ಕೆ ಹಿಂಡಲು ಕೊರಚೆ ಮಾಣ್ಗುಂ.

ಒಡಲೊಳು ಸತ್ತ ಕೂಸು ಬೀಳುವುದಕ್ಕೆ :—ಸೈಂಧವವ ತುಪ್ಪದಲ್ಲಿ ಅರೆದು ಸೇವಿಸೆ ಸತ್ತ ಕೂಸು ಬೀಳ್ಗುಂ.

ಗಂಡಮಾಲೆಗೆ :—ಶುಂಠಿ, ನುಗ್ಗೇಬೇರು, ಕಟ್ಟೆ ಗಂಡಮಾಲೆ ಮಾಣ್ಗುಂ.

ಹೆರಲಾರದವರಿಗೆ :—ಬಿಳಿಕೊಮ್ಮೆಯ ಬೇರಂ ಸಿದ್ಧದಿನದಲ್ಲಿ ತಂದು ಒಂದು ವಾರ ಒಣಗಿಸಿ ಹುಡಿ ಮಾಡಿಕೊಂಡು ಇಡುವುದು, ಹೆರಲಾರದವರಿಗೆ ಹೊಕ್ಕುಳಿಂದ ಇಳಿಯೆ ತೊಡೆಯುವುದು. ಅಂಗಾಲಿಗೆ ಪೂಸಲು ಕೂಸು ಬೀಳುವುದು.

ಸಂಜೆಗಣ್ಣಿಗೆ :—ತೊಂಗೇಬೀಜ, ಹಿಪ್ಪಲಿ, ಈ ಎರಡನ್ನು ಗೋಮೂತ್ರದಲ್ಲಿ ತೇದು ಕಣ್ಣಿಗೆ ಇಕ್ಕಲು ಸಂಜೆಗಣ್ಣು ಮಾಣ್ಗುಂ.

ಮಂಡೆಯಹುಣ್ಣಿಗೆ :—ತುರುವೆಯ ಬೀಜವಂ ಎಣ್ಣೆಯಲ್ಲಟ್ಟು ಪೂಸೆ ಮಾಣ್ಗುಂ. ಅಕ್ಕಿಹೊಸೆಯ ಸಮೂಲವನ್ನು ಒಳ್ಳೆಣ್ಣೆಯಲ್ಲಿ ಅರೆದು ಪೂಸೆ ಮಂಡೆಹುಣ್ಣು ಮಾಣ್ಗುಂ.

ಅರೆದಲೆಬೇನೆಗೆ :—ಆದಿತ್ಯವಾರವಾದ ವಾರದಿ ಬಡಗುಹರಿದ ಬೇರಂ ತಂದು ಕಿವಿಯಲ್ಲಿ ಕಟ್ಟೆ ಅರೆದಲೆಬೇನೆ ಮಾಣ್ಗುಂ.

ಮಂಡಲ ಕಚ್ಚಿದರೆ :—ವಜ್ರನೀಲಿಯ ಸಮೂಲವಂ ತಂದು ನೀರಲ್ಲಿ ಅರೆದು ಕುಡಿಯ ಕೊಟ್ಟು ಕಚ್ಚಿದ ಗಾಯಕ್ಕೆ ಇಳಿಯ ಪೂಸುವುದು.

ಇಲಿ ಕಚ್ಚಿದರೆ-—ಕಿರುನೆಲ್ಲಿಯ ಸಮೂಲವಂ ತಂದು ನೀರಲ್ಲರೆದು ನೆತ್ತಿಗೊತ್ತಿ ಕುಡಿಯ ಕೊಟ್ಟು ಕಚ್ಚಿದ ಗಾಯಕ್ಕೆ ಪೂಸುವುದು.

ಕೈಮುಸಕಿಗೆ ಎಣ್ಣೆಮಂತ್ರ :—ಓಂ ಇಂದ್ರ ತಂದೆಣ್ಣೆ, ಇರುಗಣ್ಣ ತಂದೆಣ್ಣೆ, ಚಂದ್ರ ತಂದೆಣ್ಣೆ, ತಾರಮೇಘ ತಂದೆಣ್ಣೆ, ಎರವಾಳ ತಂದೆಣ್ಣೆ, ವಾಣಿಭದ್ರ ತಂದೆಣ್ಣೆ, ಪೂಮತಿ ತಂದೆಣ್ಣೆ, ಅಳುವರಾಡಿರು ತಂದೆಣ್ಣೆ, ಪಿರುಂಡಿರು ಮಂಡಿ ಪೋಗು ಮೃದುಪ್ಪದ ಸ್ವಾಮಿ ಎಣ್ಣೆ ಸ್ವಾಹಾ. ಇದಕ್ಕೆ ಮದ್ದು—ಬಿಳಿಯ ಗಣಿಜಿಲದ ಬೇರಂ ಸೊಪ್ಪಂ ತಿಲತೈಲದಲ್ಲಿ ಹಾಕಿ ಕಾಸಿ ನೆಲಮುಟ್ಟದೆ ಇರಿಸಿ ಮಂತ್ರಿಸಿ ರವಿವಾರದ ದಿನ ಮಿಂದು ರಾತ್ರಿಯಲ್ಲಿ ಒಂದು ಸೊಲ್ಲಗೆ ಎಣ್ಣೆಯ ಪ್ರಮಾಣದಲ್ಲಿ ಕೊಂಬುದು. ಮಂಡೆಗೊತ್ತಿಕೊಂಬುದು. ಪಥ್ಯ ಎಣ್ಣೆಯೋಗರ, ಹಸುವಿನ ಹಾಲು ಕೊಂಬುದು. ಲವಣಾಮ್ಲ ವರ್ಜಿತ. ಎಲ್ಲಾತರದ ಕೈಮುಸಕು ಮಾಣ್ಗುಂ.

ಹೊಟ್ಟೆಶೂಲೆಗೆ :—ಅಮರದವಳ್ಳಿಯನ್ನು ಬಿಸಿನೀರಲ್ಲಿ ಅರೆದು ತಾರೇಕಾಯ ಪ್ರಮಾಣದಲ್ಲಿ ಆ ಗುಳಿಗೆಯಂ ನುಂಗಿ ಬಿಸಿನೀರಂ ಕುಡಿಯೆ ಹೊಟ್ಟೆಶೂಲೆ ಮಾಣ್ಗುಂ. ಗರುಗಿನ ತಿರುಳು, ಉಳ್ಳಿ, ಸೈಂಧವ, ಇಂಗು, ಶುಂಠಿ, ಓಮ, ಇವಂ ಸಮಾನಂಗೊಂಡು ಬಿಸಿನೀರಲ್ಲಿ ಅರೆದು ತಾರೇಕಾಯ ಪ್ರಮಾಣ ಗುಳಿಗೆಯ ಮಾಡಿ ನುಂಗಿ ಬಿಸಿನೀರಂ ಕುಡಿಯೆ ಹೊಟ್ಟೆಶೂಲೆ ಮಾಣ್ಗುಂ.

ಹೊಟ್ಟೆನುಲಿಯುವದಕ್ಕೆ :—ದೇವಗಂಟೆಯ ರಸದಲ್ಲಿ ಉಳ್ಳಿ, ಮೆಣಸು ಅರೆದು ಆ ದೇವಗಂಟೆಯ ರಸದಲ್ಲಿ ಕದಡಿ ಮೂರು ದಿನ ಕೊಳ್ಳಲು ಹೊಟ್ಟೆ ಕಚ್ಚುವುದು ಮಾಣ್ಗುಂ.

ಕಿರುನಾಲಿಗೆಔಷಧಿ :—ಹುಣಸೇತೊಪ್ಪೆಯ ಬೂದಿ, ಉಪ್ಪು, ಮಣ್ಣು, ಸುಣ್ಣ ಇವಂ ಕಲಸಿ ಕಿರುನಾಲಿಗೆಗೆ ಮುಟ್ಟಿಸೆ ಮೇಲಕ್ಕೆ ಏಳ್ಕು. ಗೇರೆಣ್ಣೆಯಂ ಈ ಮರ್ಯಾದೆಯಲ್ಲಿ ಇಕ್ಕುವುದು.

ಬಾವಿಗೆ:—ನಾರುಬೇಳೆ ಸೊಪ್ಪು, ಕಕ್ಕೆಯ ತಿಗುಡು, ನವಣೆ ಅಕ್ಕಿ, ಇವಂ ಅಕ್ಕಿಗಚ್ಚಿನಲ್ಲಿ ಅರೆದು ಪೂಸೆ ಬಾವು ಮಾಣ್ಗುಂ. ಗಣಿಜಿಲವ ಬೇರು, ಮಡುವಾಗಲದ ಗೆಡ್ಡೆ, ಕತ್ತರಿಯ ಬೇರು, ಅಪ್ಪಯಗೆಡ್ಡೆ, ಇವಂ ಅಕ್ಕಿಗಚ್ಚಿನಲ್ಲಿ ಅರೆದು ಪೂಸೆ ಬಾವು ಮಾಣ್ಗುಂ.

ಹಾವುಮೆಕ್ಕೆ, ಕಣಗಿಲು, ಕಸ್ತೂರಿ, ಉಮ್ಮತ್ತ, ಕಳ್ಳಿ, ಕುರಟಿಗೆ, ಹಾವುದೊಂಡೆ, ಗುಳ್ಳ, ಅಮರದವಳ್ಳಿ, ಅಂದುರು, ಅಪಡಿ, ಮಂಗರವಳ್ಳಿ, ಇವೆಲ್ಲವುಗಳ ಬೇರು ಸಮಾನಗೊಂಡು ಅರೆದು ಎಣ್ಣೆಯಲ್ಲಟ್ಟು ಪೂಸಲು ಗಾಯವಾರಿ ನಾನಾವ್ರಣಗಳೆಲ್ಲ ಮಾಣುವುವು.

ನೂತಿಗೆ:—ಕಹಿಹೀರೆಸೊಪ್ಪು, ಸಜ್ಜರಸದ ಒಳನಾರು, ಇವಂ ಜಜ್ಜಿ ಹಿಸುಕಿ ಹುಣ್ಣಿಗೆ ಹಾಕಿ ಕಟ್ಟಲು ಮಾಣ್ಗುಂ. ಹುಣ್ಣು ಕೆಂಪುಹುಟ್ಟಿದಾಗ ಮೆಟ್ಟುಹುರುಳಿಯ ಹಾಲ ತೊಡೆಯಲು ಮೂರು ದಿನದಲ್ಲಿ ಮಾಣ್ಗುಂ.

## D 1360

ವ್ರಣಗಳಿಗೆ :—ತಲೆಹುಣ್ಣಿಗೆ—ತೆಂಗಿನಕಾಯ ಓಟೆಯ ರಸವ ತೊಡೆಯಲು ತಲೆಹುಣ್ಣು ಮಾಣ್ಗುಂ. ಆಲದಹಾಲು, ಮೊಸರು, ಸುಣ್ಣ ಇವು ಮೂರನ್ನೂ ಅರೆದು ತೊಡೆಯಲು ಹುಣ್ಣು ಮಾಣ್ಗುಂ. ಅಡಕೆಯ ಬೇರಂ ತಂದು ಗುದ್ದಲಿಯ ಮೇಲೆ ಅರೆದು ತೊಡೆಯಲು ತಲೆಹುಣ್ಣು ಎಲ್ಲವೂ ಮಾಣ್ಗುಂ.

ಸೊನೆಹುಣ್ಣಿಗೆ :—ಮುರುದಾರಶೃಂಗಿಯಂ ತಂದು ನಿಂಬೇಹುಳಿಯಲ್ಲಿ ತೇದು ತೊಡೆಯಲು ಎನಿತಪ್ಪ ಸೊನೆಹುಣ್ಣು ಮಾಣ್ಗುಂ.

ಹಳೆಹುಣ್ಣಿಗೆ :—ಬೇವಿನ ಸೊಪ್ಪು, ಕಲುವು, ಇವಂ ಅರೆದು ಬಿಸಿಮಾಡಿ ಕಟ್ಟಲು ಗುಣ. ಅಳಲೇಕಾಯಿ, ಕಲುವು, ಅರೆದು ಬಿಸಿ ಮಾಡಿ ಕಟ್ಟಲು ಗುಣ. ಇಲ್ಲಣ, ಅಂಕೋಲೆಬೇರು, ನಿಂಬೇಹುಳಿಯಲ್ಲಿ ಅರೆದು ತೊಡೆಯಲು ಗುಣ. ಅಕ್ಕಿಹೊಡೆ ಸಮೂಲವ ತಂದು ಮೆಣಸು, ಸೈಂಧವಲವಣ, ಅಪಿನಿ, ಇವಂ ಸಮಾನಂಗೊಂಡು ತಾಮ್ರದ ಭಾಜನದಲ್ಲಿ ಇಟ್ಟು ಶೋಧಿಸಿ ಸಣ್ಣ ಅರಳೇಬತ್ತಿ ಅದ್ದಿ ಆ ಹುಣ್ಣಿನ ಮೇಲೆ ಹಾಕಲು ಎಂಥಾ ಹುಣ್ಣಾದರೂ ಮಾಣ್ಗುಂ.

ಕೆಟ್ಟಹುಣ್ಣಿಗೆ :—ಉತ್ತರಣಿಯ ಕೊನೆಯನ್ನು, ಜೋಳದ ಬೇರನ್ನು, ಚಿತ್ರಮೂಲದ ಬೇರನ್ನು, ಆಲದ ಬೀಳಲು, ಇವನ್ನು ಹುರಿದು ಕಸುಕು ಮಾಡಿ ಚಿಟವ್ರುಡಲದ ಎಣ್ಣೆಯಲ್ಲಿ ಕಲಸಿ ತೊಡೆಯಲು ಯಾವ ಹುಣ್ಣಾದರೂ ಮಾಣುವುದು. ಕೊಸರಬೇಕಾದರೆ ಹೊಸಸುಣ್ಣದಲ್ಲಿ ಕಲಸಿ ತೊಡೆಯಲು ಹುಣ್ಣಾಗುವುದು. ಆ ಹುಣ್ಣು ಮುಚ್ಚಬೇಕಾದರೆ ಹರಳೆಣ್ಣೆಯಲ್ಲಿ ಕಲಸಿ ತೊಡೆಯುವದು.

ಶ್ರೀಕುರುವಿಗೆ :—ಶುಂಠಿಯನ್ನು ನೀರಲ್ಲರೆದು ತೊಡೆಯಲು ಕುರು ಮಾಣ್ಗುಂ.

ಬಾವಿಗೆ :—ಎಡುನಾರಿಗೆ ಬೇವಿನ ತಿಗುಡಂ ಎಣ್ಣೆಯಲ್ಲಟ್ಟು ತೊಡೆಯಲು ಗುಣ. ಈ ಬೇರಿನ ತಿಗುಡಂ ಅರೆದು ಕಟ್ಟಲು ಗುಣ.

ಒಡೆಯದೆ ಇದ್ದ ಬಾವಿಗೆ :—ಕಾಡಬಗಳೇಬೇರಂ ಅರೆದು ಪೂಸಲು ಒಡೆಯುವುದು.

ಕೆಂಬಾವಿಗೆ :—ಇಲ್ಲಣ, ಸುಣ್ಣ, ಅರಿದಳ, ಕಾಸರ ಕೊನರು, ಇವಂ ನಿಂಬೇಹುಳಿಯಲ್ಲಿ ಅರೆದು ಪೂಸಲು ಕೆಂಬಾವು ಮಾಣ್ಗುಂ.

## D 1366 & R 1361

ಗಂಡಮಾಲೆಗೆ :—ವತ್ಸನಾಭಿ ಇಟ್ಟಿಯ ಜಜ್ಜು, ನವಕರ್ಣಿಕೆಯ ಬೇರು, ತಾಳೆಯ ಕಟ್ಟಿಗೆಯ ಪುಡಿ, ಬೆಲ್ಲದ ಪುಡಿ, ಇಷ್ಟನ್ನೂ ಎಳ್ಳೆಣ್ಣೆಯಲ್ಲಿ ಕಲಸಿ ಬತ್ತಿಯನಿಕ್ಕಲು ಗಂಡಮಾಲೆ ಬಗಳದಂತಾ ಅರ್ಬುದ ಮಾಣುವುದು.

ಇದಿರೋಕರಿಗೆ :—ನಿಂಬೆಯ ಬೀಜ, ಏಲಕ್ಕಿ, ಎಲೆಯಮುಗಳು, ಶ್ರೀಗಂಧ, ಪಚ್ಚೆ ತುತ್ತ, ನೀರಲ್ಲಿ ಕೊಡಲು ಇದಿರೋಕರಿಕೆ ಮಾಣ್ಗುಂ. ಇದಿರೋಕರಿಕೆಗೆ ಇನ್ನೊಂದು ಔಷಧ—ಪೋರುಳಿಯ ರಸವನ್ನೂ, ಏಲಕ್ಕಿಯನ್ನೂ, ಸಕ್ಕರೆಯನ್ನೂ ಕೊಳ್ಳಲು ಇದಿರೋಕರಿಕೆ ಮಾಣ್ಗುಂ.

ಆಮ್ಲಪಿತ್ತಕ್ಕೆ:—ಹತ್ತಿಯ ಹರಳ ಹುರಿದು ಚೂರ್ಣವಂ ಮಾಡಿ ಏಲಕ್ಕಿ, ಸಕ್ಕರೆಯಲ್ಲಿ ಕೊಳ್ಳಲು ಆಮ್ಲಪಿತ್ತಂ ಮಾಣ್ಗುಂ.

ಗೆಡ್ಡೆಗೆ :—ಕೋವೆಲೆ, ಅಶ್ವಗಂಧಿಯ ಬೇರು, ಎಳ್ಳು ಇವನ್ನು ಚಿಗಳಿಯಾಗಿ ಕಟ್ಟಿ ಮೆಲ್ಲಲು ಗೆಡ್ಡೆ ಕರಗಿಹೋಗುವುದು.

ಮದನಕಾಮೇಶ್ವರಿಗೆ :—ಕುಂಬಳ, ನೆಲದಾಳ, ನೆಗ್ಗಿಲು, ಕೊಳವಳಿಕೆಯ ಬೇರು, ಬಾಯ...... ..., ಅಷಾಢಿಯಗೆಡ್ಡೆ, ಅಜಮೋದ, ಉದ್ದು, ಎಳ್ಳು, ಕೊತ್ತಂಬರಿ, ನಾಗ, ಶಾಲ, ಖರ್ಜೂರ, ಬೋಗಾರ, ಜಾಯಿಫಲ, ಸೈಂಧವ, ನಾರಂಗಿ, ಹೊಂಗರುಗ, ತ್ರಿಕಟುಕ, ನಾಗಕೇಸರ, ಲಕ್ಕಿ, ಆಡುಸೋಗೇಬೇರು, ಎಲವದ ಚಕ್ಕೆ, ತ್ರಿಫಲೆ, ಸರ್ಜಜಟಿ, ಪಿಪ್ಪಲಿ, ಧ್ರುವಗನ್ನಿಯ ಬೀಜ, ಇವನ್ನು ಸಮಾನಂಗೊಂಡು ಚೂರ್ಣಮಂ ಮಾಡಿ ಇವುಗಳ ಇಮ್ಮಡಿ ಸಕ್ಕರೆ ಬೆರಸಿ ಅರೆದು ಮರಿಚಪ್ರಮಾಣ ಗುಳಿಗೆಯಂ ಮಾಡಿ ಹಾಲು ತುಪ್ಪದಲ್ಲಿ ಮೆಲ್ಲಲು ವೀರ್ಯವರ್ಧನವಕ್ಕುಂ. ವೃದ್ಧನೂ ಮನ್ಮಥನಕ್ಕುಂ.

ಕಣ್ಣುಪರೆಗೆ :—ಔಡಲದ ಹರಳು, ಮೂರು ಜೋಳದ ಗೋಧಿ, ಮೂರು ಮೆಣಸನ್ನೂ ......... ರಸದಲ್ಲಿ ಮರ್ದಿಸಿ ಕಣ್ಣಿಗೆ ಹಚ್ಚೆ ಕಣ್ಣುಪರೆ ಮಾಣ್ಗುಂ.

ಬಿಳಿಯಹೊನ್ನೆಗೆ :—ಕರಿಯ ಹತ್ತಿಯ ಎಲೆಯನ್ನು ಒಂದು ಹಿಡಿಯ ತಂದು ಒಳ ಸೆರೆ ಹೊರಸೆರೆ ಜೋಳವ ತಂದು ಅದರೊಳಗೆ ಹತ್ತಿಯ ಸೊಪ್ಪನ್ನು ಹಾಕಿ ಚೆನ್ನಾಗಿ ಕುಟ್ಟಿ ಮೇಕೆಯ ಹಾಲಿನಲ್ಲಿ ಸಂಕಟಿಯ ತೊಳಸಿ ಆ ಮೇಕೆಯ ತುಪ್ಪದಲ್ಲಿ ಮೆಲ್ಲಲು ಬಿಳಿಯ ಹೊನ್ನೆ ಮಾಣ್ಗುಂ.

ಕೆಂಪುಹೊನ್ನೆಗೆ :—ಕಿರುಸಾಲೆಯ ಬೇರನ್ನು ಅಕ್ಕಿಗಚ್ಚಿನಲ್ಲಿ ಅರೆದು ಸಕ್ಕರೆ ಬೆರಸಿ ಕುಡಿಯೆ ಕೆಂಪುಹೊನ್ನು ಮಾಣ್ಗುಂ.

ವೀರ್ಯವರ್ಧನಕ್ಕೆ :—ಕೊವರಿ, ಬೆಲ್ಲ, ಎಳ್ಳು, ಉದ್ದಿನ ಹೊಟ್ಟು, ಗೇರಹಣ್ಣು, ಇವಂ ಚೂರ್ಣವಂ ಮಾಡಿ ಕೊಳ್ಳೆ ವೀರ್ಯವರ್ಧನ.

ಕುದುರೆಯ ಕಣ್ಣಿಗೆ :—ಪಚ್ಚೆಕರ್ಪೂರವನ್ನು ಹೆಗ್ಗುಳ್ಳದ ರಸದಲ್ಲಿ ತೇದು ಕುದುರೆಯ ಕಣ್ಣಿಗೆ ಉಜ್ಜಲು ಕಣ್ಣುಹೂವು ಕರಗಿ ಹೋಗುವುದು.

ದನದ ಕಣ್ಣಿಗೆ:—ದನಗಳಿಗೆ ನೊರೆಪಾಲು, ಕೊಂಡಿಯ ರಸ, ಜಾಜಿ, ಉತ್ತ್ರ(ರಣಿರ)ಸ, ಇಷ್ಟನ್ನು ಅರೆದು ಹಚ್ಚಲು ಕಣ್ಣುಹೂವು ಮಾಣ್ಬುಂ.

ಪಟಲಕಣ್ಣಿಗೆ :—ಹುಲಿಸೊಪ್ಪನು ಅರೆದು......ಗೋ......ಯೆ ಮಾಣ್ಬುಂ. ಗಿರಿಕರ್ಣಿಕೆಯ ಸಮೂಲ, ಶಂಖ, ಶುಂಠಿ, ಅರಿಸಿನ, ಸಮಾನಂಗೊಂಡು ನೀರಲ್ಲಿ ಅರೆದು ಗುಳಿಗೆಯ ಮಾಡಿ ಕಣ್ಣಿಗೆ ಹಚ್ಚೆ ಕೆಟ್ಟಗಣ್ಣು, ಸರ್ವರೋಗಂಗಳೆಲ್ಲ ಮಾಣುವುವು.

ಪಟಲಗಣ್ಣಿಗೆ :—ಉತ್ತುತ್ತೆ ನಾಲ್ಕು ತೂಕ, ಕಪ್ಪಲಿ ನಾಲ್ಕು ತೂಕ, ನೀಲಾಂಜನ ನಾ(ಲ್ಕು) ತೂಕ, ಇಷ್ಟನ್ನು ಸಣ್ಣನಾಗಿ ಮರ್ದಿಸಿ ತಳಿಗೆಯ ಮೇಲೆ ಹಾಕಿ ನಿಂಬೆಯಹಣ್ಣಿನ ರಸದಲ್ಲಿ ಮರ್ದಿಸಿ ಗುಳಿಗೆಯಂ ಮಾಡಿ ಆ ಗುಳಿಗೆಯನ್ನು ಮೊಲೆಯಹಾಲಲ್ಲಿ ತೇದು ಹಚ್ಚಲು ಪಟಲಗಣ್ಣು ಮಾಣ್ಬುಂ.

ಹೂವುಗಣ್ಣಿಗೆ :—ನೀಲಿಯ ರಸವುಂ ಹಚ್ಚಿದರೆ ಹೂವುಗಣ್ಣು ಮಾಣ್ಬುಂ.

ಎಡೆಬಾವಿಗೆ :—ಕಿರುಕುಸಾಲೆ, ಭಕ್ತ್ರಕಾಳು, ಅಂಬಿಲದೊಳಗಣ ಅಕ್ಕಿ, ಹೊಸ ಹೆಂಚು ಇವನ್ನರೆದು ಪೂಸಲು ಎಡೆಬಾವು ಮಾಣ್ಬುಂ.

ಗಂಡಮಾಲೆಗೆ,—ಮಾವು, ಮಾವಿನ ಒಳನಾರು, ಎಳ್ಳಎಣ್ಣೆ, ಮೆಣಸು, ಇವು ನಾಲ್ಕು ಸಹವಾಗಿ ಕೊಳ್ಳಲು ಗಂಡಮಾಲೆ, ನರಗಂಡಮಾಲೆ ಮಾಣ್ಬುಂ.

ನರಮಾಲೆಗೆ :—ಬೆಲ್ಲಮುಂದ ಹಾವ ಬೇ(ರನ್ನು ಸ್ವಾ)ತೀ ನಕ್ಷತ್ರದಲ್ಲಿ ತಂದು ಆಕಳ ತುಪ್ಪದಲ್ಲಿ ಕೊಂಡರೆ ಆನೆ ಕುದುರೆಯ ಬಲವಕ್ಕು. ಇನ್ನೊಂದು ಯೋಗ—ಯವಕ್ಷಾರವನ್ನು ಇಂಗನ್ನು, ಸುಣ್ಣವನ್ನೂ ಲೇಪ ಮಾಡೆ ನರಮಾಲೆ ಕರಗಿ ಹೋಗುವುದು. ಇನ್ನೊಂದು ಯೋಗ—ಪುಣುಗನ್ನೂ, ಬೆಣ್ಣೆಯನ್ನೂ ಕೊಡಲು ಗಂಡಮಾಲೆ ಹೋಗುವುದು. ನರಮಾಲೆ ಕರಗಿ ಹೋಗುವುದು.

ದೀಪನಕ್ಕೆ :—ಓಮ, ಜೀರಿಗೆ, ಚಿತ್ರಮೂಲ, ತ್ರಿಕಟುಕ, ತ್ರಿಫಲೆ, ಸೈಂಧವ, ಸಂವತ್ಸರಲವಣ, ಕಲ್ಲುಪ್ಪು, ಇವಂ ಸಮಾನಂಗೊಂಡು ಚೂರ್ಣವಂ ಮಾಡಿ ಇರಿಸಿಕೊಂಡು ಮಜ್ಜಿಗೆಯಲ್ಲಿ ಕೊಡೆ ದೀಪನವಕ್ಕು.

ಕಾಸಕ್ಕೆ :—ಲವಂಗ ನಾಲ್ಕು ತೂಕ, ಹಿಪ್ಪಲಿ ನಾಲ್ಕು ತೂಕ, ಶುಂಠಿ ನಾಲ್ಕು ತೂಕ, ಜಾಯಿಫಲ ನಾಲ್ಕು ತೂಕ, ಕಸಕಸೆ ನಾಲ್ಕು ತೂಕ, ಓಮ ಎಂಟು ತೂಕ, ಮುರುಗ ಕಾಯಿ ನಾಲ್ಕು ತೂಕ, ಅಣಲೇಕಾಯಿ ನಾಲ್ಕು ತೂಕ, ಏಲಕ್ಕಿ ನಾಲ್ಕು ತೂಕ, ಸಕ್ಕರೆ ೧೨ ತೂಕ, ಇವನ್ನು ಚೂರ್ಣವಂ ಮಾಡಿ ಮೂರು ಬೆರಳಲ್ಲಿ ತೆಗೆದು ಕೊಳ್ಳಲು ಕಾಸ ಕೆಲವಮ್ಮ ಮಾಣುವುದು. ಅಮರದವಳ್ಳಿಯ ಚೂರ್ಣ, ನೆಲ್ಲಿಚಟ್ಟಿನ ಚೂರ್ಣ, ಸಕ್ಕರೆ ತುಪ್ಪದಲ್ಲಿ ಕೊಳ್ಳಲು ಕಾಸ ಮಾಣ್ಗುಂ.

ಮರವೆಗೆ :—ಹಸಿ ಅರಿಸಿನದ ರಸದಲ್ಲಿ ಬಿಳಿಯ ಗಣಜಿಲೆಯ ತೇದು ಜೇನುತುಪ್ಪದಲ್ಲಿ ನಸ್ಯಂಗೈಯಲು ಮರವೆ ಮಾಣ್ಗುಂ.

ಗಂಡಮಾಲೆಯ ಹೊರಲೇಪಕ್ಕೆ :—ಇಂಗುಳಬೇರು, ಹಾವುಮೆಕ್ಕೆಯ ಬೇರು, ನಗ ರೆಯ ಬೀಜ, ಇವಂ ಎಣ್ಣೆಯಲ್ಲಿ ಅಟ್ಟು ಪೂಸಲು ಗಂಡಮಾಲೆಯು ಮಾಣ್ಗುಂ.

ನಾರಹುಣ್ಣಿಗೆ :—ನೀಲಿಯ ಎಲೆಯ ಹಾವಿನ ಹಾಲಲ್ಲಿ ಅರೆದು ಪೂಸೆ ನಾರಹುಣ್ಣು ಮಾಣುವುದು.

ಗಂಡಮಾಲೆಗೆ :—ಕಹಿಸೋರೆಯ ಸುಟ್ಟು ಜೇನುತುಪ್ಪದಲ್ಲಿ ಪೂಸೆ ಗಂಡಮಾಲೆ ಮಾಣ್ಗುಂ.

ಅಂಡವಾತಕ್ಕೆ :—ಮುಟ್ಟಿದರೆ ಮುರುಟೆಯನ್ನು ಹಿಡಿಹಿಡಿಕೆಯನ್ನೂ ಅಂಬಿಲದಲ್ಲಿ ಅರೆದು ಪೂಸಲು ಅಂಡವಾತ ಮಾಣ್ಗುಂ.

ಹೆಣ್ಣೆತ್ತರಿಗೆ :—ಹಲಸಿನ ಗೊಟ್ಟೆಯ ಗ ಜೇನಲ್ಲಿ ಕೊಳ್ಳಲು ಹೆಣ್ಣೆತ್ತರು ಮಾಣ್ಗುಂ.

ಕುಷ್ಠಕ್ಕೆ :—......... ಇದ ನಿಂಬೇಹುಳಿಯಲ್ಲಿ ಅರೆದು, ಉದ್ದಿನ ತೋರ ಗುಳಿಗೆಯಂ ಮಾಡಿ, ಬಿಳಿಯ ಗಣಜಿಲ ಬೇರು, ಸಮುದ್ರಪಾಳ, ಮೆಣಸು, ಓಜರಮನೆಯ ಇಲ್ಲಣ........ ಗುಳಿಗೆಯಂ ಮಾಡಿದರೆ ಹಾವು ಕಚ್ಚಿದವರಿಗೆ ಒಂದು ಗುಳಿಗೆಯಂ ನಿಂಬೆಯ ಹುಳಿಯಲ್ಲಿ ಅರೆದು ಮೂರು ದಿನ ಹಚ್ಚಲು, ಹುಲಿಯ ತೊಗಲು, ಕರಡಿಯ ತೊಗಲು ಈ ಎರಡು ಸುಟ್ಟು, ಕರಿಯ ಗನುಗದ ರಸ, ತ್ರಿಫಲೆಯ ರಸದೊಳು ಸರಿಮಾಡಿ ತಾಮ್ರಭಾಜನದಲ್ಲಿ ಮರ್ದಿಸಿ ಪೂಸಲು ಎಂತಪ್ಪ ಕುಷ್ಠ ಮಾಣ್ಗುಂ. ನಿಂಬೇಹಣ್ಣಿನ ರಸದಲ್ಲಿ ಅರಿಸಿನ, ಲೇಸಾಗಿ ಅರೆದು ವಸ್ತ್ರಗಾಳಿತವ ಮಾಡಿ ಅದರೊಳಗೆ ಕವಡೆಯನರೆದು, ಹಾಕಿ ಬಿಸಿಲಿನಲ್ಲಿ ಇರಿಸಿ ನೆಲಅವರಿಕೆಯ ಬೇರು, ತಗಚೆಯ ಬೇರನ್ನು ಸಣ್ಣನಾಗಿ ಅರೆದು ಹೊಸಸುಣ್ಣದಲ್ಲಿ ಪೂಸೆ ಎಲ್ಲ ಕುಷ್ಠ ಮಾಣ್ಗುಂ.

ಬಿಳಿಯ ಕುಷ್ಠಕ್ಕೆ :—ಲೊಕ್ಕಿಯ ಬೇರಂ ನೆಳಲಲ್ಲಿ ಒಣಗಿಸಿ ಚೂರ್ಣವಂ ಮಾಡಿ ಗೋಮೂತ್ರದಲ್ಲಿ ಕಲಸಿ, ಏಳು ದಿನ ಸೇವಿಸೆ ೧೮ ಬಗೆ ಕುಷ್ಠ ಮಾಣ್ಗುಂ. ಕರಿಹುಲುಗಿಲ

ಬೇರು, ಬಿಳಿಹುಲುಗಿಲ ಬೇರು, ಬಿಳಿಯ ಲೊಕ್ಕಿಯ ಬೇರು, ಹಾವುನೊಕ್ಕೆಯ ಬೇರು, ಸುಗಂಧಿಕೋಷ್ಠ, ಇವಂ ಹುಳಿಯೆಲೆಯಲ್ಲಿ ಅರೆದು ಪೂಸಲು ಬಿಳಿಯ ಕುಷ್ಠ ಮಾಣ್ಗುಂ. ...........ಗೇರಹರಳಂ ಏಳನ್ನು, ಒಮ್ಮಾನ (?) ಬಿಳಿಯಬೇಳೆ ಇಪ್ಪಲ, ಚಿತ್ರಮೂಲದ ಚೂರ್ಣ ಇಪ್ಪಲ, ಬೆಲ್ಲ ಪಲ, ಇವಂ ಬಿಗಳಿಯಾಗಿ ಕುಟ್ಟಿ ದಿನಪ್ರತಿ ಅಮಲಕದಷ್ಟನ್ನು ಸೇವಿಸೆ ಗಲ ಬಗೆಯ ಕುಷ್ಠ ಮಾಣ್ಗುಂ.

................... ಗೇರಹರಳ ನೂರಂ ಅಡಕತ್ತಿಯಲ್ಲಿ ನಾಲ್ಕು ಭಾಗವ ಮಾಡಿ ಒಮ್ಮಾನ ಎಣ್ಣೆಯಲ್ಲಿ ಹಾಕಿ ಚಿತ್ರಮೂಲದ ಬೇರಿನ ಚೂರ್ಣವ ಹಾಕಿ ಅದಕ್ಕೆ ತಕ್ಕಷ್ಟು ಕೋಷ್ಠವನ್ನು ಹಾಕಿ ಅರೆದು ಕುದಿಯಾಗಿ ಕಾಸಿ ನೆಲದಮೇಲೆ ಇರಿಸಿಕೊಂಡು ಹೊರಲೇಪನ ಮಾಡಲು ಕುಷ್ಠ ಮಾಣ್ಗುಂ.

ವೀರ್ಯವರ್ಧನಕ್ಕೆ :—ಕೊಬ್ಬರಿತೆಂಗಿನಕಾಯ ತೂತು ಮಾಡಿ ನೀರ ಬಸಿದು ಅದರೊಳಗೆ ಯಷ್ಟಿಮಧುಕದ ಪುಡಿ ತೊಕ ಮೂರು, ನಾಲ್ವೆಗಳು ಏಲಕ್ಕಿ, ನಾಲ್ವೆರಳು ಸಕ್ಕರೆ, ಇದಂ ಸದಗುಟ್ಟಿ ಕಾಯೊಳಗೆ ತುಂಬಿ ಅದರ ಬಾಯಿಗೆ ಬೆಣ್ಣೆಯ ಹಚ್ಚಿ, ಕರುಪಿನ ಎಮ್ಮೆ ಹಾಲು ನಾಲ್ಕು ಮಾನ ಸಣ್ಣಿಗೆಯಲ್ಲಿ ಹೊಯ್ದು ಡೋಲಾಯಂತ್ರದಲ್ಲಿ ಹಾಲು ಇಂಗುವ ಪರಿಯಂತರ ಅಟ್ಟಿ ಅಷ್ಟಿದಷ್ಟು ಸಿಕ್ಕಿದರೆ ಇಳುಹಿ ಆರಿದರೆ ನೆಲ್ಲಿಕಾಯಷ್ಟು ಗುಳಿಗೆಯಂ ಮಾಡಿದರೆ ಒಂದುಂಡೆಯ ಮೆದ್ದು ಆವಿನ ಹಾಲು ಕುಡಿಯೆ ತಲೆನಡುಗುವ ಪರ್ಯಂತರ ವೀರ್ಯವರ್ಧನ.

ವಾತಗುಲ್ಮಕ್ಕೆ :—ವಾಯಿವಿಳಂಗ, ತ್ರಿಫಲೆ, ತ್ರಿಕಟುಕ, ಚವ್ಯ, ಬಲಿಬೀಜ, ಚಿತ್ರಮೂಲ, ಇವುಗಳ ಕಲ್ಕುಮಂ ತುಪ್ಪ ನಾಲ್ಕು ಮಡಿ ಹಾಲಲ್ಲಿ ಅಟ್ಟಿ ಕೊಡಲು ವಾತಗುಲ್ಮ ಮಾಣ್ಗುಂ.

ಸರ್ವಗುಲ್ಮಗಳಿಗೆ :—...... ತ್ರಿಕಟುಕ, ನಾಗಕೇಸರ, ಯೆಕು......ಸಮ ಇವುಗಳಷ್ಟು ಸಕ್ಕರೆ ಬೆರಸಿ ಭಕ್ಷಿಸಲು ಸರ್ವಗುಲ್ಮ ಮಾಣ್ಗುಂ.

ಗುಲ್ಮಕ್ಕೆ :—ಮುತ್ತಗದ ಬೀಜ, ಶುಂಠಿ, ಚವ್ಯ, ಚಿತ್ರಮೂಲ, ಹಿಪ್ಪಲಿ, ಯವಕ್ಷಾರ, ಹುಲು(ಗಿ)ಲ ಬೇರು, ಇವುಗಳ ಕಷಾಯವಂ ಅರ್ಧ (ಪಲ) ತುಪ್ಪದಲ್ಲಿ ಕೊಂಬುದು, ಗುಲ್ಮ ಮಾಣ್ಗುಂ.

ಬಾಣಂತಿಶೂಲೆಗೆ :—ಕರಿಯ ಸಿಣಾಸಿಣಾಕೆ, ಬಿಳಿಯ ಸಿಣಾಸಿಣಾಕೆ, ಕಟುಕ ರೋಹಿಣಿ, ಹೆಗ್ಗುಳ್ಳ, ನೆಲಗುಳ್ಳ, ಇವ ತೈಲದಲ್ಲಟ್ಟು ಹೊಟ್ಟೆಗೆ ಕುಡಿಯೆ ಬಾಣಂತಿ ರೋಗಹರ.

ಬಾಣಂತಿರೋಗಕ್ಕೆ :—ಚಿಕ್ಕಮರುಳು, ಮೈಕೆಬೇರು, ಗಂಡಸಿನವದಲ್ಲಿ ನಿಂಬೇಕಾಯಷ್ಟು ಕುಡಿಯೆ ಬಾಣಂತಿರೋಗ ಬಹುರಿಳಿವದು ಮಾಣ್ಗುಂ.

ಸ್ತ್ರೀಗೆ ಫಲವಾಗುವರೆ :—ಸ್ತ್ರೀಸೋಕಡೆ ಎರಡನೇ ದಿನದಲ್ಲಿ ಪುತ್ರಜೀವಿಯ ಬೀಜ ಬೇಳೆಯ ಮಾಡಿ ಹಸುವಿನ ಹಾಲಲ್ಲಿ ಅರೆದು ಕೊಡುವದು, ಮೂರನೇ ದಿನ ನಾಲ್ಕು ಬೀಜವ ಕೊಡುವುದು. ನಾಲ್ಕನೇ ದಿನ ೫ ಬೀಜವ ಕೊಡುವುದು. ಸ್ತ್ರೀಗೆ ಫಲವಾಗುವುದು.

ವೀರ್ಯವರ್ಧನಕ್ಕೆ :—ಆಲದ ಬಿಳಲಂ ಮೇಕೆಯ ಹಾಲಲ್ಲಿ ಅರೆದು ಹಿಂಡಿದ ರಸವನರೆದು ಆರು ಸೇರು ಸಕ್ಕರೆ ಸಹ ೩ ದಿನ ಕೊಳ್ಳಲು ವೀರ್ಯವರ್ಧನಂ.

ಕುಷ್ಠಕ್ಕೆ :—ಇಲ್ಲಣ, ಅರಸಿನ, ಕೋಷ್ಠ, ರಾಗಿ, ಕೊಡಸಿಗೆಯ ಕಾಯಿ, ಇದಂ ಮಜ್ಜಿಗೆಯಲ್ಲಿ ಅರೆದು ಶಿಶುಗಳಿಗೆ ಪೂಸೆ, ಸಿಧ್ಮವೆಂಬ, ಪಾಮಾ ಎಂಬ, ವಿಚರ್ಚಿಯೆಂಬ ಮೂರು ತೆರದ ಕುಷ್ಠ ಮಾಣ್ಗುಂ.

ಮಾತು ಬರುವುದಕ್ಕೆ :—ಹೊನಗೊನ್ನೆಯ ರಸ, ಹಿಪ್ಪಲಿ, ಓಮ, ಬಜೆ, ಅರಿಸಿನ, ಕೋಷ್ಠ, ಜೀರಿಗೆ, ಶುಂಠಿ, ಸೈಂಧವ, ಯಷ್ಟಿಮಧುಕ, ಇವಂ ತುಪ್ಪದಲ್ಲಿ ಲೇಹ್ಯಂ ಮಾಡೆ ಸಣ್ಣವರಿಗೆ ಮಾತು ಬರುವುದು.

ಮೂಲವ್ಯಾಧಿಗೆ :—ಗೋಮೂತ್ರ, ಸೊಜ್ಜಿಗೆ, ದಂತಿ, ನೀರಹಿಪ್ಪಲಿಯ ಬೇರು, ಚಿತ್ರಮೂಲ, ಇವನ್ನರೆದು ಗುದಕ್ಕೆ ಪೂಸಲು ಮೂಲವ್ಯಾಧಿ ತೀರುವದು.

ಎಲ್ಲಾ ತೆರದ ಮೂಲವ್ಯಾಧಿಗಳಿಗೆ :—ಮುತ್ತುಗದ ತಿಗಡು ಸುಟ್ಟು ಆ ಬೂದಿಯೊಳಗೆ ತ್ರಿಕಟುಕವನರೆದು ಪಡಿನೀರಲ್ಲಿ ಕದಡಿ ಅಟ್ಟು ಇಳುಹಿ ಅದ ಸೇವಿಸೆ ಎಲ್ಲಾ ತೆರದ ಮೂಲ ವ್ಯಾಧಿ ತೀರ್ಗುಂ.

ರಕ್ತಮೂಲವ್ಯಾಧಿಗೆ :—ಬೋಳ, ನಾಗಕೇಸರ, ಖಂಡಸಕ್ಕರೆ, ಇವಂ ಏಳು ದಿನ ಗಟ್ಟಿ ಬೆಣ್ಣೆಯಲ್ಲಿ ಮೆಲೆ ರಕ್ತಮೂಲವ್ಯಾಧಿ ಮಾಣ್ಗುಂ.

ಯೋನಿದೋಷಕ್ಕೆ :—ಹೆನ್ನೆತ್ತರು ನಡವಡಂ, ಶೂಲೆಯುಳ್ಳಡಂ, ಕುಷ್ಠಯೋನಿ ಯೊಪ್ಪಡಂ, ಕರಿಯೋನಿಯೊಪ್ಪಡಂ, ತಿಲಕಯೋನಿಯೊಪ್ಪಡಂ, ಗರ್ಭವಾಗದುದುಂ ಜಿ... ......ಬೆರಲ......ನಾದ ಅಕ್ಕಿಬೆರಸಿ ಹಿಟ್ಟುಗುಟ್ಟಿ ತುಪ್ಪದಲ್ಲಿ ತೊಳಸಿ ಮೆದ್ದು ಯೋನಿಗುತ್ತರಣಿಯನರೆದು ಕಟ್ಟೆ ಮಾಣ್ಗುಂ. ಪಥ್ಯ ಎಮ್ಮೆಯ ಅಳೆಯಂ, ಅಂಬಲಿ ಉಣ್ಣೆ ಹೆನ್ನೆತ್ತರು ಮಾಣ್ಗುಂ.

ಯೋನಿದೋಷಕ್ಕೆ :—ಕಿರುಕುಸಾಲೆಯ ಬೇರು, ಗಣಜಲ ಬೇರು, ತುಳಸಿಯ ಬೇರು, ಯಷ್ಟಿಮದುಕ, ಇವ ಚೂರ್ಣವಂ ಮಾಡಿ ಹಸುವಿನ ತುಪ್ಪದಲ್ಲಿ ಕೊಳ್ಳೆ ಯೋನಿದೋಷ ಮಾಣ್ಗುಂ. ಉತ್ತರಣಿಯನರೆದು ಪೊಟ್ಟಣವ ಕಟ್ಟಿ ಯೋನಿಯೊಳೊತ್ತೆ ಹೆನ್ನೆತ್ತರು ಮಾಣ್ಗುಂ.

ಯೋನಿಮೂತ್ರದೋಷಗಳಿಗೆ :—ಎಣ್ಣೆ, ಬೆಲ್ಲ, ಅಂಬಿಲ, ಇವಂ ಕಾಸಿ ಕುಡಿಯೆ ಯೋನಿದೋಷ ಮಾಣ್ಗುಂ. ಮೂತ್ರದೋಷ ಮಾಣ್ಗುಂ. ಯೋನಿದೋಷಕ್ಕೆ ನೈದಿಲಗೆಡ್ಡೆ ಅರಿದಳ, ಹಿಪ್ಪಲಿ, ಇವ ಸಣ್ಣನಾಗಿ ಅರೆದು ಯೋನಿಯೊಳೊತ್ತೆ ಯೋನಿದೋಷ ಮಾಣ್ಗುಂ.

ಭಗದಾಳಕ್ಕೆ :—...... ಸೇಗು......ಯ ಎಲೆಯ ......ಂಬದ...ಎಲೆ, ಸುಟ್ಟ ಬೂದಿ...... ೭, ಹೆಗ್ಗುಳ್ಳದ ಬೇರು ತೂಕ ೭, ಕರಿಯ ಉಮ್ಮತ್ತಿಯ ಎಲೆ ತೂಕ ೭, ತುಪ್ಪ ತೂಕ ೭, ಇವ ಅರೆದು ಪೂಸೆ ಭಗದಾಳ ಮಾಣ್ಗುಂ.

ಭಗದಾಳ :—......ನೆಲದಾಳ ಎಣ್ಣೆಯಲ್ಲಿ ಅರೆದು ಕುಡಿಯೆ ಭಗದಾಳ ಮಾಣ್ಗುಂ. ... .... ಮಡುವಾಗಲಿದ ಗೆಡ್ಡೆಯ ರಸದಲ್ಲಿ ಏಳು ದಿನ ಮೆಣಸು ನೆನೆಯಿಕ್ಕಿ ನೀರಲ್ಲಿ ತೇದು ಹಣೆಗೆ ಹಚ್ಚಲು......ಗ್ರಕ್ಷ ಪೋಕುಂ.

ವಾತಕ್ಕೆ :—ಆಷಾಢಿಯ ಬೇರು ಪುಡಿ ಮಾಡಿ ಅಂಬಲಿದಿಂದ ನೆತ್ತಿಗೊತ್ತೆ ಕಪಾಲ ವಾತ ಹರ.

ನೆತ್ತರು ಪೋಗುವುದಕ್ಕೆ:—ಕತ್ತ್ರಿಯ ಲಸ್ಪ, ಬಿಳಿಯ ಉಗನಿಯ ಎಲೆ, ಮೊಸರಲ್ಲಿ ಅರೆದು ಮೊಸರಲ್ಲಿ ಕುಡಿಯೆ ನೆತ್ತರುಬಸರು ಮಾಣ್ಗುಂ.

ಜ್ವರಕ್ಕೆ :—ಕಟುಕರೋಹಿಣಿ, ಎಣ್ಣೆಯಂ ಮೈಗೆ ಪೂಸೆ ಜ್ವರ ತೀರ್ಗುಂ.

ಗುಲ್ಮಶೂಲೆಮೂಲವ್ಯಾಧಿಗಳಿಗೆ :—ಬಸ್ಮುರುಪೆ, ಸ್ತಂಭನ, ಇವ ಭಸ್ಮಂ ಮಾಡಿ ಮಜ್ಜಿಗೆಯಲ್ಲಿ ಕುಡಿಯೆ ಗುಲ್ಮ, ಶೂಲೆ, ಮೂಲವ್ಯಾಧಿ, ಮಾಣ್ಗುಂ. ಜಲಗರ ಮಾಣ್ಗುಂ.

ಉಗ್ರಜ್ವರಕ್ಕೆ :—ಓಡಲಿದ ಬೀಜ. ಸಾಸುವೆಯಂ ಹಾಲಿಂದ ಕುಡಿಯೆ ಬಿಸಿನೆತ್ತರು ತೀರ್ಗುಂ. ಓಡಲಿದ ಎಣ್ಣೆ ಕುಂಬಳಕಾಯ ರಸದಿ ಕುಡಿಯೆ ಉಗ್ರಜ್ವರ ತೀರ್ಗುಂ.

ಹಲ್ಲುಶೂಲೆಗೆ :—ಹುಲಿಗಿಲಿ ಬೇರು, ಸಹದೇವಿ, ಎರಡು ಸುಗ್ಗಿ, ಸರ್ಪಾಕ್ಷಿಯ ಬೀಜ, ಅರೆದು ಅಡಲು ಹಲ್ಲುಶೂಲೆ ತೀರ್ಗುಂ.

ಕಾಮಾಲೆಗೆ :—ಕಟುರೋಹಿಣಿಬೀಜದ ರಸಮಂ ನಸ್ಯ ಮಾಡೆ ಕಾಮಾಲೆ ತೀರ್ಗುಂ.

ಕಣ್ಣುಬೇನೆಗೆ :— ... ..ಕೋಳಿಕುಟುಮನಗೆಡ್ಡೆ, ಬಿಳಿಕೋವಳಿಕೆಬೀಜ, ಬೇವಿನ ಹಗನು, ಬಿಳಿಯ ಎಕ್ಕೆ, ಅಂಜೂರ, ಇಷ್ಟು ಚೂರ್ಣಂ ಮಾಡಿ ಲೇಪನ ಮಾಡುವುದು. ಈ ರಸದಲ್ಲಿ ಗುಳಿಗೆಯಂ ಮಾಡಿ ನೆಳಲಲ್ಲಿ ಒಣಗಿಸಿ ಆ ಗುಳಿಗೆಯ ಅಂಚಿನಲ್ಲಿ ಹಚ್ಚೆ ಕೀಲು ಗಣ್ಣು ತೀರ್ಗುಂ. ತುಪ್ಪದಲ್ಲಿ ಹಚ್ಚೆ ಕಣ್ಣುಬೇನೆ ತೀರ್ಗುಂ. ಅವ ಲೊಕ್ಕಿಯ ರಸದಲ್ಲಿ ಹಚ್ಚೆ ೧೮ ತೆರದ ರೋಗ ಮಾಣುವುವು.

ಹೊಟ್ಟೆಬೇನೆಗೆ :—ಂಪಿರದ ಕೊನರು......ಲ್ಲಿ ಕುಡಿಯೆ ......ಪೋ...... ಹೊಟ್ಟೆ ಬೇನೆ ತೀರ್ಗುಂ.

ಹೊಟ್ಟೆಬೇನೆಗೆ :—......ಬೆಣ್ಣೆ ೧೩ ದಿನ ಹಾಲಲ್ಲಿ ಕುಡಿಯೆ ಹೊಟ್ಟೆಬೇನೆ ತೀರ್ಗುಂ.

ಗಂಡಮಾಲೆಗೆ:—......... ನಿಂಬೇಹಣ್ಣಿನ ರಸ, ಈಮೂರು ಪೂಸಿ ಕೂದಲು ಹಾಕಿ ಅಟ್ಟು ಆ ಕೂದಲು ಕರಗಲೊಡನೇ ಇಳುಹಿ ಆ ತೈಲವಂ ಮಾಗಂಟು, ಆಟುಹುಟ್ಟು, ಗಂಡ ಮಾಲೆ, ಪು... ........ಣ ಇವು ಎಲ್ಲಾ ಮಾಣ್ಗುಂ.

ಗಳಗ್ರಂಥಿಗೆ :— ನೆಲಗುಳ್ಳದ ಬೇರು, ಅರಸಿನ, ಹಾವುನೊಕ್ಕೆಯಬೇರು, ಇವಂ ಎಕ್ಕೆಯ ಹಾಲಲ್ಲಿ ಅರೆದು ಪೂಸೆ ಗಳಗ್ರಂಥಿ ಪೋಕು.

ನೆತ್ತರುಕಾರುವದಕ್ಕೆ -—ಇಪ್ಪೆಯಹೂವು, ಯಷ್ಟಿಮಧುಕ, ಇವ ಮರ್ದಿಸಿ ಕಷಾಯ ಮಾಡಿ ಬೆಲ್ಲ ಹಾಲು ಸಮಾನವಾಗಿ ಕುಡಿಯೆ ನೆತ್ತರು ಕಾರುವದು ತೀರ್ಗುಂ.

ಮೂಗಿನ ರಕ್ತಕ್ಕೆ :— ಕಿರುಕಸಾಲೆಯ ಸಮ ಸಕ್ಕರೆಯನು ನಸ್ಯ ಮಾಡೆ ಮೂಗಿನ ರಕ್ತ ತೀರ್ಗುಂ.

ಸರ್ವರೋಗಕ್ಕೆ -—ಎಕ್ಕೆಯ ಎಲೆ, ಔಡಲ, ಲೊಕ್ಕಿ, ಹುಣಸ, ಅಂಕೋಲೆ, ಬೇವಿನ ಸೊಪ್ಪು, ಬ್ರಾಹ್ಮೀಹೊಡೆ, ಅಷ್ಟರಸ, ಈ ಸೊಪ್ಪುಗಳಂ ಸಮಾಸಂಗೊಂಡು ಹಳೆಯ ಕಲಶವಂ ತುಂಬಿ ನೀರಂ ಹೊಯ್ದು ಲೇಸಾಗಿ ಕುದಿಸಿ ಮೈನೋವವರಿಗೆ, ಮುಖರೋಗದಾತಂಗೆ,ತಲೆಭಾರದಾತಂಗೆ, ಕಠಿಣವಾದ ರೋಗದಿಂ ಜಡನಾದಾತಂಗೆ, ತಲೆತಿರುಗುವಾತಂಗೆ, ಇಷ್ಟು ವ್ಯಾಧಿಯವರಿಗೆ ಮಂಚದ ಹಾಸಿಗೆಯಂ ತೆಗೆದು ತುಸು ಕುದಿಸಿ ನೇಲೆ ಕುಳಿತು ಮುಚ್ಚಿಕೊಂಡು ಸೇಕಂಗೊಳ್ಳಲು ಆ ವ್ಯಾಧಿ ತೀರ್ಗುಂ.

ಸರ್ವರೋಗಕ್ಕೆ -—ಅಂಕೋಲೆ, ಔಡಲ, ಎಕ್ಕೆ, ಕಕ್ಕೆ, ಲೊಕ್ಕಿ, ಕಗ್ಗಿ, ಅ(ಪ)ಸರ, ಗಣಜಿಲ, ಹು(ಣ)ಸೆ, ಬೇವು, ಈ ಸೊಪ್ಪುಗಳನ್ನು ಸಮಾನಂಗೊಂಡು ಕಳಸೆಯ ಕುಂಬಿ ಅಜಾಮೂತ್ರವ ಹೊಯ್ದು ಲೇಸಾಗಿ ಕುದಿಸಿ, ಮರಿವದಡದಲ್ಲಿ ಇಕ್ಕಿ ಮುಚ್ಚಿಕೊಂಡು, ಶಾಖಗೊಳ್ಳಲು ಭಾರ, ಮುಖರೋಗ, ಶಿಖೆ, ಸರ್ವರೋಗ, ಜ್ವರ, ಇನಿತುಂ ತೀರ್ಗುಂ.

ಅಂಬುಪುಣ್ಣಿಗೆ :—ಕಕ್ಕೆಯ ತಿಗುಡು, ಬದನೇಕಾಯ ಬೇರು, ಇವಂ ಎಣ್ಣೆಯಲ್ಲಿ ಅಟ್ಟು ಪೂಸ ಅಂಬುಪುಣ್ಣು ಮಾಣ್ಗುಂ.

ಬಂಗುವಿಗೆ -— ಪಡವಲದ ಬೀಜವ ಪೂಸ ಬಂಗು ತೀರ್ಗುಂ.

ಎಲ್ಲಪುಣ್ಣುಗಳಿಗೆ :—ಕತ್ತರಿಯ ಬೇರು, ಹುಣಸೆಯ ಹಣ್ಣು ಭಾವಿಸಿ ಕುಡಿಯೆ ಹುಣ್ಣೆಲ್ಲಾ ತೀರ್ಗುಂ.

ಬಾಣಂತಿರೋಗಕ್ಕೆ :—ಹಾಲೆಯ ಬೇರಿನ ತಿಗಡು ಅಮರಲೆಯ ರಸದಲ್ಲಿ ಕುಡಿಯೆ ಬಾಣಂತೀರೋಗ ಮೈಯೊಳ ನಂಜಿ ತೀರ್ಗುಂ.

ಇದಿರೋಕರಿಕೆಗೆ :—ನೆಲ್ಲಿಕಾಯಿ ಬೀಜ ೧೦, ಕಾಯಿ ತಿರಳು ೧೦, ಏಲಕ್ಕಿ, ಅಡಕೆ ಯಷ್ಟು ಬೆಲ್ಲದಲ್ಲಿ ಕೊಳ್ಳಲು ಇದಿರೋಕರಿಗೆ ತೀರ್ಗುಂ.

ಚಾಳೀಸಕ್ಕೆ :—ಭದ್ರಮುಷ್ಟಿ, ತಾಮ್ರದಲ್ಲಿ ಜಾಡಿಸಿ ಹಚ್ಚೆ ಚಾಳೀಸ ತೀರ್ಗು೦.

ಚೇಳುಕಡಿತಕ್ಕೆ :—ಗಜ್ಜುಗದ ತಿರುಳು, ಎಕ್ಕೆಯ ಹಾಲು, ಜೇನುಮೇಣ, ಇವನ್ನರೆದು ಕುಡಿಹುರಿ ಮಾಡಿ ಚೇಳು ಕಡಿದವರಿಗೆ ಇಳಿಯ ತೆಗೆದು ದೀವಿಗೆಕುಡಿಯಲ್ಲಿ ಕಾಸಿ ಸುಡೆ ಮಾಣ್ಗು೦.

ಬಾರದ ಮೇಲೆ ಬರುವುದಕ್ಕೆ -—ಬಿಳಿ ಅಂಗುರ, ಎಮ್ಮೆ ಬೆಣ್ಣೆಯ ಪೂಸೆ ಬಾರದ ಮೇಲೆ ಬಕ್ಕು.

ಇರುಳುಗಣ್ಣಿಗೆ :—ಸಮುದ್ರಪಾಳಬೀಜ, ಜೇನುತುಪ್ಪ, ಗುಳ್ಳದಹಣ್ಣಿನ ರಸದಿಂ ಪೂಸೆ ಕೆಬುಳು ಬೀಳ್ಗು೦.

ಇರುಳುಗಣ್ಣಿಗೆ :—ಗಜ್ಜುಗದ ತಿರುಳು, ಹುಣಸೆಯ ಎಲೆ ಹಚ್ಚೆ ಇರುಳುಗಣ್ಣು ಮಾಣ್ಗು೦.

ಮುಡುಬುಶೂಲೆಗೆ :—ಮೂರು ಮಾನ ಮಜ್ಜಿಗೆ ಒಂದು ಹಿಡಿ ಲೊಕ್ಕಿಯ ಸೊಪ್ಪಿ ನೊಳಗೆ ಹೊಯ್ದು ತುಳಿದು ಮೂರು ಮಾನ ರಸವ ತೆಗೆದುಕೊಂಡು ಮೂರು ಸೊಲ್ಲಗೆ ಅದ ಸ್ನಟ್ಟು, ನೆಲ್ಲಿಗೊಟ್ಟು, ನೆಲ್ಲಿಗೊಟ್ಟಕ್ಕಿಯ ಚೂರ್ಣವ ತಳಿದು ಪ್ರತಿಪಾಕವಿಕ್ಕೆ ಉದಯಕಾಲದಲ್ಲಿ ಸೇವಿಸಿ ಮರ್ದನಂ ಮಾಡೆ ಮಂದಾಗ್ನಿ, ವಾತಶೂಲೆ, ಪಾದಶೂಲೆ, ಸರ್ವಾಂ(ಗ)ಶೂಲೆ, ಮುಡಬು ಶೂಲೆ, ಮಾಣ್ಗು೦.

ಬಾಣಂತಿರೋಗಕ್ಕೆ :—ಜೆಲ್ಲವತ್ತ್ಯದ ಒಳನಾರು ಒಂದು ಹಿಡಿಯ ತುಳಿದು ಅಮರಿಯ ರಸ ಒಂದು ಬಟ್ಟಲಲ್ಲಿ ಹೊಯ್ದು ಉದಯದಲ್ಲಿ ಮೂರುದಿನ ಕೊಳ್ಳಲು ಬಾಣಂತಿರೋಗ ಮಾಣ್ಗು೦.

ವಾತಕ್ಕೆ :—ಗರುಗದ ಬೇರು ಆವಿನ ತುಪ್ಪದಿ ಕುಡಿಯೆ ವಾತ ತೀರ್ಗು೦.

ಪಂಚಗುಲ್ಮಕ್ಕೆ :—ತ್ರಿಕಟುಕ, ಪಂಚಲವಣ, ಜೀರಿಗೆ, ಇಂಗು, ಬಜೆ, ಓಮ, ಇವಂ ಸೇವಿಸೆ ಸರ್ವಾಂಗವಾತ, ಪಂಚಗುಲ್ಮ ತೀರ್ಗು೦.

ವಾತಕ್ಕೆ :—ಎಕ್ಕೆಯ ಬೇರು, ಎಳ್ಳು, ಬೆಲ್ಲವಂ ತುಳಿದು ಮದ್ದು ಬಿಸಿನೀರಂ ಕುಡಿಯೆ ವಾತ ಮಾಣ್ಗು೦.

ಕಾಮಾಲೆಗೆ :—ಸಂವತ್ಸರಲವಣ, ಶುಂಠಿ, ಇಂಗು, ಇವಂ ಚೂರ್ಣವಂ ಮಾಡಿ ಕಷಾಯವಂ ಕುಡಿಯೆ ಊದುಕಾಮಾಲೆ ತೀರ್ಗು೦. ವಾತ, ಶ್ವಾಸ ಮೊದಲಾದ ಬದಿಯಬೇನೆ ತೀರ್ಗು೦.

ಎಲ್ಲಾವಿಧವಾತಕ್ಕೆ :—ಆಡುಸೋಗೇಬೀಜ, ಗುಂಜಿ, ಕಕ್ಕೇಕಾಯಿ, ಇವಂ ಕಷಾಯವಂ ಕಾಸಿ ಔಡಲದ ಎಣ್ಣೆಯಿಂ ಮೃದುಪಾಕವಿಕ್ಕಿ ಕುಡಿಯೆ ಎಲ್ಲಾ ವಾತ ತೀರ್ಗು೦.

ವಾತಕ್ಕೆ :—ಎಕ್ಕೆಯ ಹಾಲು, ಆಡಿನಹಾಲು, ಲೊಕ್ಕಿಯಹೂವು, ಇವಂ ಸಮಾನಂ ಗೊಂಡು ಎಣ್ಣೆಯಲ್ಲಿ ಅಟ್ಟು ಪೂಸೆ ೮ ದಿನಕ್ಕೆ ವಾತ ತೀರ್ಗು೦.

ಕಾಮಾಲೆಗೆ :—ಎತ್ತುಸಾಲಿಗೆಯ ರಸಮಂ ಆಡಿನ ಹಾಲಲ್ಲಿ ಬೆಲ್ಲದಿ ಕುಡಿಯೆ ಊದು ಗಾಮಾಲೆ ತೀರ್ಗುಂ.

೮೦ ತೆರದ ವಾತಕ್ಕೆ :—ಗಣಜಿಲ ಬೇರು, ಅಂಗುರದ ಬೇರು, ಚಿಟ್ಕೌಡಲದ ಬೇರು, ಹೆಕ್ಕೌಡಲದ ಬೇರು, ಶುಂಠಿ, ಇವ ಕಷಾಯಮಂ ಕುಡಿಯೆ ೮೦ ತೆರದ ವಾತ ತೀರ್ಗುಂ.

ಕೆಂಪಿನ ಬಿಳಿಯ ಹೆಸ್ನಗೆ :—ಬಿಳಿಯ ದಾಸವಾಳ, ಕೆಂಪಿನ ದಾಸವಾಳದ ಹೂವು, ಕರಿಯ ಹತ್ತಿಯ ಹೂವು, ಎಳಗಾಯಿ, ನೀರಲ್ಲಿ ಕುದಿಸಿ ಕೈಯಲ್ಲಿ ಕಿವಿಚಿ ಆ ನೀರು ತೆಗೆದು ಕೊಂಡು ಅದೆರೊಳಗೆ ಬಿಳಿಯ ವಸ್ತ್ರವನ್ನು ಸುಟ್ಟು ಕರಿಯ ಹಾಕಿ ಗೋಪೀಚಂದನ, ಗೋರೋಚನ, ಈ ಎರಡನ್ನೂ ಕದಡಿ ಒಚ್ಚಡಿ ನೈಯ್ಯ ಹೆಂಗಸಿಗೆ ಒಂದು ಬಟ್ಟಲು, ತುಂಬಿದ ನೈಯ್ಯವಳಿಗೆ ಅರೆ ಬಟ್ಟಲು, ಇಂತು ೮ ದಿನ ಕೊಳ್ಳಲು ಹೆಸ್ನ ತೀರ್ಗುಂ. ಲವಣಾಮ್ಲ ವರ್ಜ್ಯ.

ಗುಲ್ಮಶೂಲೆಗೆ :—ಅಳಲೇಕಾಯಿ ತೂಕ ೧, ಹಿಪ್ಪಲಿ ತೂಕ ೧, ಇವಂ ಚೂರ್ಣವಂ ಮಾಡಿ ಸೈಂಧವವಂ ಎರಡು ಬಟ್ಟಲು ನೀರು ಹೊಯ್ದು ಒಂದು ಬಟ್ಟಲಪ್ಪಂತು ಕಾಸಿ ಮೂರು ದಿನ ಕುಡಿಯೆ ಗುಲ್ಮಶೂಲೆ ಮಾಣ್ಗುಂ.

ವಾತಕ್ಕೆ :—ಅವರೆಯ ಬೇರು, ತಿಗಡು ಇವಂ ಪುಡಿ ಮಾಡಿ ಅಕ್ಕಿಯ ಓಟ್ಟು ಅಟ್ಟು ಆವಿನ ತುಪ್ಪದಲ್ಲಿ ೭ ದಿನ ಕೊಳ್ಳಲು ವಾತ ಹರ.

ಶೂಲೆಗೆ :—ಇಂಗುಳಹಣ್ಣಿನ ತಿರುಳು ಬಿಸಿನೀರಲ್ಲಿ ಅರೆದು ಕುಡಿಯೆ ಶೂಲೆ ಹರ.

ನೈಬಾವಿಗೆ :—ಅರಿದಾಳವ ಸುಟ್ಟು, ಸೈಂಧವ, ಗುಂಜಿ, ಗಂಧಕ, ಇವಂ ಎಣ್ಣೆಯೊಳು ಪೂಸೆ ನೈಬಾವು ಮಾಣ್ಗುಂ.

ಬಂಜೆತನಕ್ಕೆ :— ಮಡುವಾಗಲಗೆಡ್ಡೆ........................................................ಹಾಲಲ್ಲಿ ಕಲಸಿ ಉಗೆಯ ಮಾಡಿ ಮರುದಿನ ಹಸುವಿನ ತುಪ್ಪದಿ ಮೆಲ್ಲೆ ಗರ್ಭವಕ್ಕು. ಅಂಕೋಲೆಯ ಬೀಜ, ಬಿಳಿಯ......ಯ ಮಾಡಿ ಕಾಳಿಆವಿನ ಹಾಲಿನಲ್ಲಿ ಅರೆದು ಅಟ್ಟು ಆ ತುಪ್ಪದಿಂ ನೆದ್ದು ಮಧುರಾಹಾರವನುಣ್ಣೆ ಗರ್ಭವಕ್ಕುಂ.

ಯೋನಿದೋಷಕ್ಕೆ :—ಕಹಿಬ್ರಾಹ್ಮಿಯ ಸೊಪ್ಪಿನ.ರಸವನ್ನು ದೊಡ್ಡಮರಗೆಯಲ್ಲಿ ತುಂಬಿ ಎರಡು ಘಳಿಗೆ ಕುಂದಿಸಿ ಕೊಳ್ಳೆ ಯೋನಿದೋಷ ಪೋಕು.

ಕುಷ್ಠದೋಷಕ್ಕೆ :—ಕಳ್ಳಿಯ ಕೊನರು, ಅರಸಿನ, ಸೈಂಧವಲವಣ, ಗೊಮೂತ್ರ, ಚಿತ್ರಮೂಲದ ಬೇರು, ಗರುಗ, ಎಕ್ಕೆಯಹಾಲು, ಚೆಂಗಲಕೋಷ್ಠ, ಕಣಗಿಲಬೇರು, ಮರದರಿಸಿನ, ಇವ ತೈಲದಲ್ಲಿ ಅಟ್ಟು ಪೂಸೆ ಕುಷ್ಠ ಮಾಣ್ಗುಂ.

ಕುಷ್ಠಕ್ಕೆ :—ತಾರೇಕಾಯಿ, ಕಲ್ಲತ್ತಿಯಸೊಪ್ಪು, ......ಬಾವಂಜಿಯ ಬೀಜವನ್ನೂ ಬೆಲ್ಲಸಹವಾಗಿ ಒಡಲೊಳಕ್ಕೆ ಕೊಟ್ಟರೆ ಶ್ವೇತಕುಷ್ಠ ಮಾಣ್ಗುಂ.

ಕುಷ್ಠಕ್ಕೆ :—ಚಿಂಗಲಕೋಷ್ಠ, ಸೈಂಧವಲವಣ, ...ಸ...ವಿ.........ಯ ತೊಪ್ಪೆ ಇವಂ ಸಮಭಾಗ ಅಂಬಿಲದಲ್ಲಿ ಅರೆದು ಪೂಸೆ ಕುಷ್ಠ ಮಾಣ್ಗುಂ. ಸಜ್ಜರಸ, ಗಂಧಕ, ಅಳಲೇಕಾಯಿ, ಕೋಷ್ಠ, ಸಾಸಿವೆ, ......ಲ ಬೇರು, ಅರಳಿಯತೊಪ್ಪೆ, ನುಗ್ಗೆಯ ಬೇರು, ಉತ್ತರಣೆಯ ಸೊಪ್ಪು, ಇವಂ ಅರೆದು ಪೂಸೆ ಕುಷ್ಠ ಮಾಣ್ಗುಂ.

ಸರ್ವಕುಷ್ಠಕ್ಕೆ :—ಅಳಲೆ, ಎಳ್ಳು, ಗೇರು, ಬೆಲ್ಲ, ಕಳ್ಳಿ, ವಿಳಂಗ, ಬಾವಂಚಿ......... ...ತ್ರ ಭಾವನೆಯಂ ಕೊಟ್ಟು ಜೇನುತುಪ್ಪದಿ ಮೆಲ್ಲಲು ಸರ್ವಕುಷ್ಠ ಮಾಣ್ಗುಂ.

ಕುಷ್ಠಕ್ಕೆ :—ವಿಳಂಗ, ಅರಗು, ಮೊಸರು, ತಗರ, ಜೀರಿಗೆ, ಬಜೆ, ಹಿಪ್ಪಲಿ, ತುಪ್ಪದಲ್ಲಿ ಅರೆದು ಪೂಸೆ ಕುಷ್ಠ ಮಾಣ್ಗುಂ. ಪಥ್ಯಾಹಾರ ಕದರೋಗರ, ಆವಿನ ಮಜ್ಜಿಗೆ.

ಕುಷ್ಠಕ್ಕೆ :—...ಳ ಬಿಳಿಯ ಸೂರಣ, ಇವನ್ನರೆದು ಚಿತ್ರಮೂಲದಲ್ಲಿ ತಿಕ್ಕಿ ತೊಡೆಯೆ ಕುಷ್ಠ ಮಾಣ್ಗುಂ.

ಕುಷ್ಠಕ್ಕೆ :—...ಜ, ...ಲು, ಬಿಳಿಯಮದ್ದಿನ ಬೇರು, ಮತ್ತಿಯ ತೊಪ್ಪೆ, ಗಂಧಕ, ಬೇವಿನ ಹರಳು, ಇವುಗಳಿಂದ ತೈಲವನಟ್ಟು ಇಳಿಸಿದ ಬಳಿಕ ಎಕ್ಕೆಹಾಲು, ...ಗೆಯನು ಬೆರಸಿ ತೊಡೆಯೆ ಕುಷ್ಠ ಮಾಣ್ಗುಂ.

ಕುಷ್ಠಾದಿಗಳಿಗೆ :—ನೆಲಬೇವು, ತ್ರಿಫಲೆ, ಲಾವಂಚ, ಭದ್ರಮುಷ್ಟಿ, ಯಸಗ, ಯಷ್ಟಿ ಮಧುಕ, ಸುಗಂಧಿಯ ಬೇರು, ಕಹಿಪಡವಲದ ಬೀಜ, ತ್ರಯಪ್ರಮಾಣ ಚಂದನ, ಅಮರದ ಬಳ್ಳಿ, ಹಿಪ್ಪಲಿ, ತಗಚೆಯ ಬೀಜ, ಬಜೆ, ವಿಶಾಲಮತಿಯ ತೊಪ್ಪೆ, ಪಾವಟೆ, ಅತಿಬಜೆ, ಅರಸಿನ, ಎಳೆಯಬಾಳೆ, ಆಷಾಡಿ, ಇಂತಿವುಗಳ ಕಲ್ಕಮಂ ಸಮವಾಗಿ ಕೂಡಿ ಆ ಕಲ್ಕದ ನಾಲ್ಕು ಮಡಿ ತುಪ್ಪ, ತುಪ್ಪದ ೩ ಮಡಿ ನೀರು, ತುಪ್ಪ ಹದ ಮಾಡಿ ನೆಲ್ಲಿಯರಸ ಸಹವಾಗಿ ಅಟ್ಟರೆ ಈ ಘೃತವು ಸರ್ವಕುಷ್ಠಕ್ಕೂ, ವಿಷಜ್ವರಕ್ಕೂ, ಉನ್ಮಾದ, ಸ್ಫೋಟಕ, ಪಾಂಡು, ಗಂಡಮಾಲೆ, ಇವುಗಳಿಗೂ ಕೊಡಲು ಇವೆಲ್ಲ ಮಾಣುವುವು.

ಕುಷ್ಠಕ್ಕೆ :—ಅಮರದಬಳ್ಳಿ, ತ್ರಿಫಲೆ, ಮರದರಿಸಿನ, ಇವುಗಳ ಕಷಾಯವ ಮಾಡಿ ಮೂತ್ರ, ಬಿಸೀನೀರು, ಗುಗ್ಗುಳವ ಹಾಕಿ ತಿಂಗಳು ದಿನವೂ ತೆಗೆದುಕೊಳ್ಳಲು ಕುಷ್ಠ ಮಾಣ್ಗುಂ. ಜೇನುಧಾರೆಯ ಸೊಪ್ಪು ಒಕ್ಕ್ಯೆಯಲಿ ತಂದು ಹಾಲು ಸಕ್ಕರೆಗಳಲ್ಲಿ ಕೊಳ್ಳಲು, ಹಿಂಡಿ ಒಳಯಿಕ್ಕೆ ಹೋಗುವುದು. ನೆಲಗುಮಡಿಯ ಬೇರಿನ ತಿಗಡು, ಹಾಲು ಸಕ್ಕರೆಗಳಲ್ಲಿ ಕೊಡಲು ಮಾಣ್ಗುಂ.

ಗೂದೆಗೆ :—ಸಾಸುವೆಯ ತೂಕ ೧, ಶುಂಠಿಯ ತೂಕ ೧, ಬೆಳ್ಳುಳ್ಳಿಯ ತೂಕ ೪, ಜೀರಿಗೆ ತೂಕ ೧, ಮೆಂತೆಯ ತೂಕ ೧, ಹಿಪ್ಪಲಿ ತೂಕ ೯, ಗಜ್ಜುಗದ ಕೊನರ ಮುದ್ದೆ ನಿಂಬೆಯ ಕಾಯಷ್ಟು, ಎರಡು ಸೇರು ನಿಂಬೆಯಹುಳಿ, ಎರಡು ಸೇರು ಎಣ್ಣೆ, ಇಷ್ಟನ್ನೂ ಕಲಸಿ ಅಟ್ಟು ತಾರೇಕಾಯಷ್ಟು ಮೆಲ್ಲಲು ಗೂದೆ ಮಾಣುವುದು.

ಕಾಸಕ್ಕೆ :—ಪದ್ಮಕಾವಿಚೂರ್ಣ, ದೇವದಾರಿಯ ಬೇರು, ಬಾಲಾ, ರಾಸ್ನೆ, ತ್ರಿಫಲೆ, ತ್ರಿಕಟುಕ, ವಿಳಂಗ, ಇವ ಚೂರ್ಣ ಸಕ್ಕರೆ ಸಹ ಕೊಳ್ಳಲು ಕಾಸ ಹರ.

ಕುಷ್ಠಕ್ಕೆ :—ಬಲಾ ಎಂದರೆ ಗಿಣಿಗಿಣಿಕೆ, ಬೇವಿನ ಪಂಚಾಂಗ, ಆನೆಬಜೆ, ಅಮರದವಳ್ಳಿ, ಸಕ್ಕರೆ, ಅಗುಳುಶುಂಠಿ, ಕೊಡಸಿಗನ ಕಾಯಿ, ಚಿತ್ರಮೂಲ, ಹೊನಗೊನ್ನೆ, ಗೇರು, ನೆಗ್ಗಿಲು, ನೆಲದಾಳು, ಎರಡು ಅರಸಿನ, ಲವಂಗ, ಮಂಡೂರ, ಕಕ್ಕೆ, ಬಾವಂಜಿ, ಇವನ್ನು ಕಲ್ಕಂ ಮಾಡಿ ಹೊನ್ನೇರಿಯ ಬೇವಿನ ಕಷಾಯದಿಂ ೭ ಭಾವನೆಯಂ ಕೊಟ್ಟು ಅದನ್ನು ಗರುಗದ ರಸ ದಿಂದ ೧ ತೂಕ ಮೊದಲಾಗಿ ೧ ಕರುಷತನಕ ಕೊಳ್ಳಲಾಗಿ ಸರ್ವಕುಷ್ಠ ಸರ್ವರೋಗ ಹರ. ಪಥ್ಯ ಕರಿಯದಹೊನ್ನೆ ಕಷಾಯದ ನೀರು.

ಕಾಸಕ್ಕೆ :—ಹಿಪ್ಪಲಿ, ಸಕ್ಕರೆ, ಆಡುಸೋಗೆ, ರಾಜಾನ್ನದ ತಿರಳು, ನೆಲ್ಲಿಯ ರಸ ಇವಂ ಸಮಾನವಾಗಿ ಕೂಡಿ ತುಪ್ಪ, ಜೇನುತುಪ್ಪ ಸಹವಾಗಿ ಲೇಹ್ಯ ಮಾಡಲು ಪಿತ್ತಕಾಸ ಹರ.

ವಾತಕ್ಕೆ :—ಮಣಿಶಿಲೆ, ಸೈಂಧವಲವಣ, ಜೇನುತುಪ್ಪ, ತ್ರಿಕಟುಕ, ವಿಳಂಗ, ಇಂಗು, ಇವಂ ಲೇಹ್ಯಂ ಮಾಡಲು ವಾತ ಹರ.

ಕ್ರಿಮಿಗೆ :—ತಗಚೆಯ ಬೇರು, ಮರದರಿಸಿನ, ಇಲಿವಾಲದ ಬೇರು, ಗೇರಿನ ಗೆಡ್ಡೆ, ತ್ರಿಫಲೆ, ಇವಂ ಉದಯದಲ್ಲಿ ಅರೆದು ಹಿಪ್ಪಲಿಯ, ವಿಳಂಗದ ಚೂರ್ಣವ ಹಾಕಿ ಕೊಡಿಸೆ ಕ್ರಿಮಿ ಹರ.

ವಿಷಕ್ಕೆ :—...ಮೂತ್ರದಿಂ......ಯಂ ಕೊಟ್ಟು ಸೈಂಧವಲವಣ, ತ್ರಿಕಟುಕ, ಬಜೆ, ಇಷ್ಟನ್ನೂ ನಸ್ಯಂ ಮಾಡೆ ಸರ್ವವಿಷ, ಚೇಳುವಿಷ ಸಹ ಮಾಣ್ಗುಂ.

ವಾಂತಿಗೆ :—ಯಷ್ಟಿಮಧುಕಕಷಾಯವನ್ನೂ, ಜೇನುತುಪ್ಪವನ್ನೂ ಕೂಡಿ ಕೊಡಲು ವಾಂತಿಯಹುದು. ಔಡಲಎಣ್ಣೆಯ ತಾಳಿಸಿ ಯ......ಷ್ಠದ ಕಷಾಯೋದಕ ಎರಡು ಕುಡಿಯೆ ಪಿತ್ತವಾಂತಿಯಹುದು.

ಮುಟ್ಟುಕಟ್ಟಿಗೆ :—ಹಿರಿಯಮದ್ದು, ಗಿಣಿಗಿಣಿಕೆ, ರಾಸ್ಮೆ, ಜವೆ, ದೇವದಾರು, ಸೈಂಧವ, ಬೆಲ್ಲ, ಅಕ್ಕಿಯಲ್ಲಿ ಕಡುಬನಟ್ಟು ಮೆಲ್ಲೆ ಮುಟ್ಟುಕಟ್ಟು ಮಾಣ್ಗುಂ. ತ್ರಿಕಟುಕ, ಭಾರಂಗಿ, ಎಳ್ಳು, ಇವಂ ಅಷ್ಟಾವಶೇಷ ಕಾಯಿಸಿ ಕಷಾಯಮಂ ತುಪ್ಪಬೆಲ್ಲದಿಂ ಮೆಲ್ಲೆ ಸ್ತ್ರೀಯರಿಗೆ ಕೆಟ್ಟ ಮುಟ್ಟು ಲೇಸಕ್ಕು.

ಗರ್ಭಕ್ಕೆ :—ಕರಿಯಾವಿನ ತುಪ್ಪದಲ್ಲಿ ಗಂಡಿನ ಎಡದಲ್ಲಿ ನಸ್ಯ ಮಾಡೆ ಹೆಣ್ಣು ನೀರ ಮಿಂದು ಉಪವಾಸಯಿರೆ ಗರ್ಭಮಕ್ಕು. ಇಪ್ಪೆಯ ತಿಗುಡಂ ತುಳಿದು ಒಂದು ಮಾನ ರಸಮಂ ಮೂರು ದಿನ ಕುಡಿದು ಆ ಹಿಪ್ಪೆಯ ನವಣಕ್ಕಿಯ ಹಿಟ್ಟು ಕುಟ್ಟಿ ತುಪ್ಪದಲ್ಲಿ ಮೆಲ್ಲೆ ಗರ್ಭವಕ್ಕುಂ.

**ಮಾವಿನಗೊಟ್ಟೆ, ಯಷ್ಟಿಮಧುಕ, ದ್ರಾಕ್ಷೆ, ಪದ್ಮಕ, ಶ್ರೀಖಂಡ, ಸುಗಂಧಿ, ಕರ್ನೈಲಿ, ನೈದಿಲಗೆಡ್ಡೆ, ಕಡಲೆಯ ಹಿಟ್ಟಿನೊಳಗೆ ಕೊಳ್ಳೆ ಗರ್ಭಸ್ತಂಭನ.**

**ವಿಷಯಾಧಿಕಕ್ಕೆ :—ಸಿಪ್ಪೆಗಳೆದ ಉದ್ದನ್ನು ತುಪ್ಪದಲ್ಲಿ ನೆನೆಇಕ್ಕಿ ರಾಜಾನದ ಅಕ್ಕಿಯ ಪಾಯಸದಲ್ಲಿ ಹಾಕಿ ಬೇಯಿಸಿ ತುಪ್ಪಸಕ್ಕರೆ ಬೆರಸಿ ಉಣ್ಣೆ ವಿಷಯಾಧಿಕವಹುದು,**

ಶತವೀರ್ಯವರ್ಧನಕ್ಕೆ :—ಹನುಮಂತನಾಶಯವಿತ್ತಲೂ, ಧವಳಶಂಖದವಿತ್ತಲೂ, ಔವ್ವರಣೆಯವಿತ್ತಲೂ, ದಿಟಕೋಕಿಲವಿತ್ತಲೂ, ಈ ನಾಲ್ಕನ್ನೂ ಸಮಚೂರ್ಣವಂ ಮಾಡಿ ಸಕ್ಕರೆ ಬೆರಸಿ ಕೊಳ್ಳೆ ಹಸಿಯ ಹಾಲೋಗರ ಸಕ್ಕರೆಯನುಣ್ಣೆ ಶತವೀರ್ಯವರ್ಧನಂ.

ಮಲಕಟ್ಟಿದುದಕ್ಕೆ :—ಸೌತೆಯ ಬೀಜ ತೂಕ ೪, ಕುಂಬಳಬೀಜ ತೂಕ ೪, ನೆಗ್ಗಿಲ ಬೇರಿನ ತಿಗುಡು ತೂಕ ೪, ಏಲಕ್ಕಿ ತೂಕ ೪, ಇವ ಆಕಳ ಹಸಿಯ ಹಾಲಲ್ಲಿ ಅರೆದು ಕುಡಿಯೆ ಕಟ್ಟಿದ ಮಲಮೂತ್ರವು ಬಿಡುವುದು.

ಕಣ್ಣುರೋಗಂಗಳಿಗೆ :—ಪಾದರಸ ೧ ಭಾಗ, ನೀಲಾಂಜನ ೧ ಭಾಗ, ಪಚ್ಚೆಕರ್ಪೂರ ೧ ಭಾಗ, ಸೈಂಧವ ೧ ಭಾಗ, ಈ ನಾಲ್ಕನ್ನೂ ಅಜಮೂತ್ರದಲ್ಲಿ ಅರೆದು ಗುಳಿಗೆಯಂ ಮಾಡಿ ನೊಲೆಹಾಲಲ್ಲಿ ಹಚ್ಚೆ ಕಣ್ಣುರೋಗಂಗಳೆಲ್ಲವೂ ಮಾಣುವುವು.

ಗರ್ಭ ಕಳಚಿ ಬೀಳಲಿಕ್ಕೆ :—ಹೇರೀಚಲಹೂವು ನೀರಲ್ಲಿ ತೇದು ಒಂದು ಬಟ್ಟಲು ಕೊಡೆ ಗರ್ಭ ಕಳಚಿ ಬೀಳ್ಗುಂ.

ಮಕ್ಕಳ ರೋಗಕ್ಕೆ :—ಗೌರಿಯ ಜರೆಯ ಹತ್ತು ಬೇರು ತಂದು ಕುಟ್ಟಿ ಅರಗಿನ ಎಣ್ಣೆ ಯನ್ನು ಒಲೆಯ ಮೇಲಿಟ್ಟು ಎಣ್ಣೆ ಕಾದ ಬಳಿಕ ಆ ಬೇರ ಹಾಕಿ ಆ ಎಣ್ಣೆ ಉಕ್ಕದಾಗಲೇ ಲೇಸು, ಉಕ್ಕಿದರೆ ಹೊಲ್ಲ, ಆ ಎಣ್ಣೆಯ ತೆಗೆದು ಗಂಗಾಳವೊಳಗೆ ಹೊಯ್ದು ಶಿಶುವಿನ ಬಾಯೊಳಗೆ ಒಂದು ಬೊಟ್ಟು ಎಣ್ಣೆಯ ಬಿಟ್ಟು ಮಗ ವಿನ ಮೈತುಂಬಾ ಪೂಸಿ ಕಾಯಿಹಿಪ್ಪೆಯ ಮೆಲ್ಲೆ ಮಕ್ಕಳ ರೋಗ ಮಾಣ್ಗುಂ.

ಪಕ್ಷಶೂಲೆಗೆ :—ವಿಳಂಗ, ತ್ರಿಫಲೆ, ತ್ರಿಕಟುಕ, ಚಿತ್ರಮೂಲ, ಚವ್ಯ, ಮಂಡೂರ, ಇಮ್ಮಡಿ ಬೆಲ್ಲ, ನಾಲ್ಕು ಮಡಿ ಮೂತ್ರವಿಟ್ಟು ಅಡುವ ಮುಂಚೆ ನಡುವೆ ಕಡೆದು ೧ ತೂಕವ ಮೆಲ್ಲಿಸೆ ಪಕ್ಷಶೂಲೆ ತೀರ್ಗುಂ.

ಶ್ವಾಸಕ್ಕೆ :—ಹಿಪ್ಪಲಿ, ದಾಕ್ಷೆ, ಕರ್ಕಟ, ಶುಂಠಿ, ಅಣಿಲೇಕಾಯಿ, ತುರುವೆ, ಇವಂ ತುಪ್ಪ, ಜೇನುತುಪ್ಪದಿ ಲೇಹ್ಯಮಾಡೆ ಶ್ವಾಸ ಮಾಣ್ಗುಂ. ಬೆಲ್ಲ, ಮೆಣಸು, ಅರಿಸಿನ, ಹಿಪ್ಪಲಿ, ದ್ರಾಕ್ಷೆಯ ಹಣ್ಣು, ರಾಸ್ಮೆ, ಇವಂ ಎಣ್ಣೆಯಲ್ಲಿ ಲೇಹ್ಯಂ ಮಾಡೆ ಶ್ವಾಸ ಹರ.

ಅಳಲೇಕಾಯಿ, ಕಟುಕ, ಹಿಪ್ಪಲಿ, ಆಡುಸೋಗೆ, ಭಾರಂಗಿ, ಇವ ಜೇನುತುಪ್ಪದಿ ಲೇಹ್ಯಂ ಮಾಡೆ ಶ್ವಾಸರೋಗ ಹರ.

ಚಾಳೀಸಪತ್ರೆ, ಮೆಣಸು, ಶುಂಠಿ, ಹಿಪ್ಪಲಿ ಇವು ೧, ೨, ೪, ತೂಕ, ಗರುಗದ ಚಿಕ್ಕೆ, ಏಲಕ್ಕಿ, ಇವಂ ಸಕ್ಕರೆ ಸಹ ಕೊಳ್ಳಲು, ಕ್ಷಯ ಕಾಸ ಮಾಣ್ಗುಂ.

ಬೆಲ್ಲದಹಣ್ಣಿನ ತಿರುಳು ೨ ಹಲ, ಹಾವುಮೆಕ್ಕೆಕಾಯ ತಿರುಳು ೧ ಹಲ, ನೆಲ್ಲಿಯಕಾಯ ರಸ ೧ ಬಳ್ಳ, ......ಕಾಯ ಪುಡಿ ೨ ಪಡಿ, ಹಿಪ್ಪಲಿ, ಏಲಕ್ಕಿ, ಕಳ್ಳಂಗಡಲೆ, ಲೋಧ್ರ,

ಮೆಣಸು, ೧೬ ಕೊಳಗ ನೀರೊಳಗೆ ಅಟ್ಟು ನಾಗುಳವಾದರೆ ಇಳುಹಿ, ಅದರೊಳಗೆ ಬೆಲ್ಲ, ತ್ರಿಕಟುಕ, ತಾಳೀಸ, ಏಲಕ್ಕಿ, ಲವಂಗ, ಲವಂಗಪತ್ರೆ, ಇವು ಎಲ್ಲವನ್ನೂ ೧ ಹಲ ಇವುಗಳಿಂದಾದ ಘೃತವಂ ದಿನ ೧ ಕರುಷ ಕೊಳ್ಳೆ ಕಾಸ, ಕುಷ್ಠ, ಮೂಲವ್ಯಾಧಿ, ಕ್ಷಯ, ಕಾಮಾಲೆ, ಪಾಂಡು, ಗುಲ್ಮ, ಶೋಫ, ಮಹೋದರ ಇವು ಎಲ್ಲಾ ಮಾಣುವುವು.

ಮೂಲವ್ಯಾಧಿಗೆ :—ದಂತಿ, ನೀರಹಿಪ್ಪಲಿ, ಮೂಲಂಗಿ, ಚಿತ್ರಮೂಲ, ಗೋಮೂತ್ರದಿ ಲೇಪಿಸೆ ಮೂಲವ್ಯಾಧಿ ತೀರ್ಗುಂ.

ಲಾಮಂಚ, ಉಳ್ಳಿ, ಮರದರಿಸಿನ, ಲವಂಗದ ಚಕ್ಕೆ, ಇವಂ ಅರೆದು ಕಷಾಯಮಂ ಕೊಡೆ ಮೂಲವ್ಯಾಧಿಯ ರಕ್ತ ನಿಲ್ಲುವುದು.

ಸ್ತ್ರೀಯರ ಕೆಟ್ಟ ಪುಷ್ಪಕ್ಕೆ :—ತ್ರಿಕಟುಕ, ಭಾರಂಗಿ, ಎಳ್ಳು, ಇವಂ ಕಷಾಯಮಂ ತುಪ್ಪಮಂ, ಬೆಲ್ಲಮಂ ಕಲಸಿ ಕುಡಿಯೆ, ಸ್ತ್ರೀಯರ ಕೆಟ್ಟ ಪುಷ್ಪವು ದಿಟವಹುದು.

ಅತಿಗುವಿಗೆ :—ವಿಷ್ಣುಕ್ರಾಂತಿಯಂ ಅಂಬಿಲದಲ್ಲಿ ಅರೆದು ಮೈಯ್ಯಂ ಪೂಸೆ ಅತಿಗುವಿ ಮಾಣ್ಗುಂ.

ಶುಕ್ಲಸ್ತಂಭನಕ್ಕೆ :—......ಆವಿನ ಹಸಿಹಾಲಲ್ಲಿ ಅರೆದು ಗುಳಿಗೆಯಂ ಮಾಡಿ ನೆಳಲಲ್ಲಿ ಒಣಗಿಸೆ ಆ ಗುಳಿಗೆ ಬಾಯೊಳಿರೆ ಶುಕ್ಲಸ್ತಂಭನ.

ದಿವಾಂಜನಕ್ಕೆ :—ಬಿಳಿಯಗುಳ್ಳದ ಬೇರು, ಕೆಚ್ಚನೆಹತ್ತಿಯ ಬೇರು, ಅಂಕೋಲೆಯ ಬೇರು, ಮುಚ್ಚಿಲದ ಬೇರು, ಹುಲಿಯ ಬೇರು, ಜಟಾಮಾಂಸಿ, ಪಾದರಸ, ಕರ್ಪೂರ, ಇವ ಸಮಾನಂಗೊಂಡು ನೀರಲ್ಲರೆದು ಉದಯವಾದ ಜಾವದಿ ಹಚ್ಚುವುದು.

ಸರ್ವಾಂಜನಕ್ಕೆ :—ಬಂದಣಿಕೆ, ನಾಗರಿ, ಬಿಳಿಯ ಕೊಟ್ಟ, ದ್ರಾಕ್ಷೆಯ ಹಣ್ಣು, ಬಿಳಿಯ ಮುತ್ತಗಗೊಟ್ಟೆ, ಇವಂ ಚೂರ್ಣವಂ ಮಾಡಿ ಏಕಕಪಾಲಕ್ಕೆ ಮಧುಕರ್ಪೂರ ಸಹಿತ ಹಚ್ಚುವುದು.

ಗರ್ಭಕ್ಕೆ :—ನಂದ್ಯಾವರ್ತವಂ ಸಕ್ಕರೆ ಸಹಿತ ೭ ದಿನ ಸೇವಿಸೆ ಗರ್ಭ ಮೊಳತಿರ್ಕ್ಕುಂ. ಮಾದೂಫಲದ ಬೀಜ, ಆಡಿನ ಹಾಲಿನಲ್ಲಿಯಾಗಲೀ, ಹಸುವಿನ ಹಾಲಿನಲ್ಲಿಯಾಗಲೀ ಅರೆದು ಕುಡಿಯೆ ಗರ್ಭಮಕ್ಕುಂ. ಇದಕ್ಕೆ ಸಂದೇಹವಿಲ್ಲ. ಮುಳುಕದ ಹಗಿನು, ಇಂಗಳಮಂ ನೀರಲ್ಲಿ ಅರೆದು ನುಂಗೆ ಮೂರು ದಿನಕ್ಕೆ ಬಂಜೆಗೆ ಗರ್ಭಮಕ್ಕುಂ. ಸಂದೇಹವಿಲ್ಲ. ಮ... ...ಎಣ್ಣೆಯೊಳು ಸಣ್ಣನಾಗಿ ಅರೆದು ಕುಡಿಯೆ ಬಂಜೆಗೆ ಗರ್ಭಮಕ್ಕು. ಏರಂಡ ಕಷಾಯದಲ್ಲಿ ತ್ರಿಕಟುಕ, ಭಾರಂಗಿ, ಬೆಲ್ಲವತ್ತ, ಕಣಗಿಲ(ಅರೆದು ಕುಡಿಯೆ)ರಕ್ತಶೂಲೆ ಕೆಟ್ಟು ಗರ್ಭಮಕ್ಕು.

ಶುಕ್ಲವೃದ್ಧಿಗೆ :—ನಸುಗುನ್ನಿಯ ಬೀಜಮಂ ಹಾಲಲ್ಲಿ ಕುಡಿಯಲು ಶುಕ್ಲವೃದ್ಧಿ.

ನೆಗ್ಗಿಲಬೇರು, ಆಷಾಢಿಯ ಬೇರು, ಎಳ್ಳು, ಉದ್ದಿನಬೇಳೆ, ಇವಂ ಸಮಾನಂಗೊಂಡು ಸಕ್ಕರೆ ಹಾಲು ಬೆರಸಿ ಕುಡಿಯೆ ಶುಕ್ಲವೃದ್ಧಿ.

ಪುಷ್ಪನಷ್ಟವಾವರೆ :—ಎಕ್ಕೆಯಹಾಲು ಹನಿಸಿ ಬೆಲ್ಲವ ಬೆರಸಿ ಮೆದ್ದು ಮಧುರಾಹಾರ ವನುಣ್ಣೆ ೭ ದಿನಕ್ಕೆ ಮುಟ್ಟುಗಾಂಬರು. ನೇರಿಲಹೂವಂ ಹಾಲಲ್ಲಿ ಅರೆದು ಕುಡಿಯೆ ಮುಟ್ಟುಗಾಂಬರು.

ಶೂಲೆಗೆ :—ಮಧುಕಮಂ ಚೂರ್ಣವಂ ಮಾಡಿ ೪ ತೂಕಮಂ ತುಪ್ಪದೊಳು ಕಲಸಿ ಮೆಲ್ಲೆ ಶೂಲೆ ಮಾಣ್ಗುಂ.

ಶೂಲೆಗೆ :—ಯಷ್ಟಿಮಧುಕ, ಭದ್ರಮುಸ್ತೆ, ಇವಂ ತುಪ್ಪದಲ್ಲಿ ಕಲಸಿ ಮೆಲ್ಲೆ ಶೂಲೆ ನಿಲ್ಕುಂ

ಶೂಲೆಗೆ :—ಏಲಕ್ಕಿ, ಖರ್ಜೂರ, ಎಮ್ಮೆಯ ಬೆಣ್ಣೆ, ಇವಂ ಸಕ್ಕರೆ ಬೆರಸಿ ಇಕ್ಕಿಸೆ ಶೂಲೆ ನಿಲ್ಕುಂ.

ಹಲ್ಲುಶೂಲೆಗೆ :—ಈಶ್ವರಿಯ ಬೇರು, ಅಥವಾ ಬ್ರಹ್ಮದಂಡೆಯ ಬೇರು, ಅಥವಾ ನಿಂಬೇಬೇರು, ಅರ್ಬುದವಾದೆಡೆ ಬೇರ ತೊಪ್ಪೆಯ ಸದ ಒಡಿದು ಅಗಿದು ಅಣಲ ದಲ್ಲಿ ಇಕ್ಕಿಕೊಂಡಿರುತ್ತ, ಉತ್ತರಣಿಯ ಬೇರ ಕಿತ್ತು ಆದಿತ್ಯಗೆ ತೋರಿಸಿ ಆ ಬೇರ ಬಾಯ ತೆರೆದು ಹಲ್ಲ ಮೇಲೆ ಮೂರುಬಾರಿ ಎಳೆದು ಬಿಸಾಡುವುದು. ಮುನ್ನಿನಬೇರಂ ಅಣಲೊ ಳೊತ್ತಿಕೊಂಡು ಇಹುದು. ಹಲ್ಲುಶೂಲೆ ನಿಲ್ಕುಂ.

ಹೇಂಗೆಗೆ :—ಕೊಡಸಿಗನನರೆದು ಕಿಬ್ಬೊಟ್ಟೆಯ ಪೂಸಲು ಬೇಗ ಹೇಲಕ್ಕು.

ಗುರುಗುಂಜಿಯ ಬೇಳೆಯನರೆದು ಎಣ್ಣೆಯಲ್ಲಿ ಕದಡಿ ಕುಡಿಯೆ ಸತ್ತಕೂಸು ಅಡ್ಡ ಬಿದ್ದುದೂ ಬಹುದು.

ವೀರ್ಯಕ್ಕೆ :—ಋತುಕಾಲದೊಳು ಅರಿದಳವುಂ, ಪಾಲುಂ, ನಸುಗುನ್ನಿಯ ಬೀಜದ ಬೇಳೆ ಭಾಗ ೧, ಹುಲುಗಿಲ ಬೇರು, ಉದ್ದಿನಬೇಳೆ, ಹಾಗೂ ಸಂ......ಟೆ ಮಧುಕ ಒಪ್ಪಲ ಕಾಳಿ ಆವಿನ ಹಾಲಲ್ಲಿ ಅರೆದು ಕುಡಿಯೆ ವೀರ್ಯವಕ್ಕುಂ.

ಶುಕ್ಲಪ್ರಮೇಹಕ್ಕೆ :—ಕಾಡನೊಲ್ಲೆಯ ಬೇರ ಆಡಿನ ಹಾಲಲ್ಲಿ ಅರೆದು ಕುಡಿಯೆ ಶುಕ್ಲ ಪ್ರಮೇಹ ಕೆಡುಗುಂ.

ಬಿಕ್ಕಳಿಗೆ :—ಹಾ(ಲೆ)ಯ ನೀರಲ್ಲಿ ಅರೆದು ಕುಡಿಯೆ ಮಕ್ಕಳ ಕೊನೆಯ ಬಿಕ್ಕಳು ತೀರ್ಗುಂ,

ಕೋವೆಗೆ :—ನೆಲ್ಲಿಕಾಯ ರಸಮಂ ಎಣ್ಣೆಯಂ ಬೆರಸಿ ಕುಡಿಯೆ ಕೋವೆ ತೀರ್ಗುಂ.

ಮಕ್ಕಳ ರೋಗಕ್ಕೆ :—ನೆಲ್ಲಿಯ ಸಮೂಲಮಂ ಎಣ್ಣೆಯಲ್ಲಿ ಅಟ್ಟು ಪೂಸೆ ಮಕ್ಕಳ ಕರಕು ಉರಿ ಮಾಣ್ಗುಂ. ಯಷ್ಟಿಮಧುಕ, ಅಗುಳುಶುಂಠಿ, ಧಾತಕೀಕುಸುಮ, ನೈದಿಲೆಯ ಗೆಡ್ಡೆ, ಮಂಜಿಷ್ಠೆ, ಲೋಧ್ರ, ಅಳಲೆ, ಬಿಳಿಯವೆಯ ರಸದಿಂದಟ್ಟ ಎಣ್ಣೆಯಂ ಕಿವಿಯ ಲೆರೆಯೆ ಕೀವು ಸುರಿವುದು ಮಾಣ್ಗುಂ.

ಹಲ್ಲುಹುಳುವಿಗೆ :—ಆದಿತ್ಯವಾರದ ದಿನ ಎಕ್ಕದ ಹಾಲಿಂ ಎಸಗನ ಬೇರನೂದಿ ಹಲ್ಲು ಸಂಧಿಯ ಗಿರಿಯೆ ಹಲ್ಲುಹುಳು ತೀರ್ಗುಂ.

ಕಾಮಾಲೆಗೆ :—ಅಗಸದ ಬೇರಂ ಮೊಸರೊಳು ತಿನ್ನೆ ಕಾಮಾಲೆ ತೀರ್ಗುಂ.

ಕೈಮುಸಕಿಗೆ :—ಜೋನಗಾರೆಯ ಹಣ್ಣು ತೂ......... ಮಾಡಿ ಬೆಲ್ಲದಿಂ ತಿನ್ನೆ ಕೈಮುಸಕು ಮಾಣ್ಗುಂ.

ಕರಕಿಗೆ :—ತಗಚಿಯ ಬೀಜ, ಬಾಪಂಜಿಯ ಬೀಜ, ಸೋರೆಟಿಯ ಬೀಜ, ಹುಲಿಗಿಲ ಬೀಜ, ಸಜ್ಜುರಸ, ಅರಿಸಿನ, ಮರದರಿಸಿನ, ಸಾಸಿವೆ, ಬಿಳಿಯ ಸಾಸಿವೆ, ಪರ್ಪಾಟಕ, ಜಟಾ ಮಾಂಸಿ, ತಾವರೆಯ ಗೆಡ್ಡೆ, ಶ್ರೀಗಂಧ, ಚೀನಿಕರ್ಪೂರ, ಇವೆಲ್ಲವಂ ತಮ್ಮೊಳು ಸರಿಯಾಗಿ ಕೊಂಡು ಚೂರ್ಣವಂ ಮಾಡಿ ಹಸಿಹಾಲಲ್ಲಿ ಅರೆದು ಮೈಯ್ಯಂ ತಿಗುರೆ, ತದ್ವರ್ತಿ ಕರಕು ಮಾಣ್ಗುಂ.

ಕಾಮಾಲೆಗೆ :—ಕೆಚ್ಚನಯುತ್ತರಣೆಯ ಕಿತ್ತು ತಲೆಕೆಳಗಾಗಿ ಬೇಲಿಯ ಮೇಲೆ ಇರಿಸುವುದು, ಅದನ್ನು ಎಣ್ಣೆಯಲ್ಲಿ ಕುಡಿಯೆ ಕಾಮಾಲೆ ತೀರ್ಗುಂ. ಅದ ನೀರೊಳಗೆ ಮೆಲ್ಲೆ ಪುಷ್ಟಿಯಕ್ಕುಂ. ಆ ಬೇರ ಕೀಳೆ ಎಲ್ಲಾರೋಗ ತೀರ್ಗುಂ. ಮೂಲಿಕೆಯ ಮೋನದಲ್ಲಿ ಕೀಳುವುದು, ತ್ರಿಫಲೆ, ಬೆಲ್ಲಗೊಟ್ಟಿ, ಆ ...ಯೆಲೆ, ಹುಲಿಯಬೀಜ, ಕರ್ಕಾಟಕಶೃಂಗಿ, ರಕ್ತಗಂಧಕ, ಬಿಲಾಕ, ಚಿಂಗಣಗಿಲೆ, ಶ್ವೇತಗುಂಜಿ, ಗುರುಗುಂಜಿಯನ್ನು ಕಟ್ಟೆ ಮೂಗಿನ ಜ.................

ಆರೋಗ್ಯಕ್ಕೆ :—ಅಗುಳುಶುಂಠಿ, ಕಾಗೆಯ ತೊಕ್ಕು, ನುಗ್ಗೆಯ ತೊಕ್ಕು, ಈಶ್ವರಿಯ ಬೇರು, ಲೊಕ್ಕಿಯ ಚಿಗುರು, ಅಷಧಿಯ ಬೇರು, ಬೆ...ಲಿ, ಮೆಣಸು, ಎಲ್ಲಾ ಅರೆದು ಹುಳಿ ಮಜ್ಜಿಗೆಯಲ್ಲಿ ಕದಡಿ ಘಳಿಗೆ ದ್ವಯ ಕಾಸಿ ಇಂಗು ಹಾಕಿ ಓಗರಿಸಿ ಅನ್ನಕ್ಕೆ ಕಲಸಿ ಊಟ ಮಾಡಲು ಮಲಕಟ್ಟಿದ್ದು ಪ್ರವೃತ್ತಿಯಾಗಿ ದೀಪನವಾಗಿ ಚೆನ್ನಾಗಿ ಆರೋಗ್ಯವಾಗುವುದು[1].

ಶೂನ್ಯಹತ್ತದೆ ಹಾವುಕಡಿದರೆ ಮಂತ್ರಿಸುವ ಮಂತ್ರಂ :—ಏನ ಕಂಡೆ, ಬೇಲು ಕಂಡೆ, ಬವಿನ ತಾಳೊಳಗೆ ಏನ ಕಂಡೆ, ಹತ್ತಾಕೋಗಡಿರು ಯಕ್ಕನಾಗ, ಎಕ್ಕನಾಗ, ಕಕ್ಕನಾಗ, ಕಾಳಿಂಗನಾಗ, ಅ, ಕಿ, ಅ...ತಲ...ಕಟಡೆ, ಹಳಿಲೆಕನಾಗವಿರೆ ಕಂಠಗುವಿಗಿಜಿಂತೆ ಕುಣು ಕಲಿದೆ, ಮೂವಿನಚಿಟ್ಟಟ......ಶಕ್ತಿಕಟ್ಟಿದೆ, ಕಚಬದ ಬಾಯಕಟ್ಟಿದೆ, ಮುದುಗೆ ಮುಕುಲಿ ಕಟ್ಟಿದೆ, ಹಿಂದಿಗೆ ಬಾಲಕಟ್ಟಿದೆ, ಕಟನೊನವಿತ್ತ ಹೊಟ್ಟೆ ಕಟ್ಟಿದೆ, ಇಷ್ಟು ಮೀರಿಹೋದರೆ ಹರಿಯಾಣೆ, ಹರನಾಣೆ, ಒಜಬಾಲು, ಗುರುಬಾಲ, ಉರಿಗೆಟಕಡೆ ಹೊಲದಲ್ಲಿ ಏನು ಕಂಡೆ, ಅತ್ತ ಕಡೆ ಯಕ್ಕಾಕಾಳೊಳಗೆ ಏನು ಕಂಡೆ, ಹುತ್ತ ಕಂಡೆ, ಹುತ್ತದ......ಗ......ಎಳನಾಗ, ಕಕ್ಕ ನಾಗ, ಕಾಳಿಂಗನಾಗ, ಅಕ್ಕಿಯತ್ತಾ ಎಲ್ಲಿ ಕಟ್ಟಿದೆ, ಅರಳೆಲೆಯತ್ತಾ ನಾಲಿಗೆ ಕಟ್ಟಿದೆ,......

---

[1] ಇದರ ನಂತರ ತೆಲುಗುಭಾಷೆಯಲ್ಲಿ "ಅಡವಿಸಂದಿಪಿಟ್ಟಕಲು ಪಾಕ" ಎಂಬಿತ್ಯಾದಿ ತೆಲುಗುಭಾಷೆಯಲ್ಲಿ ಇದೆ.

ಕಟ್ಟಿದೆ, ಕಚ್ಚಬಂದ ಬಾಯಕಟ್ಟಿದೆ, ಮುದುರೆಮುಸುಳಿ ಕಟ್ಟಿದೆ, ಹಾವಿಗೆ ಬಾಲ ಕಟ್ಟಿದೆ, ಕಟ್ಟಿ ನೊನಂತಾ ಹೊಟ್ಟಿ ಕಟ್ಟಿದೆ, ಸಾ......ಏಳುಗಳ್ಳಿ ಶಿವನಪ್ಪ ಒಡೆಯರ ಪಾದದಾಣೆ, ಕಡ್ಡಾಯ ಹುತ್ತದ ಮೇಲೆ ಇರುವ ಎಳನಾಗ ಎಡಕಡಿತವಾದರೆ......ಬಲದಕಡೆ ಶಿಲಿಸಿದರೆ ಬಲದ ದವಡೆ ಗಟ್ಟಿದೆ, ಮುಸುಗೆ ಮುಸುಳಿ ಕಟ್ಟಿದೆ, ಹಾವಿಗೆ ಬಾಲ ಕಟ್ಟಿದೆ, ಕಟ್ಟಿನೊಗತಾಟಿ ಕಟ್ಟಿದೆ, ಇಪ್ಪು ..............ಗಳೆ ಶಿವನಪ್ಪ ಒಡೆಯನಾ ಈ ಮುದ್ದಮ್ಮದ ಮೇಲೆ ಹಾವು ಕಡಿದ ಪಾಪ ದಲ್ಲಿ ಹೋಗು ಕಂಡಾ ಪಿಟಿಪ್ಯಮೂವ...ರ ಹಾಲ ಯೆತ್ತು ಪಾಡಿಚೆ......ಗಸಿ ಬೇಡಿ[1].

ಪ್ರಮೇಹಕ್ಕೆ :—ಬಿಳೀ ಅಯಸ್ಕಾಂತ, ಇಲ್ಲಣ, ಇವಂ ಸಮಾನಂಗೊಂಡು ಪುಡಿ ಮಾಡಿ ತ್ರಿಫಲೆಯ ಕಷಾಯದಲ್ಲಿ ಅರೆದು ಎಣ್ಣೆಯಲ್ಲಿ ಅಟ್ಟು ಹಸುವಿನ ಅಳೆಯಲ್ಲಿ ಔಷಧಿಯ ಬೆರಸಿ ಸೇವಿಸೆ ಎಲ್ಲಾ ಪ್ರಮೇಹ, ಬಹುಮೂತ್ರ ಕೆಡುಗುಂ[2].

ಕಾಮಾಲೆಗೆ :—ಅಂಗುರದ ಬೇರಂ ಮೊಸರೊಳು ತಿನ್ನೆ ಕಾಮಾಲೆ ತೀರ್ಗುಂ.।

ನಿರ್ವಿಷವಾಗಲಿಕ್ಕೆ :—ಎಲೆಹೊನ್ನೆಯ ಬೇರಂ ಅಂಬಿಲದಲ್ಲಿ ಅರೆದು ಮಂತ್ರಿಸಿ ಕುಡಿಯೆ ನಿರ್ವಿಷ.

ವಿಳಂಗ ಎರಡಂ ನೀರಲ್ಲಿ ತೇದು ಮೂಗಿನ ನಸ್ಯಂ ಗೈಯ್ಯೆ ನಿರ್ವಿಷ.

ಕಹಿಸೋರೆಯ ಬೇರಂ ಆ ಕಾಯೊಳಗಿನ ನೀರಂ ಆ ಬೀಜಮಂ ಅಂಬಿಲದಲ್ಲರೆದು ಕುಡಿಸಲು ನಸ್ಯ ಮಾಡಿಸಲು ನಿರ್ವಿಷ.

ಬಜೆ, ಸಮುದ್ರಫಲ, ತ್ರಿಕಟುಕ, ಬ್ರಾಹ್ಮಿಯ.ರಸ, ಕೋಷ್ಠ, ಸೈಂಧವ, ಸಾಸಿವೆ, ಇಪ್ಪೆಯ ಹೂವು, ಜೇರು, ಕಹಿಹೀರೇಕಾಯಿ, ನಾರು, ಇವೆಲ್ಲವನೊಂದಾಗಿ ಅರೆದು ಅಜ ಮೂತ್ರದಲ್ಲಿ ನಸ್ಯಂಗೈಯ್ಯೆ ಗ್ರಹಮುಂತಾಗಿ ಪಿಶಾಚ, ಶಾಕಿನಿ ಮುಖ್ಯವಾದ ಎಲ್ಲಾ ವಿಷ ಕೆಡುಗು. ಬೆಲ್ಲಬೇರಂ ನೀರಲ್ಲರೆದು ನಸ್ಯಂಗೈಯ್ಯೆ ನಿರ್ವಿಷಂ. ಉಷ್ಣಮಂ ಮಾಡಿ ತುಪ್ಪದಲ್ಲಿ ಕುಡಿಯೆ ನಿರ್ವಿಷ. ಹಾವು ಕಚ್ಚಿದ ಠಾವನ್ನು ಮನುಷ್ಯರ ಹಲ್ಲ ಕೀಣಿಯಂ ಪೂಸೆ ನಿರ್ವಿಷ. ಬಿಳಿರಕ್ಕಸಿಯ ಗೆಡ್ಡೆಯ ನಾಳದಲ್ಲರೆದು ಕುಡಿಯೆ ನಿರ್ವಿಷ. ಆ ಗೆಡ್ಡೆಯ

---

[1] ಇದರ ನಂತರ “ ಶೂನ್ಯಂ ಎಕ್ಕಕು ಪಾಮು ಕಸ್ತೇ ಮಂತ್ರಿಂಚೆ ಮಂತ್ರ ” ಎಂದಿದೆ.

[2] ಇದರ ನಂತರ ತೆಲುಗು ಭಾಷೆಯಲ್ಲಿ “ ವಿಮಲ ಮೂತ್ರ ವಿದುಳನು ಚಿತ್ತ ಚಿಗುಳು ನೂರಿ ನಿಮ್ಮಕಾಯಂ ತಪ್ಪಡಂ ಮಾನೇಡು ಮಜ್ಜಿಗಲೋನು ಕಲಪಿ ತಾಗನಿಚೆ......ಮೂತ್ರಂ ವಿ......ಜಿಗವಂಟಕಂ. ನೆಲವುಶಿತಿಜೆ ಸಮೂಲಂ ಪಟ್ಟಿ ಪಡಿಕೇಡು ತೆಚ್ಚಿ ಮೂಡು ಮಾನಿಕಲ ನೀಳ್ಲಲೋ ವೇಸಿ ಅಂದುಲೋ ಕಟ್ಟಿಚೆ......ವಿಪೂಯ...... ಒಕ ಹಿಪ್ಪಲಿ ೫ ಶುಂಠಿ, ೨ ಕೊಮ್ಮುಲು, ಇವಿ ಬಟ್ಟತೊ ಕಟ್ಟಿತೆ ಆಕು ಆ ನೀಳ್ಲಲೋ ವೇಶಿ ಕಾಚಿ ಕಾಸೆದಿ ಸೊ...ಡು ಅ...ತೆವಡ...ನೆ ಅ...ಅನ್ನನುಲಿ ಆ ಕಷಾಯಂಲೋ ಕಲಿಪಿ ತಾಗನಿ ಚ್ಚೆದಿ, ೭ ದಿನ ಇಚ್ಚೆದಿ ಆವಾಪುದು ” ಎಂದಿದೆ.

ನಾಳದಲ್ಲರೆದು ನಸ್ಯಂಗೈಯ್ಯೆ ಎಲ್ಲಾ ಸರ್ಪವಿಷ ಹರ. ತ್ರಿಕಟುಕ, ಉಪ್ಪು ಸಮಾನಂಗೊಂಡು ಅಂಬಿಲದಲ್ಲರೆದು ನಸ್ಯಂಗೈಯ್ಯೆ ಮೂರು ದಿನ ಸತ್ತ್ರಂಥವನೆತ್ತಬಹುದು. ಎಳ್ಳೆಣ್ಣೆ, ಇಲ್ಲಣವಂ ನಸ್ಯಂಗೈಯ್ಯೆ ನಿರ್ವಿಷ. ಇಂಗುವಂ ನರಮೂತ್ರದಲ್ಲರೆದು ನಸ್ಯಂಗೈಯ್ಯೆ ಕೊಳೆಹಾವಿನ ವಿಷ ಹರ. ಹಾವುಮೆಕ್ಕೆಯ ಬೇರಂ, ಕಾಗೆತೊಂಡೆಯ ಬೇರಂ, ಅಂಬಿಲದಲ್ಲರೆದು ಪೂಸೆ ಮಂಡಲಿವಿಷ ಹರ. ಅಂಗುಂದ ಬೇರು, ಅಂಕೋಲೆ, ಮಹಾಸರ್ಪವಿಷ ಹರ. ಜೇಪಾಳದ ಬೀಜವಂ ನರಮೂತ್ರದಲ್ಲರೆದು ಮೂಗಿನಲ್ಲಿ ನಸ್ಯಂಗೈಯ್ಯೆ ಕಣ್ಣಿಗೆ ಹಚ್ಚೆ ನಿರ್ವಿಷಂ. ಕಣ್ಣಲ್ಲಿ ಬಳಿಕ ಬೆಣ್ಣೆಯು ಹಚ್ಚಲು ಮಾಸುವುದು. ಅಂಗುರ, ವಿಷಮುಂಗಲಿಯ ಗೆಡ್ಡೆಯನ್ನು ಅರೆದು ಕುಡಿಸಲು ಚೇಳುವಿಷ ಹರ.

ಕಣ್ಣಕಪ್ಪಂ ಮಾಡುವ ಕ್ರಮ: —ಎಲೆಕಪ್ಪಲಿ, ಕಡಲನಾಲಿಗೆ, ಗೇರಹರಳ ಸುಟ್ಟ ಕರಿ, ಅಳಲೇಕಾಯಿ ಸುಟ್ಟ ಕರಿ, ಕಹಿಹೀರೆಯ ಸುಟ್ಟಕರಿ ಈ ೫ ಪ್ರತ್ಯೇಕ ಸಮಭಾಗ, ಈ ೫ ನ್ನೂ ಗುದ್ದಲಿಯ ಮೇಲೆ ಹಾಕಿಕೊಂಡು ಕೊಡಲಿಯ ಅಂಡಿನಿಂ ಚೂರ್ಣವಂ ಮಾಡಿ ಆ ಸಣ್ಣನಾದ ಚೂರ್ಣಕ್ಕೆ ತಕ್ಕಷ್ಟು ಆಗ ಕಡೆದ ಹಸುವಿನ ಬೆಣ್ಣೆಯನ್ನು ಹಾಕಿಕೊಂಡು ತಾಮ್ರದ ಚೆಂಬಿನಲ್ಲಿ ಚೆನ್ನಾಗಿ ಮರ್ದಿಸಿ ಆ ಮರ್ದಿಸಿದ ಕಪ್ಪನ್ನು ಔಷಧ ಮಾಡುವುದು. ಹೇರಳ ಅಲ್ಪವನರೆದು ಅದರ ಕೂಡೆ ಒಂದಿಷ್ಟು ಪಚ್ಚೆಕರ್ಪೂರವನು ಹಾಕಿಕೊಂಡು ಮರ್ದಿಸುವುದು, ಆ ಮರ್ದಿಸಿದ ಕಪ್ಪನ್ನು ಒಳ್ಳೆಯ ಕರಡಿಗೆಯಲ್ಲಿ ಇರಿಸಿಕೊಂಡು ಕಣ್ಣಿಗೆ ಹಚ್ಚೆ ಎಲ್ಲಾ ತೆರದ ಕಣ್ಣುರೋಗ ಹೋಗಿ ದಿವ್ಯದೃಷ್ಟಿಯಾಗುವುದು. ಮತ್ತೊಂದು ಕ್ರಮ— ಕಪ್ಪುರ, ಶಿಲಾಧಾತು, ಪಟಿಕೆ, ಕಡಲನಾಲಿಗೆ, ನೀಲಾಂಜನ, ಎಲೆಗಪ್ಪಲಿ, ಪಚ್ಚೆಕರ್ಪೂರ, ಅಳಲೆಯ ಕಾಯಿ, ಸಮುದ್ರಪಾಳದ ಬೀಜ, ಗೇರಹರಳು, ಇವಂ ಸಮಾನಭಾಗದಲ್ಲಿ ಕೂಡಿ ಚೂರ್ಣವಂ ಮಾಡಿ, ಹಸುವಿನ ಬೆಣ್ಣೆಯಲ್ಲಿ ಕಲಸಿ, ಗಂಗಾಳದಲ್ಲಿ ಮಗುಡಿ ಅರೆದ ಮೇಲೆ ಈ ಔಷಧವನ್ನು ಇಳಿಸಿಕೊಂಡು ಮತ್ತೊಂದು ಗಂಗಾಳದಲ್ಲಿ ಸಣ್ಣನಾಗಿ ಮರ್ದಿಸಿ ಆ ಗಂಗಾಳದಲ್ಲಿ ಹತ್ತಿದ ಔಷಧಿಗೆ, ಬೇವಿನಸೊಪ್ಪಿನ ಹೊಗೆ, ಬೊಬ್ಬುಳಿಯಸೊಪ್ಪಿನ ಹೊಗೆ ಕೊಟ್ಟು ಒಳ್ಳೆಯ ಕರಡಿಗೆಯ ತುಂಬಿ ಕಣ್ಣಿಗೆ ಹಚ್ಚೆ ನಾನಾ ತೆರದ ರೋಗಂಗಳೆಲ್ಲಾ ಮಾಣುವುವು. ಇದು ಕ್ರೂರವಾದರೆ ಒಂದಿಷ್ಟು ಬೊಬ್ಬುಳಿಯ ರಸವ ಕೂಡಿ ಹಚ್ಚುವುದು. ಸೈಂಧವ ಲವಣವನ್ನು, ತುಪ್ಪವನ್ನು ಮರ್ದಿಸಿ ಆಮೇಲೆ ಅಮರದವಳ್ಳಿಯ ರಸದಲ್ಲೂ ಮರ್ದಿಸಿ ಕಣ್ಣಿಗೆ ಹಚ್ಚೆ ಸರ್ವ ಕಣ್ಣುರೋಗಂಗಳೆಲ್ಲಾ ಮಾಣುವುವು.

**ಕೂಸುಬೀಳುವುದಕ್ಕೆ**:—ತೊಲೆ ಮಡ್ಡು, ಇಂಗುಳದ ಸೊಪ್ಪು, ಸುರುಸುರುಕೆಯ ಸೊಪ್ಪು, ಇವನ್ನು ತುಳಿದು ಬೆಲ್ಲವನ್ನು ಹಾಕಿ ಆಡಿನ ಹಾಲಲ್ಲಿ ಕಲಸಿ ಗೊಟ್ಟದಲ್ಲಿ ಉರುಳ್ಚೆ(?) ಹಾಲು, ತೊರೆಮಡ್ಡು, ಇಂಗು, ಸಾಸುವೆ, ಸೈಂಧವ, ಅಂಬಿಲದಲ್ಲಿ ಆಮ್ರವ ಕಾಸಿ ಕೊಡೆ ಬಸುರಲ್ಲಿ ಸತ್ತಕೂಸು ಬೀಳುವುದು.

**ಮಡುವಾಗಲದ ಕಲ್ಪ**:—ಮಡುವಾಗಲದ ಗೆಡ್ಡೆಯಂ ಸಿದ್ಧಿದಿನದಲ್ಲಿ ತಂದು ಬೆಲ್ಲಮಂ ಸಮಾನಂಗೊಂಡು ಹಾಲಲ್ಲಿ ಕುಡಿಯೆ, ಹಸಿವಾದರೆ ಹಾಲೋಗರಮನುಂಬುದು,

ತೃಷೆಯಾದರೆ ಬಿಡುವುದು, ಈ ಪರಿಯಲ್ಲಿ ೪ ತಿಂಗಳು ಸೇವಿಸೆ ಸರ್ವವ್ಯಾಧಿ ಹರ. ಗರೆದರೆ ಕೆಡುವುದು. ವೀರ್ಯವರ್ಧನ. ಬೆಕ್ಕು, ಇಲಿ, ನಾಯಿ, ನರಿ, ಇವೆಲ್ಲಕ್ಕೂ ಲೇಪದಿಂದ ಪರಿಹಾರ. ಮಡುವಾಗಲದ ಗೆಡ್ಡೆ, ಶುಂಠಿ, ಕೋಷ್ಠ, ಯಷ್ಟಿಮಧುಕ, ಎರಡರಿಸಿನ ಇವಂ ಸಮಾನಂಗೊಂಡು ಕುಡಿಯೆ ಗಂಡಮಾಲೆ ಕೆಡುಗು. ಆ ಗೆಡ್ಡೆಯಂ ಹಾಲಲ್ಲರೆದು ಕುಡಿಯೆ ಪಾಂಡುರೋಗ ಹರ. ಪ್ರಮೇಹ, ಗುಲ್ಮ, ಕೆಡುಗು. ಆ ಗೆಡ್ಡೆಯಂ ತ್ರಿಕಟುಕಮಂ ಬೆರಸಿ ನೀರಲ್ಲಿ ಕುಡಿಯೆ ಮೂತ್ರಕೃಛ್ರ ಹರ. ಆ ಗೆಡ್ಡೆಯ ಆವಿನತುಪ್ಪ, ಜೇನುತುಪ್ಪದಲ್ಲೂ ನಕ್ಕೆ ಶ್ವಾಸ ಕಾಸ ಎಲ್ಲಾ ತೀರ್ಗುಂ. ಆ ಗೆಡ್ಡೆಯಂ ನೀರಲ್ಲರೆದು ಕುಡಿಯೆ ಯಕ್ಷ್ಮ, ಕ್ಷಯ ರೋಗ ತೀರ್ಗುಂ. ಆ ಗೆಡ್ಡೆಯ ಪಲ ೧, ಹಾಲು ಪಲ ೧, ಇವ ಕೂಡಿಕೊಂಡು ಕೊಳ್ಳೆ ಮೂತ್ರಸಿಕ್ಕು ಮಾಣ್ಗುಂ. ಆ ಗೆಡ್ಡೆಯಂ ಜೇನುತುಪ್ಪದಲ್ಲೂ ಮೆಲ್ಲೆ ಮೂತ್ರಸಿಕ್ಕು ಮಾಣ್ಗುಂ. ಅದಂ ಗೊಮೂತ್ರದಲ್ಲೂ, ಅಂಬಿಲದಲ್ಲೂ ನಸ್ಯಂಗೈಯ್ಯೆ ಹಾವಿನ ವಿಷ ಹರ. ಆ ಗೆಡ್ಡೆಯ ಅಶ್ವಗಂಧಿ, ಅಮರದವಳ್ಳಿ, ತುಪ್ಪಮಂ ಬೆರಸಿ ತಿನ್ನಲು ನಾಲಿಗೆ ಬಿದ್ದ ಸನ್ನಿಪಾತ ಕೆಡುಗು. ಆ ಗೆಡ್ಡೆಯಂ ಗಿರಿಕರ್ಣಿಕೆಯ ಬೇರಂ ಸಮಾನಂಗೊಂಡು ನೀರಲ್ಲಿ ನಸ್ಯಂ ಮಾಡೆ ಗಂಡಮಾಲೆ ತೀರ್ಗುಂ. ಆ ಗೆಡ್ಡೆಯಂ ಶುಂಠಿಯುಂ ಅಳೆಯಲ್ಲಿ ಕುಡಿಯೆ ಅತಿಸಾರ ತೀರ್ಗುಂ. ಆ ಗೆಡ್ಡೆಯ ದಾಳಿಂಬದಲ್ಲೂ ಅಲ್ಲ ಹಾಲಲ್ಲೂ ಕುಡಿಯೆ ರಕ್ತಾತಿಸಾರ ತೀರ್ಗುಂ. ಆ ಗೆಡ್ಡೆಯಂ ಲಾಜವಂ ಜೇನುತುಪ್ಪದಲ್ಲಿ ಕೊಳ್ಳಲು ಬಿಕ್ಕಳಿಕೆ ತೀರ್ಗುಂ. ಅದಂ ಅಕ್ಕಿಗಚ್ಚಿನಲ್ಲಿ ಕೊಳ್ಳೆ ಶೋಣಿತ ತೀರ್ಗುಂ. ಅದಂ ತ್ರಿಫಲೆಯಂ ಬೆರಸಿ ನೀರಲ್ಲಿ ಕುಡಿಯೆ ಮೂತ್ರಸಿಕ್ಕು ತೀರ್ಗುಂ.

ಕಾಮಾಲೆಗೆ :—ತಪಸದ ಚಿಗುರಂ ತಂದು ಏಳು ಹಸಿಯ ಮೆಣಸಿನ ಸಕ್ಕೆ ಅದಂ ಹಳೇನೀರಂ ಬಿಟ್ಟುಕೊಂಡು ಅರೆದು ಹಳೇನೀರೊಳಗೆ ಔಷಧಿಯ ತೆಗೆದುಕೊಂಬುದು. ಪಥ್ಯ ೪ ಗಳಿಗೆಯ ಮೇಲೆ ಬರಿಯ ಹಾಲೋಗರ, ಕಾಮಾಲೆ ತೀರ್ಗುಂ. ಕಿರಿನೆಲ್ಲಿಯ ಸೊಪ್ಪ ತಂದು ಕೋಣನಕಾಯ ಕಟ್ಟು ಮೊಸರಲ್ಲಿ ಅರೆದು ಆ ಕಟ್ಟುಮೊಸರಲ್ಲಿ ಗುಳಿಗೆಯಂ ಕೊಡಲು ಕಾಮಾಲೆ ತೀರ್ಗುಂ. ಪಥ್ಯ ಹಾಲೋಗರ.

ವಾಂತಿಗೆ :—ಕಕ್ಕೆಯ ಕುಡಿಯಂ ತಂದು ಅರೆದು ಹುಣಸೆಯ ಹುಳಿಯಲ್ಲಿ ಗುಳಿಗೆಯಂ ಕೊಡಲಾಗಿ ವಾಂತಿಯಕ್ಕುಂ. ನೀರ ಮುಕ್ಕಳಿಸಿದರೆ ನಿಲ್ಲುವುದು. ಕಕ್ಕೆಯ ಕುಡಿಯನು ತಂದು ಹರುವೆಯ ಸೊಪ್ಪಿನ ಕೂಡೆ ಹಾಕಿ ತುಳಿದ ಮೇಲೆ ಅನ್ನಕ್ಕೆ ಕಲಸಿಕೊಂಡು ಉಣಲಾಗಿ ನಾಲ್ಕು ಆರು ಬಾರಿ ಸುಖವಿರೆ ಕಕ್ಕೆಯಲ್ಲಿ ಕಾಲ ತೊಳೆದು ನಿಲ್ಲುವುದು.

ಕಾಮಾಲೆಗೆ :—ಅಮರದವಳ್ಳಿಯ ತಂದು ಹಸುಪಿನ ಹಾಲಲ್ಲಿ ಮುಳುಗ ಹೊಯ್ದು ಹಾಲನ್ನು ಮುನ್ನ ಕಾಯಿಸಿ ಬೆಂದದಂ ನೆಳಲೊಳಗೆ ಒಣಗಿಸಿ ಇದ್ದುದಂ ಸೇವಿಸೆ ಆ ಚೂರ್ಣಮಂ ತುಪ್ಪಸಕ್ಕರೆಯಲ್ಲಿ (ಕೊಳ್ಳೆ ಕಾಮಾಲೆ ಹರ.)

ಹಾವಿನ ಮಂತ್ರ :—ಓಂ ನಮೋ ಭಗವತೇ ಪಕ್ಷಿರಾಜಾಯ ವಜ್ರನಖ ವಜ್ರನಖ ಜಯವಿಜಯಾದ್ಯಷ್ಟಮಹಾನಾಗಾನ್ ಖಂಡಯ ಬಾಧಯ (ಬಾಧಯ) ಸ್ತೋಭಯ ಸ್ತೋಭಯ ಸ್ವಾಹಾ.

ಅತಿಸಾರಕ್ಕೆ :—ಜಾಯಿಪತ್ರಿ, ಕಟುಕ, ಶುದ್ಧರಸ, ಯಲವದಹಗಿನು, ............ ಅಪಿನಿ ೩ ತೂಕ ಬನ್ನಿಯ ರಸದಲ್ಲಿ ಅರೆದು ಕಡಲೆಯ ಗಾತ್ರದ ಗುಳಿಗೆ (ಮಾಡಿ ಕೊಳ್ಳಿ) ಸರ್ವಾತಿಸಾರವು ಮಾಣ್ಬುಗಂ. ಪಥ್ಯ ಮೊಸರು ಅನ್ನ.

ಕಾಸಕ್ಕೆ :—...... ೪ ತೂಕ, ತವಕ್ಷೀರ, ಏಲಕ್ಕಿ, ಲವಂಗ, ಇವು ಎಲ್ಲ ಪ್ರತ್ಯೇಕ ಸಕ್ಕರೆ ಬೆರಸಿಕೊಂಡು ಬಿಸಿನೀರಲ್ಲಿ ಕೊಳ್ಳಲು ಶ್ವಾಸ, ಕಾಸ ಮಾಣ್ಬುಗಂ. ಪಥ್ಯ ಹಾಲುಅನ್ನ.

ಜ್ವರಕ್ಕೆ :—ಪಾದರಸ, ಗಂಧಕ, ವತ್ಸನಾಭಿ, ಇವು ಎಲ್ಲಾ ನಿಂಬೇಹುಳಿಯಲ್ಲರೆದು ಒಂದು ಜಾವ ತೆಗೆದುಕೊಳ್ಳುವುದು. ಛಳಿಜ್ವರ ವಾತಪಿತ್ತ(ಜ್ವರಗಳು ಮಾಣುವುವು).

ಶೂಲೆಗೆ :—ವತ್ಸನಾಭಿ, ಗಂಧಕ, ತ್ರಿಫಲೆ, ತ್ರಿಕಟುಕ, ತಾಮ್ರಭಸ್ಮ, ಜೇಪಾಳದ ಬೀಜ, ಈ ಎಲ್ಲಾ ಸಮಾನಂಗೊಂಡು ಗುಂಗದ ರಸದಲ್ಲಿ ಅರೆದು ಜಾವ ಅಟ್ಟು ಗುಂಜಾ ಪ್ರಮಾಣ ಗುಳಿಗೆಯಂ ಮಾಡಿ ಶುಂಠಿಯ ರಸದಲ್ಲಿ ಕೊಡಲು ಹೊಟ್ಟೆಯ ಶೂಲೆ ಮಾಣ್ಬುಗಂ. ಪಥ್ಯ ಹಾಲು ಅನ್ನ.

ರಸ, ವತ್ಸನಾಭಿ, ನಿಂಬೇಹುಳಿಯಲ್ಲಿ ಅರೆದು ಸೈಂಧವಲವಣವ ಅರೆದು ಗುಳಿಗೆಯಂ ಮಾಡಿ ಆ ರಸವ ತುಂಬಿ ಸೈಂಧವಲವಣದ ಕಣಿಕೆಯ ಮುಚ್ಚಿ ಎರಡು ಪುಟವಿಕ್ಕಲು, ಆರಿಸಿ ತೆಗೆದರೆ ಅದು ಸಿದ್ಧರಸವಹುದು. ಆ ಸಿಂದೂರವ ನಿಂಬೆಯ ಹುಳಿಯಲ್ಲಿ ಮರ್ದಿಸಿ ವೀಳೆಯದ ಎಲೆಯಲ್ಲಿ ಮುದುಡಿ ಮೆಲ್ಲಲು ಆ ಕ್ಷಣವೇ ಶೂಲೆ ಮಾಣ್ಬುಗಂ.

ಸರ್ವರೋಗಕ್ಕೆ :—ಶುದ್ಧರಸ, ಬಿಳುಗಾರ, ಗಂಧಕ, ಸೂದು, ಸಾಂಬೆ, ತ್ರಿಕಟುಕ, ತ್ರಿಫಲೆ, ತಾಳೀಸ, ಜೇಪಾಳದ ಬೀಜ, ಇಷ್ಟು ಸಮಾನ ಚಗಚೆಯ ಕುಡಿಯ ರಸ ದಲ್ಲಿ ಜಾವ ಮರ್ದಿಸಿ, ಗುಂಜಿಪ್ರಮಾಣ ಗುಳಿಗೆಯಂ ಮಾಡಿ ನೆಳಲಲ್ಲಿ ಒಣಗಿಸಿ, ಶುಂಠಿ, ಸೈಂಧವದಿ ಕೊಡಲು ಸರ್ವರೋಗ ಪರ. ಲೊಕ್ಕಿಯ ರಸದಲ್ಲಿ ಕೊಳ್ಳಲು ಶೀತಜ್ವರ, ಚಾತು ರ್ಥಿಕಜ್ವರ ಮಾಣುವುದು. ಗಾಂಧಾರಿಯಸೊಪ್ಪಿನ ರಸ ಹಿಂಡಿಕೊಂಡು ಎಳ್ಳ ಎಣ್ಣೆಯ ಬಿಟ್ಟುಕೊಂಡು ಕುಡಿಯೆ ಸರ್ವರೋಗ ಪರ. ...ಳಿಯ ಬಂದದ್ದೂ ಮಾಣುವುದು. ಪಥ್ಯ ಹಾಲು ಅನ್ನ, ಬೆಣ್ಣೆಯ ಅನ್ನ.

ಕುಷ್ಠಕ್ಕೆ :—ಕೊಡುಬೇಣೆಯ ಸುಟ್ಟು ಬೂದಿಯ ಮಾಡಿ ....ಟಸಿಕೆ.......... ಅಳೆ ಉಪ್ಪು ಕಲಸಿ ಊಟಮಾಡಿ......ಕಿ ನೈಪೂಸೆ ಅಷ್ಟಾದಶ ಕುಷ್ಠ ಮಾಣುವುದು.

ಸುಬುದ್ಧಿಗೆ :—ಅಳಲೇಕಾಯಿ ತೂಕ ೯, ಶುಂಠಿಯ..................ದು ಮಾಡಿ ಕೊಳ್ಳಲು ಸುಬುದ್ಧಿಯಕ್ಕು. ಹಾಲು ಅನ್ನ ಪಥ್ಯ.

ವಾತಕ್ಕೆ :—ಗಜ್ಜುಗದ ತಿರುಳು ಸಾಸಿವೆಯ ನೀರಲ್ಲಿ ಅರೆದು.................... ಸಮುದ್ರಲವಣ, ಸಂವತ್ಸರಲವಣ, ಸೈಂಧವಲವಣ, ಯವಕ್ಷಾರ............ಲನ ಬೇರು, ಇಂಗಲೀಕ, ಇಷ್ಟನ್ನು ಸಮಾನ ಚೂರ್ಣವಂ ಮಾಡಿ ಊಟದಲ್ಲಿಯ.....................

......ವಾತ, ಮೂಲವ್ಯಾಧಿ, ಪ್ರಮೇಹ, ಕೈಕಾಲುಹತ್ತಿದ ವಾತ, ಕಾಮಾಲೆ, ಪಾಂಡುರೋಗ, ಶ್ವಾಸ, ಕಾಸೆ, ಇವೆಲ್ಲಾ ಮಾಣುವುವು.

ಜ್ವರಕ್ಕೆ :—ನಾಭಿ ೭ ಭಾಗ, ಗಂಧಕ ೬ ಭಾಗ, ಉಮ್ಮತ್ತದ ಬೀಜ ೪ ಭಾಗ, ತ್ರಿಕಟುಕ, ತ್ರಿಫಲೆ, ಪ್ರತ್ಯೇಕ...............................ಲನ ರಸದಲ್ಲಿ ಮರ್ದಿಸಿ ಹೆಸರುಗಾತ್ರದ ಗುಳಿಗೆಯಂ ಮಾಡಿ ದಾಹಜ್ವರಕ್ಕೆ ಕೊಡುವುದು. ಪಥ್ಯ ಹಾಲನ್ನ.

ಪ್ರಮೇಹಕ್ಕೆ, ಜ್ವರಕ್ಕೆ :—ಲವಂಗ ೧ ತೂಕ, ಏಲಕ್ಕಿ ೧ ತೂಕ, ಹಿಪ್ಪಲಿ ೧ ತೂಕ, ಇಷ್ಟನ್ನೂ ಚೂರ್ಣವಂ ಮಾಡಿ ಮೂರು ಬೆರಳಲ್ಲಿ ತೆಗೆದು ಹಾಲಲ್ಲಿ ಕೊಡುವುದು. ಪಥ್ಯ ಹಾಲನ್ನ.

## D 1362

ವೀರ್ಯವರ್ಧನಕ್ಕೆ :—ಉಗನಿಯ ಹಂಚಿನ ಕೊನರು, ಬೆಲ್ಲದ ಲವಲೂ, ವೀರ್ಯವರ್ಧನ.

ಲೇಪಕ್ಕೆ :—ಗಜ್ಜುಗದ ಬೇರಂ ನಿಂಬೇಹುಳಿಯಲ್ಲಿ ಅರೆದು ಪೂಸುವುದು.

ಕೈಮುಸಕಿಗೆ :—ಹಾವು ಕಚ್ಚಿದರೆ, ಹೊಟ್ಟೆಬೇನೆಗೆ, ಕೈಮುಸಕಿಗೆ, ಈ ಮೂರಕ್ಕೂ ಒಂದೇ ಔಷಧ. ಕೈಮುಸಕಿಗೆ ಆದಿತ್ಯವಾರ ದಿನ ಅಂಕೋಲೆಯ ಬೇರನ್ನು ನೆಳಲಲ್ಲಿ ಒಣಗಿಸಿ ಪುಡಿಮಾಡಿ ಶೋಧಿಸಿಕೊಂಡು ಹಸಿಯ ಹಾಲಲ್ಲಿ ಕುಡಿಯೆ ವಾಂತಿ ಎರಡು ಬಾರಿಯಹುದು. ಮರುದಿನಕ್ಕೆ ಮೂರು ಬಾರಿ ವಾಂತಿಯಹುದು. ಮೂರು ದಿನ ಕೊಟ್ಟರೆ ನಾಲ್ಕು ಬಾರಿ ವಾಂತಿಯಹುದು. ವಾಂತಿಯಾದ ನಂತರ ಬಿಸಿಯಾಗಿ ಗಂಜಿಯನ್ನು ಕೊಳ್ಳುವುದು. ಮೂರು ದಿನ ಪರ್ಯಂತರ ಇವನ್ನೀವುದು.

ಶುಕ್ಲಸ್ತಂಭನಕ್ಕೆ :—ಹೊಮ್ಮುಗುಳು, ಪಚ್ಚೆಕರ್ಪೂರ, ಗೋರೋಚನ, ಇಷ್ಟನ್ನು ಎಕ್ಕೆಯ ಸೊಪ್ಪಿನ ರಸದಲ್ಲಿ ಮರ್ದಿಸಿ ಗುಂಜಾಪ್ರಮಾಣ ಗುಳಿಗೆಯಂ ಮಾಡಿ ಮರ್ದಿಸಿ ಲೇಪ ಮಾಡುವುದು. ಸುತ್ತನೆಂಬ ತಾವರೆಯ ಬೀಜವನ್ನೂ ಜೇನುತುಪ್ಪದಲ್ಲಿ ತೇದು ನಾಭಿಗೆ ಲೇಪವ ಮಾಡೆ ಶುಕ್ಲಸ್ತಂಭನ. ......ಬೇರಂ ಅಂಬಿಲದಲ್ಲಿ ಅರೆದು ಎದೆಯ ಪೂಸೆ ಶುಕ್ಲ ಸ್ತಂಭನ.

ಕೈಮುಸಕಿಗೆ :—ಕಹಿಸೋರೆಯ ನಾಲ್ಕು ತಂದು ಇರಿಸಿ ಮುಂಡೆ ಸಣ್ಣನಾಗುವ ಹಾಗೆ ಒಂದು ಮಡಿಕೆಯಲ್ಲಿ ನಾಲ್ಕು ಕೈಗೆಡಿ . . . . . ನಿರಣಿ . . . . . ಹಾಗೆ ಕಾಸಿ ಶೋಧಿಸಿಕೊಂಡು ಆರಿಸಿ ಅರ್ಧವಾಗುವ ಹಾಗೆ ಕಾಸಿ ನೆಲ್ಲಿಕಾಯಿ, ಅಶ್ವಗಂಧಿ, ಬೇಲ, ಇವನ್ನು ಹಾಕಿ ತೊಳಸಿ ಜೇನುತುಪ್ಪದಲ್ಲಿ ಮುವ್ವೆರಳು ಪ್ರಮಾಣ ತೆಗೆದುಕೊಳ್ಳುವುದು. ಮುವ್ವತ್ತುತೆರೆದ ಕೈಮುಸಕು ಮಾಣ್ಗುಂ.

ಕಣ್ಣುಬೇನೆಗೆ :—ಬೇವಿನ ಬೀಜವಂ ಅಂಬಿಲದಲ್ಲರೆದು ಹಚ್ಚಲು ಕಣ್ಣುಬೇನೆ ಮಾಣ್ಗುಂ. ಹುಲಿಗಿಲಬೀಜಮಂ ಗೋಮೂತ್ರದಿಂ ತೇದು ಕಣ್ಣಿಗೆ ಹಚ್ಚಲು ಇರುಳು ಗಣ್ಣು ಮಾಣ್ಗುಂ.

ವೀರ್ಯಕ್ಕೆ :—ಕೋಣನಕಾಯ ಅಗಿಲು ಹೊಗೆ ಹಾಕಿ ಸೊಲ್ಲಗೆ ಹಾಲ ಕಡೆಗೆ ತೆಗೆದು ಉಳಿದ ಮೂರು ಸೊಲ್ಲಗೆ ಹಾಲನ್ನು ಒಲೆಯ ಮೇಲಿಟ್ಟು ಸೊಲ್ಲಗೆ ಆಗುವ ಹಾಗೆ ಕಾಸಿ ಒಳಗೆ ಇಕ್ಕುವ ಔಷಧಗಳು—ಹೋಮ ಪಾವ ಚೂರ್ಣವಂ ಮಾಡಿ ವಸ್ತ್ರಗಾಳಿತವಂ ಮಾಡಿ ಅದರೊಳಗೆ ಹಾಕಿ ತೊಳಸಿ ತೆಗೆದು ಅರುವೆಯೊಳಗೆ ಹಾಕಿ ನೊದಲು ತೆಗೆದು ಸೊಲ್ಲಗೆ ಹಾಲನ್ನು ಹೊಯ್ದು ಊದಲು ಒಳ್ಳಿತು. ಆ ಹುಯಿದ.................ಒಳಗೆ ತುಂಬಿ ಮೆಣಸು ಗ ೧, ಶುಂಠಿ, ಇದರ ಚೂರ್ಣವಂ ಮಾಡಿ ಗ ೩ ಘನ ೯ ಬಿಸಿನೀರಲ್ಲಿ ಕೊಳ್ಳಲು ವೀರ್ಯವರ್ಧನ. ಕಾಸ, ಶ್ವಾಸ, ಹೃದಯಶೂಲೆ ಇಷ್ಟು ಮಾಣುವುವು.

## D 1397

ಮದಬಿಡಿಸುವುದಕ್ಕೆ ಔಷಧಿ :—ಕರಿ ಉಮ್ಮತ್ತದ ಬೇರು, ಮರುಳಮತ್ತದ ಬೇರು, ಮರುಳಮತ್ತದ ಬೀಜ, ಗುಂ.....ಗುಳ್ಳದ ಬೇರು, ಇಷ್ಟನ್ನೂ ಬೇರೆ ಬೇರೆ ಚೂರ್ಣವ ಮಾಡಿ ನಾಲ್ಕುಸಮಕ್ಕೂ ಒಂದು ಮಡಿಕೆಯೊಳಗೆ ಅರೆದು ಗುಳ್ಳದ ಚೂರ್ಣವ ಹಾಕಿ ಆಮಲಕ ಪ್ರಮಾಣ ಜೇನು ಕೂಡಿಕೊಳ್ಳಲು ಮದ ತಿಳಿವುದು. ಅನುಪಾನ ಎಳನೀರು. ಜೀರಿಗೆ, ಏಲಕ್ಕಿ, ತೂಕ ಸಮವಾಗುವಂತೆ ಮೂರುದಿನ ಕೊಡುವುದು. ಕಾಡರಿಸಿನ, ಮುಸುಕುಜೋಳದ ಬೇರು, ಬಲಮುರಿಯಕಾಯಿ, ಸೀಗೆತಿಗಡು, ಸಾಸಿವೆ, ಗಟ್ಟಿಮೆಣಸು, ಉಳ್ಳಿಬೇಳೆ, ಶುಂಠಿಹುಡಿ, ಹುಳಿ, ಎಣ್ಣೆ ಕೂಡಿ ಭರಣಿಯೊಳಗೆ ಹಾಕಿಸಿ ಎಲಚಿಸಾದೆಯಿಂದ ಅಡುವುದು. ನಿತ್ಯವೂ ಆಮಲಕಪ್ರಮಾಣ ಕೊಳ್ಳಲು......ದಿನಕ್ಕೆ ವ್ಯಾಧಿ ಮಾಣ್ಗುಂ. ಪಥ್ಯ ಹಾಲು.

ಕಿದ್ದಸೆಗೆ :—ಹೊರನೆಲಾವರೆಯಂ ಸಿದ್ಧದಿನದಲ್ಲರೆದು ಹಾಲಲ್ಲಿ ಕುಡಿಯೆ ನೀರಲ್ಲರೆದು ಕುಡಿಯೆ ವಿಷ ಕೆಡುಗುಂ. ಆ ಸಮೂಲವ ಕಾಂಸ್ಯದ ಬಟ್ಟಲಲ್ಲಿ ಜಾರಿಸಿಕೊಂಡು ಅದಂ ಬಿಸಿ ಮಾಡಿ ಆ ಸಮೂಲಮಂ ತ್ರಿಕಟುಕವಂ ನೀರಲ್ಲಿ ಕುಡಿಯೆ ಕಿದ್ದಸೆ ಕೆಡುಗುಂ. ಅದನ್ನು ನೊಸರಲ್ಲಿ ತಿನ್ನೆ ಬರಿವದಣಿಅಕ್ಕಿಯ ಅಂಬಿಲದಲ್ಲಿ ಕುಟ್ಟಿ ತುಪ್ಪದಲ್ಲಿ ಮೆಲೆ ಕಿದ್ದಸೆ ಮಾಣ್ಗುಂ. ಅದರ ಸಮೂಲಮಂ ಕಕ್ಕೆಯ ತಿಗಡಂ ಮೆದ್ದು ಬಿಸಿನೀರಂ ಕುಡಿಯೆ ಕಿದ್ದಸೆ ಮಾಣ್ಗುಂ. ಅದಂ ಅದರ ಬೇರಂ ತಂದು ಮೈಯ್ಯ ಪೂಸಲು ಇಂದ್ರಿಯವರ್ಧನ. ಅದಂ ತ್ರಿಕಟುಕದಿ ತಿನ್ನಲು ಕೆಮ್ಮು ಕೆಡುಗುಂ. ಅದಂ ಅಕ್ಕಿಗಚ್ಚಿನಿಂ ಕುಡಿದರೆ ವಘೆಯಮಂ ? ಶೀರ್ಗುಂ. ಅದಂ ತೊಟ್ಟಮುಂ ಸಮಾನಂಗೊಂಡು ಅದಂ ಏರಂಡದ ತೈಲದಲ್ಲಿ ತಿನ್ನಲು ವಾತಂ ಪೋಕುಂ. ಅದನ್ನು ಕೊಂಬ ಮಂತ್ರ—ಆ ವಿಳಿತಿ......ಜಗ......ನೂರಂಸಂಗ ಸ್ವಾಹಾ ಈ ಮಂತ್ರದಿ ೧೦೮ ಬಾರಿ ಮಂತ್ರಿಸಿ ಕೊಳ್ಳುವುದು.

## D 1364

ವಾತಕ್ಕೆ :—ಇಂಗು ತೂಕ ೬, ಚವ್ಯ ತೂಕ ೨, ವಾಯಿವಿಳಂಗ ತೂಕ ೩, ಸೈಂಧವ ಲವಣ ತೂಕ ೪, ಸಮುದ್ರಲವಣ ತೂಕ ೫, ಶುಂಠಿ ತೂಕ ೬, ಹಿಪ್ಪಲಿ ತೂಕ ೮, ಚೆಂಗಲ ಕೋಷ್ಠ ತೂಕ ೯, ಅಳಲೇಕಾಯಿ ತೂಕ ೧೦, ಚಿತ್ರಮೂಲ ತೂಕ ೧೧, ಅಜವೋದ ತೂಕ ೧೨, ಹಿಪ್ಪಲೀಮೂಲ ತೂಕ ೪, ಕರ್ಕಾಟಕಶೃಂಗಿ ತೂಕ ೪, ರಾಸ್ನೆ ತೂಕ ೪, ಬಜೆ

ತೂಕ ೪, ಜೀರಿಗೆ ತೂಕ ೪, ತಾರೇಕಾಯಿ ತೂಕ ೪, ನೆಲ್ಲಿಚಟ್ಟು ತೂಕ ೪, ತಿಗಡೆ ತೂಕ ೪, ಗಜ್ಜುಗದ ತಿರುಳು ತೂಕ ೩, ತುರಾಸಾಣಿಮೂಲ ತೂಕ ೫, ಇಷ್ಟನ್ನೂ ಈ ಪ್ರಮಾಣ ತೂಕವಾಗಿ ಹಾಕಿ ಚೂರ್ಣವಂ ಮಾಡಿ ವಸ್ತ್ರಗಾಳಿತವಂ ಮಾಡಿ ಇಟ್ಟುಕೊಂಡು ಹಸಿ ಅಡಿಕೆಯಷ್ಟು ಚೂರ್ಣವನ್ನು ನಿತ್ಯವೂ ೨ ಹೊತ್ತು ಜೇನಿನಲ್ಲಿ ಕಲಸಿ ಮೆದ್ದು ನಾಲ್ವೆರಳು ಬಿಸಿ ಉದಕದಲ್ಲಿ ತೆಗೆದುಕೊಳ್ಳಲು ವಾತ, ಶ್ಲೇಷ್ಮ, ಮೈಸೋಲು, ಎದೆಸೋಲು, ಗುಲ್ಮ, ಸರ್ವ ವಾತ ಹರ. ಪಿತ್ತಕೂಡಿದ ವಾತಕ್ಕೆ ಸಕ್ಕರೆ ಬೆರಸಿ ತೆಗೆದುಕೊಳ್ಳುವುದು.

ಮೊಲನಾಗರಕ್ಕೆ :—ಕಾಚತೊಂಡೆಯ ಬೇರು, ಹವಳತೊಂಡೆಯ ಬೇರು, ಒಳ್ಳೆಯ ತೊಂಡೆಯ ಬೇರು, ಏಲಕ್ಕಿ, ನೆಲದಾಳಗೆಡ್ಡೆ, ಗಿಣಿಮೂಗಿ, ಮಡಿಹಾಗಲಗೆಡ್ಡೆ, ಮೊಲದ ಹಲ್ಲು, ಹಾವುಮೆಕ್ಕೆಯ ಬೇರು, ಅರಿದಳ, ಉಲಗನ ಬೇರಿನ ತೊಪ್ಪಡೆ, ಬೇವಿನ ಬೇರಿನ ತೊಪ್ಪಡೆ, ಬೇವಿನ ಬೀಜ, ಇಂಗು, ಬಜೆ, ಹಿಪ್ಪಲಿ, ಮೆಣಸು, ಮೊಳಗದ ಬೇರಿನ ತಿಗಡು, ಇವಂ ಸಮಾನಂಗೊಂಡು ಚೂರ್ಣವಂ ಮಾಡಿ ಬೇವಿನ ಸೊಪ್ಪಿನ ರಸದಲ್ಲಾಗಲೀ, ನಗರೇಹಣ್ಣಿನ ರಸದಲ್ಲಾಗಲೀ ಮರ್ದಿಸಿ ಗುಳಿಗೆಯುಂ ಮಾಡಿ ಇಟ್ಟುಕೊಂಡು ಆ ವ್ಯಾಧಿ ಎತ್ತಿದಾಗ ಆ ರಸದಲ್ಲಿ ತೇದು ನಸ್ಯಮಾಡಲು ಹದಿನಾಲ್ಕು ಬಗೆ ಮೊಲನಾಗರವ್ಯಾಧಿ ಗುಣವಹುದು.

ಬಾಣಂತಿಕೆಮ್ಮಿಗೆ :—ಹಿಪ್ಪಲಿ, ಹಿಪ್ಪಲೀಮೂಲ, ಬಜೆ, ಇಂಗು, ಭದ್ರಮುಸ್ತೆ, ತಾರೇಕಾಯಿ, ಇವನ್ನು ಚೂರ್ಣವಂ ಮಾಡಿ ಜೇನುತುಪ್ಪದಲ್ಲಿ ಕಲಸಿಕೊಂಡು ಮೆಲ್ಲುವುದು. ಮತ್ತಂ ಹೊಮ್ಮುಗಳು, ತ್ರಿಕಟುಕ ಇವನ್ನು ಅರೆದು ತುಪ್ಪದಲ್ಲಿ ಕಲಸಿ ಮೆಲ್ಲಲು ಮಾಣ್ಗುಂ.

ಜಲ ಕಟ್ಟಿ ಇದ್ದುದಕ್ಕೆ :—ಮಡುವಾಗಲಗೆಡ್ಡೆಯನ್ನು ಕಾಳಾಡಿನ ಹಾಲಲ್ಲಿ ತೇದು ಬಿಳುಗಾರವ ಶುದ್ಧೈಸಿ ಮಿಶ್ರಮಾಡಿ ಹಾಲು ಬೆರಸಿ ಪಾನವ ಮಾಡುವುದು. ಜಲ ಶೀಘ್ರದಲ್ಲಿ ಬಿಡುವುದು. ಪಿಟಲುಪ್ಪನ್ನು ಸಣ್ಣನಾಗಿ ಪುಡಿ ಮಾಡಿ ಒಂದೊಂದು ತೂಕವನ್ನು ಅಂಗೈಯಲ್ಲಿ ಇರಿಸಿಕೊಂಡು ನಿಂಬೇಹುಳಿಯನ್ನು ಬಿಟ್ಟು ಕಲಸಿಕೊಂಡು ನುಂಗುವುದು. ನೀರ ಕಾಸಿ ಸೊಂಟದ ಮೇಲೆ ಹೊಯಿಸುವುದು. ಶೀಘ್ರದಲ್ಲಿ ಜಲಂ ಬಿಡುವುದು. ಇದು ಒಳ್ಳೆಯ ಯೋಗ. ಅಗಸೇಸೊಪ್ಪ ತಂದು ಮಡಕೆಯೊಳಗೆ ಹಾಕಿ ನೀರು ಹೊಯ್ದು ಅಷ್ಟಾವಶೇಷವಾಗಿ ಕಾಸಿ ಅರ್ಧ ಸೇರು ಕಷಾಯವನ್ನೂ ಶುದ್ಧೈಸಿದ ಬಿಳುಗಾರವನ್ನೂ ಮಿಶ್ರಮಾಡಿಕೊಂಡು ಪಾನವ ಮಾಡಲು ಜಲ ಬಿಡುವುದು.

ಆಸನನೂತಿಹುಣ್ಣಿಗೆ :—ಆಸನನೂತಿಹುಣ್ಣು, ಆಸನದ ಒತ್ತಿನಲ್ಲಿ ಬೊಕ್ಕೆ ಏಳುವುದು, ತಿಮಿರವಾಗುವುದು, ತುರಿಸಿದರೆ ಹುಣ್ಣಾಗಿ ದಿನದಿನಕ್ಕೆ ಆಸನದ ಸುತ್ತಲೂ ಹುಣ್ಣಾಗುವುದು, ಇದಕ್ಕೆ ತುರುವೆ ಎಲೆಯನ್ನು ಎಂಟು ಹತ್ತು ಜೋಡಿಸಿ ದಿನಕ್ಕೆ ಎರಡು ಹೊತ್ತು ಹದಿನೈದು ದಿನ ಕಟ್ಟುವುದು. ಆ ಮೇಲೆ ಮೂಲವ್ಯಾಧಿಗೆ ಮಾಡಿದ ಆ ಔಷಧಿಯನ್ನೇ ಐದಾರು ದಿನ ತೊಡೆಯುವುದು. ಆ ಮೇಲೆ ಸಣ್ಣನಾಗುವರೆ ಬಿಳಿಮದ್ದ ಮಸುಡಿ ತೊಡೆಯುವುದು. ಬೇಗ ಗುಣವಹುದು. ಪಥ್ಯ ಹುಳಿಶಲಧಿ ವರ್ಜ್ಯ.

ಗರ್ಭನಿಲ್ಲುವರೆ :—ಬಿಳಿಗುರುಗುಂಜಿಸೊಪ್ಪ ತಂದು ಸಣ್ಣನಾಗಿ ಅರೆದು ಕಡಲೇ ತೋರ ಮೂರು ಗುಳಿಗೆಯಂ ಮಾಡಿ ಗಜ್ಜುಗದ ತೂಕ ೨ ಹಸುವಿನ ಬೆಣ್ಣೆಯಲ್ಲಿ ಮರ್ದಿಸಿ ಹೆಂಗಸಿಗೆ ನುಂಗಿಸುವುದು. ಈ ಪ್ರಕಾರ ಮೂರು ದಿನ ನುಂಗಿಸಲು ಪಥ್ಯಕ್ಕೆ ಹಸುವಿನ ಹಾಲೋಗರವೇ ಸರಿ, ಸೂತಕ ನಿಂತು ಗರ್ಭ ನಿಲ್ಲುವುದು.

ನಷ್ಟೇಂದ್ರಿಯಕ್ಕೆ :—ಬೊಮ್ಮಿಯ ಸೊಪ್ಪ ತಂದು ಕುಷ್ಠರಸ ಹಿಂಡಿಕೊಂಡು ಆ ರಸದಲ್ಲಿ ಜೀರಿಗೆ ಪುಡಿ ಮಾಡಿ ಸಕ್ಕರೆ ಬೆರಸಿ ಪಾನವ ಮಾಡಲು ಗರ್ಭ ಕಳಚಿ ಬೀಳುತ್ತಿದ್ದರೂ, ಉರಿಯಿದ್ದರೂ ಐದು ದಿನಕ್ಕೆ ನಿಲ್ಲುವುದು. ಹಾಲೋಗರವೇ ಪಥ್ಯ. ಮಾವಿನ ತೊಪ್ಪಟೆಯನ್ನು ಹಸುವಿನ ಹಸಿಹಾಲು ಸಹ ತುಳಿದು ಹಿಂಡಿಕೊಂಡು ಆ ರಸದಲ್ಲಿ ಸಕ್ಕರೆ ಸಹ ಪಾನಕ ಮಾಡುವುದು. ಗರ್ಭ ನಿಲ್ಲುವುದು.

ಪ್ರಮೇಹಕ್ಕೆ :—ಹಂಸಪಾದಿಯ ಸಹಮೂಲ, ಒಳಮುನಿಗಿಡದ ಸಹಮೂಲ, ಇವು ಎರಡನ್ನೂ ಕುಷ್ಠರಸವ ಹಿಂಡಿಕೊಂಡು ಸಕ್ಕರೆಯ ಹಾಕಿ ನಿಂಬೇಹುಳಿಯ ಸ್ವಲ್ಪ ಮಿಶ್ರ ಮಾಡಿಕೊಂಡು ಪಾನವ ಮೂರು ಹೊತ್ತು ಮಾಡಲು ಪ್ರಮೇಹ ಗುಣವಹುದು.

ಹೊಟ್ಟೆಹೋಗುತ್ತ ಇದ್ದುದಕ್ಕೆ :—ಸಜ್ಜ ರಸವನ್ನು ಪುಡಿಮಾಡಿ ಗಟ್ಟಿಮೊಸರಲ್ಲಿ ಕೊಡಲು ಹೊಟ್ಟೆಕೋಲು, ಆಮರಕ್ತ, ಇವು ಗುಣವಾಗುವುವು.

ಹಳೇಜ್ವರಕ್ಕೆ ಕಷಾಯ :—

ದ್ರಾಕ್ಷಾಮೃತಕಾಕಜಂಘಸಹದೇವೀಬಲಾಕಣಂ ।
ಕ್ವಾಥಂ ನಾಗರಸಂಯುಕ್ತಂ ಪುರಾಣಜ್ವರನಾಶನಂ ॥

ಉರಿಜ್ವರಕ್ಕೆ :—ಕರಿಹತ್ತಿಯ ಹರಳು, ಬಸಲೇಕೊಂಬು, ತೊಂಡೆಯ ಸೊಪ್ಪು, ಇವನ್ನು ನೀರ ತಳಿದು ಕುಷ್ಠರಸವ ಹಿಂಡಿಕೊಂಡು ಪಾನವ ಮಾಡುವುದು. ತಾಪ, ದಾಹ, ಉರಿ, ಪಿತ್ತಜ್ವರ ಹರವಹುದು. ಅಕ್ಕಿಯನ್ನೂ ಮೊಸರನ್ನೂ ಹಾಕಿ ಗಂಜಿಯ ಕಾಸಿ ಕುಡಿಸುವುದು.

ಮಹಾಜ್ವರಕ್ಕೆ :—ಬೆಲ್ಲವತ್ತದ ಹಣ್ಣು, ಶ್ರೀಗಂಧ, ಯಷ್ಟಿಮಧುಕ, ಇವನ್ನು ಹಳೇ ನೀರಲ್ಲಿ ತೇದು ಕುಡಿಯೆ ಜ್ವರ ಬೆವರುವದು. ಉರಿ, ಧಗೆ, ತಾಪಕ್ಕೆ ಕುಮಾರಿಯ ಬೇರನ್ನು ಪುಟವನಿಕ್ಕಿ ರಸವ ಹಿಂಡಿಕೊಂಡು ಆ ರಸದಲ್ಲಿ ಸಕ್ಕರೆ, ಹಾಲು, ಕಟುಕರೋಹಿಣಿ ತೂಕ ೧೨ ವರಹ, ಇವನ್ನು ಅರೆದು ಬೆರಸಿಕೊಂಡು ಪಾನಕವ ಮಾಡುವುದು. ಬೆವರಿ, ಉರಿ, ಧಗೆ, ನಿಲ್ಲುವುದು.

ಪುರಾಣಜ್ವರಕ್ಕೆ :—ಕೊಳವಳಿಕೆ ಸಮೂಲವನ್ನು ತಂದು ತುಳಿದು ಹಿಂಡಿಕೊಂಡು ಆ ರಸವನ್ನು ಸಕ್ಕರೆ ಸಹ ತಗೆದುಕೊಳ್ಳುವುದು ಮತ್ತು ಅಮರದ ಬಳ್ಳಿ, ಬೇವಿನ ಒಳನಾರು, ಗುಳ್ಳದ ಬೇರು, ಔಡಲದ ಬೇರು, ಇವನ್ನು ಸಮಾನಂಗೊಂಡು ಕಷಾಯವುಂ ಕಾಸಿ ಪಾನವ ಮಾಡಲು ಪುರಾಣಜ್ವರ ಹರ.

ದಾಹಜ್ವರ, ತಾಪಜ್ವರಕ್ಕೆ :—ಕೊತ್ತಂಬರಿಬೀಜ, ಜೀರಿಗೆ, ಮುಡಿವಾಳ, ಲಾಮಂಚ, ಶ್ರೀಗಂಧ, ಭದ್ರಮುಸ್ತೆ, ಏಲಕ್ಕಿ, ಯಷ್ಟಿಮಧುಕ, ಚಂಗಲಕೋಷ್ಠ, ಇವನ್ನು ಸಮಾನಂ ಗೂಡಿ ಹಾಕಿದ ಕಷಾಯಮಂ ಸಕ್ಕರೆ ಮಿಶ್ರಮಾಡಿ ಕೊಳ್ಳಲು ತಾಪಜ್ವರ ಹರ.

ಕ್ಷಯರೋಗಕ್ಕೆ :—ಆದಿತ್ಯ ಉದಯದಲ್ಲಿ ಬೆಲ್ಲದ ಮರದ ಬೇ.........(ಅಪೂರ್ಣ).

## D 1367

ಜ್ವರಕ್ಕೆ ಗುಳಿಗೆ :—ಹಿರಭಿ ೪ ತೂಕ, ಹಿಪ್ಪಲಿ ೫ ತೂಕ, ಗಂಧಕ ೨ ತೂಕ, ವತ್ಸನಾಭಿ ೨ ತೂಕ ; ರಸ ೧ ತೂಕವನ್ನೂ, ನಾಭಿಯನ್ನೂ, ಹಿರಿಯ ಹಿರಭಿ ೨ ನ್ನೂ ಗೋಮೂತ್ರದಲ್ಲಿ ೧ ದಿನ ನೆನೆಯಲಿರಿಸುವುದು. ಗಂಧಕವ ಹಸುವಿನ ಹಸಿಹಾಲಲ್ಲಿ ಒಂದು ಕುದಿ ಕುದಿಸಿ ಬಳಿಕ ಇವು ಇಷ್ಟನ್ನೂ ನಿಂಬೆಯ ಹುಳಿಯ ರಸದಲ್ಲಿ ನಾಲ್ಕು ಜಾವ ಮರ್ದನೆಯಂ ಮಾಡಿ ಗುಂಜಿಪ್ರಮಾಣ ಗುಳಿಗೆಯಂ ಮಾಡಿ ಸಮನಾಗಿ ಕಲ್ಪದೊಳು ಹಾಗಲದ ರಸದಲ್ಲಿ ಮರ್ದಿಸಿ ಕೊಳ್ಳಲು ಕಂಪ ಮಾಣ್ಗುಂ. ಗುಂಜಿಪ್ರಮಾಣ ಗುಳಿಗೆಯಂ ಮಾಡಿ ಒಂದು ಗುಳಿಗೆಯಂ ಜೇನು, ಬೆಲ್ಲದಲ್ಲಿ ಕೊಡುವುದು. ಪಥ್ಯ ಹಾಲು ಓಗರ, ಗಂಜಿ ಓಗರ, ಉಪ್ಪು ವರ್ಜಿತ. ದಿನಾಲೂ ಬರುವ ಛಳಿ, ಚಾತುರ್ಥಿಕ ಬಿಡುವುದು.

## D 1368

ತಲೆಯಶೂಲೆಗೆ ಮದ್ದು :—ಕಟುರೋಹಿಣಿ, ವಾಯಿವಿಳಂಗ, ಹಿಪ್ಪಲಿ, ಹಿಪ್ಪಲೀ ಮೂಲ, ಗಂಟುಭಾರಂಗಿ, ಮರದರಿಸಿನ, ಅರಿಸಿನ, ಮೆಣಸು, ಶುಂಠಿ, ಉಳ್ಳಿ, ಸಣಬು, ಪ್ರತ್ಯೇಕಂ ಒಂದು ಒಂದುತೂಕದಲ್ಲಿ ಇವ್ನಾನ ಎಣ್ಣೆಯಲ್ಲಿ ಪಾಕವ ಮಾಡಿ ಆಪಾದಮಸ್ತಕ ಪರಿಯಂತರ ತೈಲಂ ಪೂಸಿ ನಂತರ ಮಿಾಯುವುದು. ಪಥ್ಯಕ್ಕೆ ಸಪ್ಪೆ ಹಾಲು. ದಿನ ಬಿಟ್ಟು ದಿನ ಬಿಸಿ ಆದ ಎಣ್ಣೆಯ ಮಿಾಯುವುದು. ಈ ತಲೆಶೂಲೆಗೆ ನಸ್ಯ—ಯಷ್ಟಿಮಧುಕ, ಕರ್ಪೂರ, ಸಪ್ಪೆ ಹಸುವಿನ ತುಪ್ಪದಲ್ಲಿ ನಸ್ಯವ ಮಾಡೆ ಮಾಣ್ಗುಂ. ಸನ್ನಿತಲೆನೋವಿಗೆ ನಸ್ಯ—ಸುಟ್ಟ ಬೆಲ್ಲ, ಮೆ........ವಾರಿಡೆಯ ನಸ್ಯಮಂ ಮಾಡಲು ಮಾಣ್ಗುಂ.

## D 1370

ನಾಲಿಗೆ ದೋಷಕ್ಕೆ :—

ವಿಶ್ವೇಸಿತಪುನರ್ನವಾ್ಯ ಕುಷ್ಠಾಗೋರೋಚಪಿಪ್ಪಲೀಃ ।
ರುದ್ರಾಕ್ಷಕಸ್ತೂರಿಹೇಮಪತ್ರಕಂ ಬಿಲ್ವಮೇವ ಚ ॥
ಏವಂ ಸರ್ವಂ ಸಮಂ ಕಲ್ಪೇ ಸ್ತನ್ಯಪಾನೇ ವಿಲೇಪಯೇತ್ ।
ದೋಷಯುಕ್ತಾಂ ಮಹಾಜಿಹ್ವಾಂ ಸನ್ನಿಪಾತೇ ಜ್ವರೇ ಕ್ಷಣಾತ್ ॥

ಟೀಕೆ :—ಶುಂಠಿ, ಬಿಳಿಕೊಮ್ಮೆ ಬೇರು, ಚಂಗಲಕೋಷ್ಠ, ಗೋರೋಚನ, ಹಿಪ್ಪಲಿ, ರುದ್ರಾಕ್ಷಿ, ಕಸ್ತೂರಿ, ಚಿನ್ನ, ಬೆಲ್ಲಪತ್ರಿಕಾಯಿ, ಇಷ್ಟನ್ನು ಕೈಕರಣದಿಂದ ಹಾಕುವುದು. ಬೆಲ್ಲದ ಬೀಜ, ಪರ್ವತದ ಮಡುಬೇವಿನ ಕಾಯಿ, ಹಾಗಲದ ಗೆಡ್ಡೆ, ರುದ್ರಾಕ್ಷಿ, ಇವಂ ಎಲ್ಲ

ವನ್ನು ವೊಲೆಹಾಲಲ್ಲಿ ತೇದು ನಾಲಿಗೆಗೆ ಲೇಪಿಸುವುದು. ದೋಷ ಗುಣ. ಆಕಲಕರೆಯನ್ನು ತೇದು ಕೊಂಬುದು, ನಾಲಿಗೆದೋಷ ಗುಣ.

ಕಲ್ಕ :—

ಜೀರಕಂ ಯೋಷಲಶುನಂ ಸಂಪಿಷ್ಟಂ ಚೋಷ್ಣವಾರಿಣಾ ।
(ಶೀ)ತಜ್ವರಸ್ಯ ಗಮನೇ ಪಿಬೇನ್ನಿಹಿತಮಂಬುನಾ ॥

ಟೀಕೆ :—ಜೀರಿಗೆ, ಶುಂಠಿ, ಹಿಪ್ಪಲಿ, ಮೆಣಸು, ಬೆಳ್ಳುಳ್ಳಿ ಸಹ ಬಿಸಿನೀರಲ್ಲಿ ಅರೆದು ಕುಡಿಯುವುದು.

ಧಾನ್ಯಕಂ ಜೀರಕಂ ದ್ರಾಕ್ಷಾಮೇಲಾಸಿಕತಸಂಯುತಂ
ಉಷ್ಣೋದಕೇನ ಸಿಂಪೀತ್ವಾ ತಾಪಜ್ವರನಿವಾರಣಂ ॥

ಟೀಕೆ :—ಕೊತ್ತಂಬರಿ, ಜೀರಿಗೆ, ದ್ರಾಕ್ಷೆಹಣ್ಣು, ಏಲಕ್ಕಿ, ಸಹ ಬಿಸಿನೀರಲ್ಲಿ ಅರೆದು ಸಕ್ಕರೆ ಬೆರಸಿ ಕುಡಿಯೆ ತಾಪಜ್ವರ ಮಾಣ್ಗುಂ.

ಛಳಿಜ್ವರಕ್ಕೆ ಕಲ್ಕ :—ಶುಂಠಿ, ಕೊತ್ತಮಲ್ಲಿ, ಜೀರಿಗೆ, ಹಿಪ್ಪಲೀಮೂಲ, ಪುತ್ರಜೀವಿ ಮಣಿಯ ಒಳಗಣ ತಿರುಳು, ಸೊಗದೆ, ಈಶ್ವರೀಬೇರು, ಕಲ್ಲುಸಕ್ಕರೆ, ದ್ರಾಕ್ಷೆಹಣ್ಣು, ತುಂಬೇ ಹೂವು, ಎಕ್ಕದ ಹೂವು, ನುಗ್ಗೇಹೂವು, ಗುಳ್ಳದ ಹೂವು, ಇವು ಎಲ್ಲವನ್ನು ಸಣ್ಣನಾಗಿ ಬಿಸಿನೀರಲ್ಲಿ ಅರೆದು ಬಿಸಿನೀರಲ್ಲಿ ಕದಡಿ ಕುಡಿಯಲು ಛಳಿಜ್ವರ, ತಾಪ ಸಹ ಮಾಣ್ಗುಂ.

ಪ್ರಸೂತಿಕಾಜ್ವರಗಳಿಗೆ :—

ವರ್ಷಾದೌ ದೇವಕುಸುಮಮೀಶ್ವರೀಂ ಸಹಜೀರಿಕಾಂ ।
ನಂದಾಕರ್ಣಾಟಕೀಧಾನ್ಯಂ ವಚಾತ್ವಕ್ಕುಷ್ಠನಾಗರಂ ॥
ಕಣಾವ್ಯಾಘ್ರೀಭೂಮಿನಿಂಬಾಭೂಪತ್ರಂ ಚಾಶ್ವಗಂಧಕಂ ।
ನಿಲೀವಾಲಕಮೂಲಂ ಚ ವಿಷಹಾರಿಸುಬೀಜಕಂ ॥
ಏತತ್ಸರ್ವಸಮಾಯುಕ್ತಂ ಸೂಕ್ಷ್ಮಚೂರ್ಣಾನಿ ಕಾರಯೇತ್ ।
ದ್ವಿನಿಷ್ಕಾರ್ಧಪ್ರಮಾಣೇನ ನರಮೂತ್ರೇಣ ಯೋಜಯೇತ್ ॥
ಪ್ರಸೂತಿಕಾನ್ ಜ್ವರಾ‌ಃ ದೋಷಾಃ ನಾಶಯೇನ್ನಾತ್ರ ಸಂಶಯಃ ।

ಸಕಲರೋಗಗಳಿಗೆ :—

ಸ್ಥಾವರಂ ಜಂಗಮಂ ಚೇತಿ ಕೃತ್ರಿಮತ್ರಯನಾಶನಂ ।
ಅಶ್ವಿಭ್ಯೋ ನಿರ್ಮಿತಂ ಯೋಗಂ ನರಾಣಾಂ ಹಿತಕಾರಣಂ ॥
ಭೃಗ್ವಾದಿಶ್ಚೈಕಭಾಗಂ ದ್ವಯಗಜಕುಸುಮಂ ದ್ರಾವಿಡಂ ವೇದಭಾಗಂ
ಶ್ಯಾಮನಾಮಷ್ಟಭಾಗಂ ತದಪಿ ಮಧುಕರಂ ಷೋಡಶಾಂಶೈಕಭಾಗಂ ।
ದ್ವಾತ್ರಿಂಶದ್ವಿಶ್ವಭಾಗಂ ಚತುರಧಿಕಯುತಂ ವಾಜಗಂಧೀ ಚ ಷಷ್ಠೀ
ಏತೇಷಾಂ ಸೂಕ್ಷ್ಮಚೂರ್ಣಂ ಪ್ರವರಸಿತಸಮಂ ಭಕ್ಷಯೇದಕ್ಷಮಾತ್ರಂ ॥

ಕಾಸಶ್ವಾಸಕ್ಷಯಾನ್ವಾಪ್ಯಪರಭವಗದಂ ಪಿತ್ತಹೃದ್ರೋಗಛರ್ದಿಂ
ಪಾಂಡವ್ಯಾಕಾಮಿಲಾಖ್ಯಂ ಸಕಲರುಜಹರಂ ಭಾಷಿತಂ ಪೂಜ್ಯಪಾದೈಃ ॥

ಸಕಲಜ್ವರಕ್ಕೆ :—

ಮುಸ್ತೈಲಾಗ್ನಿವಿಳಂಗಯಷ್ಟಿರಜನೀಮಂಜಿಷ್ಠಪಾರಾವತಂ
ಕುಂಡೀರೋಹಿಣಿಕಾಪಲತ್ರಯವೃಷಾವ್ಯುದ್ವೀಕದರ್ವೀಯುತಂ ।
ಗವ್ಯೇಷು ಪ್ರತಿಪಾದಿತಂ ಘೃತಮಿದಂ ಕಾಂತಿಪ್ರದಂ ಪುಷ್ಟಿದಂ
ಪುತ್ರಾಯುಷ್ಯಕರಂ ಮಹಾಗ್ರಹಹರಂ ಭೂತಾಮಯಘ್ನಂ ಪರಂ ॥

ಟೀಕೆ :—ಮುಸ್ತೆ, ಏಲಕ್ಕಿ, ಚಿತ್ರಮೂಲ, ವಿಳಂಗ, ಯಷ್ಟಿಮಧುಕ, ಅರಿಸಿನ, ಮಂಜಿಷ್ಠ, ಅಗುಳುಶುಂಠಿ, ಬಜೆ, ಹಿಪ್ಪಲಿ, ಕಟುಕರೋಹಿಣಿ, ತ್ರಿಫಲೆ, ಆಡುಸೋಗೆ, ದ್ರಾಕ್ಷೆ ಹಣ್ಣು, ಮರದರಿಸಿನ, ಇವು ತೂಕ ೧, ತುಪ್ಪ ಪಲ ೧೦, ಗೋಮಯ ಪಲ ೫ ತೂಕ, ಗೋಮೂತ್ರ ಪಲ ೧, ಮೊಸರು ಪಲ ೫, ಇದು ಜ್ವರಕ್ಕೆ ಗುಳಿಗೆ.

ಸರ್ವಜ್ವರಕ್ಕೆ :—ವತ್ಸನಾಭಿ ತೂಕ ೧, ತ್ರಿಕಟುಕ ೨, ಕಾಂತಭಸ್ಮ ೩ ತೂಕ, ಇಂಗಲೀಕ ೪ ತೂಕ, ಇವಂ ಅಲ್ಲದ ರಸದಲ್ಲಿ ಮರ್ದಿಸಿ ಗುಂಜಿತೋರ ಗುಳಿಗೆಯಂ ಮಾಡಿ ಅಲ್ಲದ ರಸದಲ್ಲಿ ಕೊಡಲು ಸರ್ವಜ್ವರ ಹರ.

ಜ್ವರಕ್ಕೆ ಲೇಪ :—ಮುಂಡುಗಳಿಯ ಕೊನೆಯನ್ನು ಬೆಂಬೂದಿಯಲ್ಲಿ ಹೂಳಿ ರಸವ ಹಿಂಡಿಕೊಂಡು ಆ ರಸದಲ್ಲಿ ಕಟುಕರೋಹಿಣಿ, ತ್ರಿಕಟುಕ, ಇಂಗು ಸಬಸಿಗ, ವಿಳಂಗ, ನುಗ್ಗೆ ಚೆಕ್ಕೆ, ಚಿತ್ರಮೂಲ, ಇಷ್ಟನ್ನೂ ಅರೆದು ಕಬ್ಬಿಣದ ಸೌಟಿನಲ್ಲಿ ಕುದಿಸಿ ಸ್ಥಾನಸ್ಥಾನಕ್ಕೆ ತೊಡೆದು ಲೇಪಿಸಲು ಜ್ವರ ಹರ.

ವೀರ್ಯವರ್ಧನಕ್ಕೆ :—ನೆಗ್ಗಿಲಬೇರು, ಆಷಾಢೀಬೇರು, ನಸುಗುನ್ನಿ ಬೀಜ, ಕರಿ ಎಳ್ಳು, ಉದ್ದು, ಇವಂ ಸಮಾನಂಗೊಂಡು ಚೂರ್ಣವಂ ಮಾಡಿ ಸಕ್ಕರೆಯಂ ಬೆರಸಿ ಹಾಲಲ್ಲಿ ಕುಡಿಯೆ ನೂರುಮಂದಿ ಸ್ತ್ರೀಯರ ಅನುಭವಿಸುವ ವಿಷಯ ಬಪ್ಪುದು. ಮತ್ತಂ ಕನ್ನೇ ಕುಮಾರಿಯ ಬೇರು, ಆಷಾಢಿಯಬೇರು, ಬೇಳಡಿಕಳ ಬೇರು, ನೆಗ್ಗಿಲಬೇರು, ಭೂಸಕ್ಕರೆ ಇವಂ ಸಮಾನಂಗೊಂಡು ಸಕ್ಕರೆಯಂ ಬೆರಸಿ ಹಾಲಲ್ಲಿ ಕುಡಿಯಲು ಪಂಚಶತಸ್ತ್ರೀಯರ ಮೆರೆಯಬಹುದು. ಮತ್ತಂ, ಹಿರಿಮದ್ದಿನ ಬೇರು, ಉದ್ದು, ಬಿಳಿಕೊಮ್ಮೆ ಬೇರು, ಆಷಾಢಿಯ ಬೇರು, ಕರಿಎಳ್ಳು, ಈ ೫ ಬಗೆಯನ್ನು ಸಮಾನಂಗೊಂಡು ಚೂರ್ಣವಂ ಮಾಡಿ ಸಕ್ಕರೆಯಂ ಬೆರಸಿ ಹಾಲುತುಪ್ಪದಿ ಏಳುರಾತ್ರಿ ತೆಗೆದುಕೊಳ್ಳಲು ಏಳು ಆನೆ ಬಗ್ಗಿಸಬಹುದು. ಮತ್ತೂ ನೆಲದಾಳು, ಆಷಾಢಿಯ ಬೇರು, ನಸುಗುನ್ನಿಯ ಬೇರು, ಈ ನಸುಗುನ್ನಿಯ ಬೀಜ, ಕರಿಎಳ್ಳು, ಇವಂ ಸಮಾನಂಗೊಂಡು ಚೂರ್ಣವಂ ಮಾಡಿ ಸಕ್ಕರೆಯಂ ಬೆರಸಿ ಹಾಲು ತುಪ್ಪದಿ ತೆಗೆದು ಕೊಳ್ಳಲು ವೀರ್ಯವರ್ಧನ.

ಹೆನ್ನೆರೋಗಕ್ಕೆ :—ಬಿಳಿದಾಸವಾಳದ ಹೂವು, ಕೆಂಪುದಾಸವಾಳದ ಹೂವು, ಕರಿಹತ್ತಿಯ ಹೀಚು, ಈ ೩ ನ್ನೂ ನೀರಲ್ಲಿ ಕುದಿಸಿ ಕಿವಿಚಿ ಆ ನೀರ ಬಿಸಿನೀರುಕೊಂಡು ಅದರೊಳು ಅರಿವೆಯನ್ನು ಸುಟ್ಟು ಕರಿಯನ್ನು ಹಾಕಿ ಚಂದನ, ಗೋರೋಚನ ಇವಂ ಅರೆದು ಕದಡಿ ಒಚ್ಚಡಿಶರೀರವಾದರೆ ಒಂದು ಬಟ್ಟಲು, ತುಂಬಿದ ಶರೀರವಾದರೆ ಅರೆ ಬಟ್ಟಲು ಈ ಪ್ರಕಾರ ಎಂಟು ದಿನ ಕೊಡೆ ಎಲ್ಲಾ ತೆರದ ಹೆನ್ನೆರೋಗಗಳು ಗುಣ. ಲವಣಾಮ್ಲ ವರ್ಜಿತ. ಋತುವಾದಾಗ ಅರಿದಳ ೧ ತೂಕ, ನಸುಗುನ್ನಿಬೀಜದ ತಿರುಳು ೧ ತೂಕ, ಬಿಳಿ ಉದ್ದಿನ ಬೇಳೆ ೧ ತೂಕ, ಸಕ್ಕರೆ ೧ ತೂಕ, ಯಷ್ಟಿಮಧುಕ ೧ ತೂಕ, ಇಷ್ಟನ್ನು ಆವಿನ ಹಾಲಿನಲ್ಲಿ ಅರೆದು ಕುಡಿಯೆ ಹೆನ್ನೆರೋಗ ಗುಣ. ಕಾಡಮಲ್ಲಿಬೇರಂ ಆಡಿನ ಹಾಲಲ್ಲರೆದು ಕುಡಿಯೆ ಗುಣ. ಸೋದೇಬೇರು, ತೋಟರಸ ತೆಗೆದುಕೊಂಡು ಆ ರಸದಲ್ಲಿ, ಸೈಂಧವಲವಣಮಂ ಬೆರಸಿ, ಕೋಣನಕಾಯ ಮೊಸರಲ್ಲಿ ಕೊಡಲು ಹೆನ್ನೆ ಗುಣ. ಕಹಿಹೀರೆರಸದಲ್ಲಿ ಮಣಿಸಿಲೆಯ ಅರೆದು ಯೋನಿಗೆ ಮೆತ್ತಿ ಕಟ್ಟಲು ಶುಕ್ಲಹೆನ್ನೆ ಗುಣ. ಅಳಲೇಕಾಯಿ, ನೆಲ್ಲಿಚಟ್ಟು, ಇವಂ ಸಮಾನಂಗೊಂಡು ಸಕ್ಕರೆ ಬೆರಸಿ ಕೊಳ್ಳೆ ಹೆನ್ನೆ ಗುಣ. ಕಣಿಕದ ಹಿಟ್ಟನ್ನು ಹಾಲಲ್ಲಿ ಕುಡಿಯೆ ಹೆನ್ನೆ ಹರ. ಲೋಳಿಸರದ ಹಳುಕನ್ನು ಸಕ್ಕರೆ ಬೆರಸಿ ಕೊಳ್ಳೆ ಗುಣ. ಉತ್ತರಣೆ ಬೇರಂ ಸಕ್ಕರೆ ಬೆರಸಿ ಕೊಳ್ಳಲು ಗುಣ. ಇದಂ ಅಕ್ಕಿಗಚ್ಚಿನಲ್ಲಿ ಅರೆದು ಕೊಳ್ಳೆ ಯೋನಿರಕ್ತ ಗುಣ. ಹತ್ತಿಯ ಹೂವಿನ ಒಳಗಣ ಕೆಂಪಂ ಕಳೆದು ಒಂದು ಹಿಡಿ ಹೂವು ಮೂರು ದಿನ ಹಸುವಿನ ಹಸಿಹಾಲಲ್ಲಿ ಅರೆದು ಕೊಳ್ಳಲು ಗುಣ. ಬೆಲ್ಲದಬೀಜವಂ ಹಸಿಹಾಲಲ್ಲಿ ಅರೆದು ಸಕ್ಕರೆ ಬೆರಸಿ ಕೊಳ್ಳಲು ಗುಣ. ಉತ್ತರಣೆಯ ಸೊಪ್ಪಂ ನೆಲ್ಲಕ್ಕಿಯಲ್ಲಿ ಇಟ್ಟು ಇಡಿದು ಸಂಕಟೆಯಂ ತೊಳಸಿ ಆಡಿನ ತುಪ್ಪದಲ್ಲಿ ಮೆಲ್ಲಲು ಎಲ್ಲ ಬಗೆಯ ಹೆನ್ನೆ ಯೋನಿದೋಷ ಗುಣ. ಹಿಡಿಹಿಡಿಕೆಸೊಪ್ಪು, ಇಂಗು, ಇವಂ ಕೂಡ ಅರೆದು ಆಡಿನ ಹಾಲಲ್ಲಿ ಕದಡಿ ಕುಡಿಯೆ ಯೋನಿಶೂಲೆ ಗುಣ. ಕಿರುಕುಸಾಲೆಬೇರಂ ಅಕ್ಕಿಗಚ್ಚಿನಲ್ಲಿ ಅರೆದು ಕುಡಿಯೆ ಕೆಂಪಿನ ಹೆನ್ನೆ ಗುಣ. ಎಲವದ ಹಗಿನಂ ಎಳನೀರಲ್ಲಿ ಅರೆದು ಎಳನೀರಲ್ಲಿ ಸಕ್ಕರೆ ಬೆರಸಿ ಕೊಳ್ಳಲು ಕೆಂಪಿನ ಹೆನ್ನೆ ಗುಣ. ಕೊಮ್ಮೆಬೇರು, ಉತ್ತರಣೆಯ ಬೇರು, ನೆಲ್ಲಿಯ ಬೇರು, ಇವಂ ಚೂರ್ಣವಂ ಮಾಡಿ ಅಕ್ಕಿಹಿಟ್ಟಿನಲ್ಲಿ ಕಲಸಿ ತುಪ್ಪದಿಂ ಮೆಲ್ಲಲು ಹೆನ್ನೆರೋಗ ಗುಣ. ಆಡಿನ ಹಿಕ್ಕೆಯನ್ನು ಬತ್ತಿಯಲ್ಲಿ ಹುದುಗಿಸಿ ಆ ಬತ್ತಿಯನ್ನು ಯೋನಿಯಲ್ಲಿ ಇರಿಸಿಕೊಳ್ಳಲು ಯೋನಿರಕ್ತ ಗುಣ. ಅಳಲೇಕಾಯ ಬೀಜವಂ ತೆಗೆದುಹಾಕಿ ಮಾವು, ಹುಣಸೆ, ನೆಲ್ಲಿ, ಜಾತಿ, ಕರಿಹಾಲೆ, ಈ ಮರಗಳ ತಿಗುಡಂ ತಂದು ಸಣ್ಣನಾಗಿ ಅರೆದು ಮೆಣಸಿನ ಚೂರ್ಣವಂ ಬೆರಸಿ ಮೊಸರಿಂದ ಕಲಸಿ ಮೆಲ್ಲಲು ಹೆನ್ನೆರೋಗಗಳೆಲ್ಲಾ ಗುಣ. ಸೋಮನಾಥನ ಇಂಗು ೧ ತೂಕ ಅರೆದು ಆಡಿನ ಹಾಲಲ್ಲಿ ಕಲಸಿ ೨೨ ದಿನ ಕೊಳ್ಳಲು ಯೋನಿಶೂಲೆ ಗುಣ. ಬಿಳಿ ಹುಲಿಯ ಸೊಪ್ಪು, ಉತ್ತರಣೆಬೂದಿ, ಇವು ಎರಡನ್ನೂ ಹುರುಳಿಕಟ್ಟಿಂದ ಅರೆದು ಕುಡಿಯಲು ಕೆಂಪಿನ ಹೆನ್ನೆ ಗುಣ. ಪಥ್ಯ ಮೊಸರನ್ನ. ಕರಿಹತ್ತಿಯಕಾಯ ರಸ, ನಿಂಬೇಹುಳಿ, ಇವು ಸಮಾನಂಗೊಂಡು ಸಕ್ಕರೆ ಬೆರಸಿ ಕುಡಿಯಲು ಕೆಂಪಿನ ಹೆನ್ನೆ ಗುಣ. ಹಿರಿಯಮದ್ದಿನ ಬೇರಂ ಹುರುಳಿಯೊಳಗೆ ಹಾಕಿ ಬೇಯಿಸಿ ಆ ಕಟ್ಟಿನಲ್ಲಿಯೇ ಅರೆದು ಕುಡಿಯೆ ಕೆಂಪಿನ ಹೆನ್ನೆ ಗುಣ. ಪಥ್ಯ ಹುರುಳಿಕಟ್ಟು. ಹುರುಳಿಯ ಸೊಪ್ಪಂ ಹಾಲಲ್ಲಿಯಾಗಲೀ ಅಕ್ಕಿಗಚ್ಚಿನಲ್ಲಾಗಲೀ

ಅರೆದು ಕೊಳ್ಳಲು ಹೆನ್ನೆ ಗುಣ. ಚಿತ್ರಮೂಲದ ಸೊಪ್ಪನು ಅವರೆಯನು ಕೂಡ ಬೇಯಿಸಿ ಇರಿಸಿಕೊಂಡು ಬೆಳಗಾಗಿ ಉದಯದಲ್ಲಿ ಒಂದು ಸೇರು ರಸವಂ ಕುಡಿದು ಆ ಅವರೆ ಗುಗ್ಗರಿಯ ಮೆಲ್ಲಲು ಎಲ್ಲಾ ಬಗೆಯ ಹೆನ್ನೆ ಗುಣ. ಉತ್ತರಣೆಯ ಮೂಲವಂ ತಂದು ಬಿಸಿ ಮಾಡಿ ಯೋನಿಗೆ ಹಾಕಿ ಕಟ್ಟಲು ಗುಣ. ತ್ರಿಕಟುಕ, ಜಾಜಿ, ಅಳಲೇಕಾಯಿ, ಕರಿಬೇವು, ಜೀರಿಗೆ, ಗಜ್ಜುಗದ ತಿರುಳು, ಅಜವೋದ, ಸೈಂಧವಲವಣ ಇವಂ ಸಮಾನಂಗೊಂಡು ಚೂರ್ಣವಂ ಮಾಡಿ ಎಣ್ಣೆಯಲ್ಲಿ ಬೆರಸಿ ಕೊಳ್ಳಲು ಗುಣ. ಇದಂ ಕೊಳ್ಳೆ ಹೆಮ್ಮಕ್ಕಳಿಗೆ ಗುಣ. ನೆಲದಾಳವನು ತುಪ್ಪದಲ್ಲಿ ಕುಡಿಯೆ ಹೆನ್ನೆ ಮಾಣ್ಗುಂ. ಮಡಿವಾಳದ ಗೆಡ್ಡೆಯಂ ನಿಂಬೇಹುಳಿಯಲ್ಲಿ ಕುಡಿಯೆ ಕೆಂಪಿನ ಹೆನ್ನೆ ಬೀಳುವುದು ಸಹ ನಿಲ್ಲುವುದು. ಪಥ್ಯ ಮಜ್ಜಿಗೆ ಓಗರ. ಸೂರ್ಯಕಾಂತದ ಸೊಪ್ಪು, ಜಾಗಡೀಸೊಪ್ಪು, ಇವಂ ಹಾಲಲ್ಲಿ ಅರೆದು ಸಕ್ಕರೆ ಬೆರಸಿ ಪಂಚದಾರೆಯಲ್ಲಿ ಕೊಳ್ಳಲು ಗುಣ. ಬೆಳಡಕಿಲಬೇರಂ ಅಕ್ಕಿಗಚ್ಚಿನಲ್ಲಿ ಅರೆದು ಜೇನುತುಪ್ಪ ಬೆರಸಿ ಕೊಳ್ಳಲು ಗುಣ. ನೆಲ್ಲಿಚಟ್ಟು, ಅಳಲೇಕಾಯಿ, ಅತ್ತಿಯ ಒಳನಾರು, ಇವಂ ಸಮಾನಂಗೊಂಡು ಸಕ್ಕರೆ ಬೆರಸಿ ಕುಡಿಯೆ ಗ್ರಹಣಿಯುಂ ಹೆನ್ನೆತ್ತರುಂ ಮಾಣ್ಗುಂ. ವಿಷ್ಣುಕ್ರಾಂತಿ ಸಮೂಲವಂ ತುಳಿದು ಅರೆದು ಅದರೊಳಗೆ ಒಂದು ತೂಕ ಅಪಿನಿಮದ್ದ ತೇದು ಕುಡಿಯೆ ಹೆನ್ನೆ ಗುಣ. ಮುತ್ತುಗದ ಬೀಜವಂ ಹಾಲಲ್ಲರೆದು ಸಕ್ಕರೆ ಬೆರಸಿ ಕುಡಿಯೆ ಹೆನ್ನೆ ಗುಣ. ಸಮುದ್ರಪಾಳದ ಬೀಜ, ಬೇವಿನ ಹಗಿನು, ಇವು ಎರಡನ್ನೂ ಅರೆದು ಬತ್ತಿಗೆ ಪೂಸಿ ಈ ಬತ್ತಿಯನ್ನು ಯೋನಿಯೊಳಗೆ ಇರಿಸಿಕೊಳ್ಳಲು ಹೆನ್ನೆ ಮಾಣ್ಗುಂ. ಮಂಡೆಕೊಂಬಿನ ಅರಿಸಿನವನ್ನು ಮೇಲಣ ತೊಗಟೆಯ ತೆಗೆದು ಚೂರ್ಣವಂ ಮಾಡಿ ವಸ್ತ್ರಗಾಳಿತವ ಮಾಡಿ ಒಂದು ಸೇರು ಅಚ್ಚ ಎಳ್ಳೆಣ್ಣೆಯನ್ನು ಅರೆಸೇರು ಚೂರ್ಣವನ್ನೂ ಕಲಸಿ ಮೂರು ದಿನ ಕುಡಿಯೆ ಕೆಂಪಿನ ಹೆನ್ನೆ ಗುಣ. ಉತ್ತರಣೆಯ ಬೇರು, ಹಿಪ್ಪಲಿ, ಸಕ್ಕರೆ ಈ ಮೂರನ್ನೂ ಅಕ್ಕಿಗಚ್ಚಿನಲ್ಲಿ ಅರೆದು ಕುಡಿಯೆ ಯೋನಿರಕ್ತ ಗುಣ. ಕರಿಹತ್ತಿ ಕಾಯ ರಸ, ಸಕ್ಕರೆ, ನಿಂಬೇಹುಳಿ, ಈ ೩ನ್ನೂ ಸಮಾನವಾಗಿ ಕೊಳ್ಳಲು ೨ ಬಗೆಯ ಹೆನ್ನೆ ಗುಣ. ಪಥ್ಯ ತುಪ್ಪೋಗರ, ವೊಸರನ್ನ. ಹಾವುಮೆಕ್ಕೆಬೇರಂ ನೀರಲ್ಲಿ ಅರೆದು ಪೂಸೆ ನಾಡೀವ್ರಣ ಮೊದಲಾದುವು ಮಾಣ್ಗುಂ. ಗರ್ಭಿಣಿಯಾದ ಹೆಂಗಸು ಹೆನ್ನೆಗೆ ಹಲಸಿನ ಬೀಜ ಲನ್ನು ಅಕ್ಕಿಗಚ್ಚಿನಲ್ಲಿ ಅರೆದು ಕುಡಿಯೆ ಗರ್ಭಿಣೀಹೆನ್ನೆ ಮಾಣ್ಗುಂ. ನೆಲ್ಲಿಕಾಯ ಬೀಜವಂ ಅಕ್ಕಿಗಚ್ಚಿನಿಂದ ಕುಡಿಯೆ ಗರ್ಭಿಣಿಯ ಹೆನ್ನೆತ್ತರು ಕೆಡುಗುಂ. ನೆಲ್ಲೀಬೇರು, ಬೇವಿನ ತಿಗಡು ಸಮಾನಂಗೊಂಡು ಸುಟ್ಟು ಬೂದಿಯಂ ಮಾಡಿ ಎಮ್ಮೆಹಾಲಲ್ಲಿ ಕುಡಿಯೆ ಬಸುರಾದವರ ಹೆನ್ನೆ ಮಾಣ್ಗುಂ. ಕಿರಿನೆಲ್ಲಿಯ ಸೊಪ್ಪು, ಕೊಳಕೊಳಕೆಸೊಪ್ಪು, ಹಾಲಂಗೊಳಲೇಸೊಪ್ಪು, ಇಷ್ಟು ಸೊಪ್ಪನ್ನು ಸಮಾನಂಗೊಂಡು ಅಕ್ಕಿಗಚ್ಚಿನಲ್ಲಿ ರಾಯಪುರಿ ಸಕ್ಕರೆ, ತುಪ್ಪದಲ್ಲಿ ಮೆಲ್ಲಲು ಗರ್ಭ ಕಟ್ಟುವುದು. ಮಯೂರಶಿಖಿಯಂ, ಲಕ್ಷ್ಮಿಯ ಬೇರಂ ಹಾಲಲ್ಲಿ ಅರೆದು ತುಪ್ಪದಲ್ಲಿ ಕುಡಿಯೆ ಗರ್ಭ ಕಟ್ಟುವುದು. ಮಾದಳದ ಬೀಜವಂ ಆಡಿನ ಹಾಲಲ್ಲಿಯಾಗಲೀ ಆಕಳ ಹಾಲಲ್ಲಿಯಾಗಲೀ ಅರೆದು ಕುಡಿಯೆ ಗರ್ಭಮಕ್ಕುಂ. ಮುತ್ತಗದ ಹನಿಸು, ಇಂಗುಳದ ತಿಗಡನ್ನು ನೀರಲ್ಲಿ ಅರೆದು ನುಂಗಲು ಮೂರುಮಾಸದೊಳು ಗರ್ಭಮಕ್ಕುಂ. ಪಾದರಿ ಬಡಗ ಹರಿದ ಬೇರಂ ಹಾಲಲ್ಲಿ ಸಣ್ಣನಾಗಿ ಅರೆದು ಕುಡಿಯೆ ಬಂಜೆಗೆ

ಗರ್ಭಮಕ್ಕುಂ. ಇದಂ ಮೂರು ಬಾರಿ ಮುಟ್ಟು ಬಂದಾಗಲೂ ಮಿಂದು ಆ ದಿನ ಆದಿಯಾಗಿ ಮೂರು ಮೂರು ದಿನ ಕೊಳ್ಳಲು ಗರ್ಭಮಕ್ಕುಂ. ತ್ರಿಕಟುಕ, ಭಾರಂಗಿ, ಬೆಲ್ಲವತ್ತದ ತಿರುಳು, ಇವಂ ಸಮಾನಂಗೊಂಡು ಅರೆದು ತುಪ್ಪದಿಂದ ಕಲಸಿ ಕುಡಿಯೆ ರಕ್ತಶೂಲೆ ಕೆಟ್ಟು ಗರ್ಭಮಕ್ಕುಂ, ಪುಷ್ಪವತಿಯಕ್ಕುಂ. ಮಡಿವಾಳದ ಗೆಡ್ಡೆಯಂ ತಂದು ಚೂರ್ಣವಂ ಮಾಡಿ ಒಂದು ಮಾನ ಹಸುವಿನ ಹಾಲಲ್ಲಿ ಕದಡಿ ಮೂರು ದಿನ ಕುಡಿಯೆ ಗರ್ಭಮಕ್ಕುಂ. ಮುಯೂರಶಿಖಿಯಂ ತಂದು ಒಂದೇವರ್ಣದ ಹಸುವಿನ ಹಾಲಲ್ಲಿ ಕದಡಿ ಮೂರು ದಿನ ಕುಡಿಯೆ ಗರ್ಭಮಕ್ಕುಂ. ಮಡಿವಾಗಲದ ಬೇರಂ ಮುಟ್ಟುನೀರ ಮಿಂದ ದಿನ ಹಳೇ ನೀರಿಂದ ಕೊಳ್ಳಲು ಗರ್ಭಮಕ್ಕುಂ. ಕೊಡಸಿಗನ ಬೇರನ್ನು ಹಿಟ್ಟು ಇಡಿದು ತುಪ್ಪದಿಂದ ಮೆಲ್ಲಲು ಹುಳುಶೂಲೆ ಗುಣವಾಗಿ ಗರ್ಭಮಕ್ಕುಂ. ನೆಗ್ಗಿಲಬೇರು, ನೆಲಗುಳ್ಳದ ಬೇರು, ಲೊಕ್ಕಿಬೇರು, ಈ ಮೂರು ಬಗೆ ಜೇರಂ ಸಮಾನಂಗೊಂಡು ಹಸಿಹಾಲಲ್ಲಿ ಅರೆದು ಕಾಲು ಮಂಡಲ ಸೇವಿಸೆ ಗರ್ಭ ನಿಲ್ಲುವುದು. ಪಥ್ಯ ಹಾಲುಅನ್ನ. ವಿಷ್ಣುಕ್ರಾಂತಿಬೇರಂ ಅಂಗಲೇಪನಂ ಗೈಯ್ಯೆ ಗರ್ಭಮಕ್ಕುಂ. ಅಂಗುರದ ಬೇರಂ ಹಾಲಲ್ಲಿ ಅರೆದು ಕುಡಿಯೆ ಗರ್ಭಮಕ್ಕುಂ. ಮುತ್ತುಗದ ಬೀಜ ಇದಂ ಜೇನುತುಪ್ಪದಿಂದ ಅರೆದು ಕುಡಿಯೆ ಗರ್ಭಮಕ್ಕುಂ.

ಸೂತಕ ಕಟ್ಟು ಗುಣವಾಗಿ ಮಕ್ಕಳಾಗುವುದಕ್ಕೆ :—ಚುಚಲಿ ಸೊಪ್ಪಂ ತಂದು ನೀರಲ್ಲಿ ತುಳಿದು ಸೊಲ್ಲಗೆ ರಸವಂ ಸೂತಕವಾದಾಗ ಮೂರು ಸೂತಕದಲ್ಲಿ ಕೊಡಲು ಗುಣ. ಪಥ್ಯ ಹಾಲುಅನ್ನ. ಮಕ್ಕಳಾಗುವುದು. ಜೋನಗಾರೆಬೇರಂ ತುಪ್ಪದಿಂದ ಅರೆದು ನುಂಗಲು ಮುಟ್ಟುಕಟ್ಟು ಗುಣವಾಗುವುದು. ಸಮುದ್ರಪಾಳದ ಬೀಜ, ಹಿಪ್ಪಲಿ, ಈ ಎರಡನ್ನೂ ಅಂಬಿಲದಲ್ಲಿ ಅರೆದು ಕಲಸಿ ಬತ್ತಿಗೆ ಪೂಸಿ ಆ ಬತ್ತಿಯನ್ನು ಯೋನಿಗಿಕ್ಕಲು ಎಂತಪ್ಪ ಶೂಲೆ ಗುಣ. ನಾಲ್ವೆರಳು ಪುಳಿಯನ್ನು ಹಾಲಲ್ಲಿ ಅರೆದು ಕುಡಿಯೆ ಕಟಿಶೂಲೆ ಗುಣ. ಬಜೆಯನ್ನು ಹಸುವಿನ ಹಾಲಲ್ಲಿ ಅರೆದು ಕೊಡುವುದು. ವಾಂತಿ ಐದು ಬಾರಿ ಆದ ಮೇಲೆ ಅಲ್ಪವಾಗಿ ಹಾಲಂ ಕುಡಿಯ ಕೊಡುವುದು. ಪಥ್ಯ ಹಾಲುಅನ್ನ. ಹುಳು ಸತ್ತು ಮುಟ್ಟು ಕಟ್ಟು ಗುಣ.

ಗರ್ಭಿಣೀಜ್ವರಕ್ಕೆ :—ಕಟುಕರೋಹಿಣಿಯ ಪುಡಿಮಾಡಿ ಎಣ್ಣೆಯೊಳಗೆ ಹಾಕಿ ಕಾಸಿ ಶರೀರ ಪೂಸಿ ಕಣ್ಣಿಗೆ ಹಚ್ಚಿ ಬಿಸಿನೀರ ಎರೆದು ಹೆಸರುಕಟ್ಟು ಓಗರವನಿಕ್ಕಿ ಸರತಿ ಪ್ರಯೋಗವ ಮಾಡುವುದು. ಜ್ವರ ಬಿಡುವುದು.

ಗರ್ಭಿಣಿಯಾದವಳ ಬಸಿರುಬೇನೆಗೆ :—ಸುಗಂಧಿಯ ಬೇರು, ಗುರುಗುಂಜಿಯ ಬೇರು, ಅಳಲೇಕಾಯ ಚೂರ್ಣ, ಇವು ಎಲ್ಲವನ್ನೂ ಸಮಾನಂಗೊಂಡು ಬೆಲ್ಲದಲ್ಲಿ ಇಕ್ಕಿ ಮೆಲ್ಲಲು ಗರ್ಭಿಣಿಯ ಬಸಿರುಬೇನೆ ಮಾಣ್ಗುಂ.

ಬಾಣಂತಿಜ್ವರಕ್ಕೆ :—ಶುಂಠಿ, ಭದ್ರಮುಸ್ತೆ, ಇದರೊಳು ಸಕ್ಕರೆಯನಿಕ್ಕಿ ಕುಡಿಯೆ ಬಾಣಂತಿಯರ ಜ್ವರ ಮಾಣ್ಗುಂ. ಯಷ್ಟಿಮಧುಕ, ದ್ರಾಕ್ಷೆಹಣ್ಣು, ಇವಂ ಹಸುವಿನ

ಹಾಲು ಬಿಟ್ಟು ಅರೆದು ಹಾಲಲ್ಲಿ ಕಾಸಿ ಹಸುವಿನ ತುಪ್ಪದಲ್ಲಿ ಕುಡಿಯೆ ಹೃದಯಶೂಲೆ, ಯೋನಿಶೂಲೆ, ಬಸುರಿಶೂಲೆ, ಜ್ವರ, ವಾತಗುಲ್ಮ, ಬಾಣಂತಿಯರ ಎಲ್ಲಾ ರೋಗಗಳೂ ಮಾಣುವುವು. ಮೂರು ದಿನ ತೆಗೆದುಕೊಳ್ಳುವುದು.

ಪ್ರಸವವಾಗುವುದಕ್ಕೆ :—ತೋಟಿಯ ಬಡಗ ಹರಿದ ಬೇರಂ ನೀರಲ್ಲಿ ಅರೆದು ಯೋನಿಯಿಂದಿಳಿಯ ಪೂಸಲು ಪ್ರಸವಮಾಗುವುದು. ಹಾವುಮೆಕ್ಕೆಯ ಬೇರಂ ನೀರಲ್ಲಿ ಅರೆದು ಯೋನಿಯಿಂದಿಳಿಯ ಪೂಸೆ ಪ್ರಸವಮಕ್ಕುಂ. ಕಾಳನಕಟ್ಟಿಗೆಬೀಜವಂ ಹಳೇನೀರಲ್ಲಿ ಅರೆದು ಕುಡಿಯೆ ಅತಿಬೇಗ ಪ್ರಸವಮಕ್ಕುಂ. ಕೊಳವಳಿಕೆ ಬೇರ ನೋನದಲ್ಲಿ ಹೋಗಿ ಹಿಂದು ಮುಂದಾಗಿ ಕಿತ್ತು ತಂದು ಆ ಮನೆಗೆ ಸೂರಿಗೆ ಕೊನೆ ಮುಂದಾಗಿ ಸೆಕ್ಕಲು ಪ್ರಸವಮಕ್ಕುಂ.

ಮಾಸು ಬೀಳುವುದಕ್ಕೆ :—ಜೀರಿಗೆಯನ್ನು ಅರೆದು ಅಂಬಿಲದಲ್ಲಿ ಕದಡಿ ಕುಡಿಯೆ ಮಾಸು ಬೀಳ್ಗುಂ. ಮಗ್ಗಾರೆ ಹೂವಂ ಅರೆದು ಹಾಲಲ್ಲಿ ಅಟ್ಟು ಕುಡಿಯೆ ಮಾಸು ಬೀಳುವುದು. ಬಿದುರ ಸೊಪ್ಪು ಅರೆದು ನೀರಲ್ಲಿ ಕದಡಿ ಕುಡಿಯಲು ಮಾಸು ಬೀಳ್ಗುಂ. ಕೊಮ್ಮೆ ಬೇರಂ ನೀರಲ್ಲಿ ಅರೆದು ಕುಡಿಯೆ ಮಾಸು ಬೀಳ್ಗುಂ. ಹಾಲಿವಾಣದ ಎಲೆಯಂ ಅಂಬಿಲದಲ್ಲಿ ಅರೆದು ಕುಡಿಯೆ ಮಾಸು ಬೀಳ್ಗುಂ.

ಹೊಟ್ಟೆಯಲ್ಲಿ ಸತ್ತ ಕೂಸು ಬೀಳುವುದಕ್ಕೆ :—ಉತ್ತರಣೆಬೇರನರೆದು ಯೋನಿಗಿಕ್ಕಿ ಕಟ್ಟಲು ಬೀಳ್ಗುಂ. ನಡೆಯಲಾರದವಳಿಗೆ—ಗೋಳಿಗೆಕುದುರೆಯ ಲದ್ದಿಯ ರಸದಲ್ಲಿ ಶುಂಠಿಯ ಅರೆದು ಯೋನಿಗಿಕ್ಕಲು ಕೂಸು ಬೀಳ್ಗುಂ. ಸಣಬಿನ ಬೀಜವಂ ನೀರಲ್ಲಿ ಅರೆದು ಕುಡಿಯೆ ಹೊಟ್ಟೆಯೊಳಗಿನ ಕೂಸು ಬೀಳ್ಗುಂ.

ಮೊಲೆಹಾಲು ಬರುವುದಕ್ಕೆ :—ಕರಿಜೀರಿಗೆಯನ್ನು ಹಾಲಲ್ಲಿ ಅರೆದು ಕುಡಿಯೆ ಮೊಲೆ ಹಾಲು ಬರುವುದು. ಆಡಿನ ತುಪ್ಪವನ್ನೂ ಸಕ್ಕರೆಯನ್ನೂ ಹಾಲನ್ನೂ ಕೊಡಲು ಮೊಲೆ ಹಾಲು ಬರುವುದು.

ಮೊಲೆ ಬರುವುದಕ್ಕೆ :—ಬಜೆ, ಹೆಮ್ಮುಷ್ಟೆ, ಜಂಗಲಕೋಷ್ಠ, ಕೊಡನಾರಿಬೇರು, ಇವಂ ಬೆಣ್ಣೆಯಲ್ಲಿ ಅರೆದು ಪೂಸಲು ಸ್ತನಗಳು ಬರುವುವು. ಗಜಹಿಪ್ಪಲಿಯನು, ಅರಗು, ಬಜೆ ಸಹ ಮೊಸರು ಎಣ್ಣೆಯಲ್ಲಿ ಪೂಸಲು ಮೊಲೆ ಬರುವುದು.

ಋತುವಾಗುವುದಕ್ಕೆ :—ಎಕ್ಕೇಬೀಜ ೩ ತೂಕವಂ ಬೆಲ್ಲದಿಂದ ತಿನ್ನಲು ಋತು ವಕ್ಕುಂ. ತೆಂಗಿನಕಾಯಿ, ಬಾಳೆಹಣ್ಣು, ಬೆಲ್ಲ, ಇವಂ ಮೆಲ್ಲುವುದಕ್ಕೆ ಕೊಟ್ಟು ಮಧು ರಾಹಾರವ ಊಟಕ್ಕೆ ಇಕ್ಕಿ ಕರಿಹುರುಳಿಯ ಬೇಯಹಾಕಿ ಅದರೊಳಗೆ ೧೫ ಗೇರ ಹರಳ ಕತ್ತರಿಸಿ ಹಾಕಿ ಚೆನ್ನಾಗಿ ಬೇಯಿಸಿ ಎಸರ ಬಸಿದುಕೊಂಡು ಎರಡು ಸೇರು ಉದಯ ವಾದಾಗ ಕೊಟ್ಟು ಮಧ್ಯಾಹ್ನಕ್ಕೆ ಹುರುಳಿಕಟ್ಟು ಅನ್ನವ ಪಥ್ಯವನಿಕ್ಕುವುದು. ಈ ಪ್ರಕಾರದಲ್ಲಿ ಎಂಟು ದಿನವಾದ ಮೇಲೆ ತಿರುಗಿ ಎಕ್ಕೇಹೂವ ಹಾಲು ಸಕ್ಕರೆ ಸಹ ಬೆರಸಿ ಕೊಳ್ಳಲು ಋತುವಾಗುವಳು. ಕುರುಟಿಗೆಬೇರನ್ನು ಅಂಬಿಲದಲ್ಲಿ ಕುಟ್ಟಿ ರಸವ ಹಿಂಡಿ ಕೊಂಡು ಕಷಾಯವಂ ಕಾಸಿಕೊಂಡು ಒಂದು ಸೇರು ಗೋಧಿಕಣಿಕೆ, ಒಂದು ಸೇರು

ಹಸುವಿನ ತುಪ್ಪ, ಒಂದು ಸೇರು ಕಷಾಯ ಅಟ್ಟು ಕೊಡಲು ಋತುವಾಗುವಳು. ಆಷಾಢಿಯ ಸೊಪ್ಪು, ವಡವರದ ಸೊಪ್ಪು, ಈ ಎರಡನ್ನೂ ಅರೆದು ಕಷಾಯವ ಕಾಸಿ ಹಾಲು, ಸಕ್ಕರೆ, ತುಪ್ಪ ಸಹ ಮೂರು ದಿನ ಕೊಳ್ಳಲು ಋತುವಕ್ಕುಂ. ಭೂಸರೆ, ಆಲದ ಬಿಳಲು, ಈ ಎರಡನ್ನೂ ತೆಂಗಿನಕಾಯ ಹಾಲಲ್ಲಿ ಅರೆದು ಯಾ ಆಡಿನ ಹಾಲೊಳಗಾದರೂ ಅರೆದು ಕೊಡಲು ಸೂತಕವಾಗುವಳು. ಎಕ್ಕೇಬೀಜ ೩ ತೂಕ, ಬೆಲ್ಲ ೧ ತೂಕ, ಈ ಎರಡನ್ನೂ ಅರೆದು ಕಲಸಿ ಕೊಡಲು ಸೂತಕವಾಗುವಳು. ಎಕ್ಕೇಹೂವಂ ಚೂರ್ಣವಂ ಮಾಡಿ ಬೆಲ್ಲದಿ ಮೆಲ್ಲಲು ಸೂತಕಮಕ್ಕು. ಗಜ್ಜುಗದ ತಿರುಳು, ನೆಲ್ಲಿಯ ಹೂವು, ಇವ ಹಾಲಲ್ಲರೆದು ಕುಡಿಯೆ ಪುಷ್ಪವತಿಯಕ್ಕು, ನೇರಿಲಹೂವಂ ಹಾಲಲ್ಲಿ ಅರೆದು ಕುಡಿಯೆ ಪುಷ್ಪವತಿಯಕ್ಕುಂ.

ಮೊಲೆಹಾಲು ಬರುವುದಕ್ಕೆ :—ತೋಟಚಿಗುರು, ಅಂತರಗಂಗೆ, ಜೀರಿಗೆ, ಹಿಪ್ಪಲಿಯಂ ಅರೆದು ಸಕ್ಕರೆ ಬೆರಸಿ ಹಸಿ ಹಾಲಲ್ಲಿ ಕಲ್ಕವ ಕೊಡುವುದು. ಸ್ತನಗಳಿಗೆ ಗಜಹಿಪ್ಪಲಿಯ ನೀರಲ್ಲಿ ತೇದು ಲೇಪವ ಮಾಡುವುದು.

ಹೆಮ್ಮಕ್ಕಳ ನಂಜಿಗೆ:—ಕಿನ್ನರಳಿಯ ಮರದ ಒಳನಾರಂ ಹಳೇನೀರಲ್ಲಿ ಕುಟ್ಟಿ ಹಿಂಡಿ ಜೀರಿಗೆ ಅರೆದು ಕುಡಿಯಲು ನಂಜು ಹರ. ನವಣೆಕೂಳು, ಕೊಳೆ ಭತ್ತದ ಅಕ್ಕಿ ಅನ್ನ ಪಥ್ಯ.

ಮಕ್ಕಳು ಬೆಚ್ಚುವುದಕ್ಕೆ :—ಬಜೆ, ಬೆಳ್ಳುಳ್ಳಿ, ಇವು ಎರಡನ್ನೂ ಗೋಮೂತ್ರ ದಿಂದ ಅರೆದು ತೊಟ್ಟಿಲಿಗೆ ಪೂಸಲು ಬೆಚ್ಚುವುದು, ಅಳುವುದು ಎಲ್ಲಾ ನಿಲ್ಲುವುದು. ಮತ್ತಂ ಬಜೆ, ಹಿಪ್ಪಲಿ, ಶುಂಠಿ, ಸಜ್ಜರಸ, ಇವಂ ಸಮಾನಂಗೊಂಡು ಗೋಮೂತ್ರದಿಂದ ಕಲಸಿ ಧೂಪವಿಕ್ಕಲು ಬೆಚ್ಚುವುದು, ಅಳುವುದು ಎಲ್ಲಾ ನಿಲ್ಲುವುದು.

ಮಕ್ಕಳು ಉಚ್ಚುವುದಕ್ಕೆ :—ತಾರೇಕಾಯಂ ಸಕ್ಕರೆಯನ್ನು ಕೂಡಿಸಿ ನೀರಲ್ಲಿ ಅರೆದು ಕುಡಿಸಲು ಉಚ್ಚುವುದು ನಿಲ್ಲುವುದು. ಎಳ ಸೀಗೆ, ಅಕ್ಕಿ, ಗೋರೋಚಿಸೊಪ್ಪಂ ತಂದು ನೊಲೆಹಾಲಿಂದ ಅರೆದು ಸರ್ವಾಂಗಲೇಪವಂ ಮಾಡುವುದು. ಕತ್ತಿಗಾಲದ ಬೇರಂ ತಂದು ಮೊಲೆಹಾಲಿಂದ ತೇದು ಅರೆಅಳಲೆಯಷ್ಟು ಎರೆಯಲು ವಾಂತಿಯಕ್ಕುಂ. ಇದು ದಕ್ಕಿದರೂ ಮಲದಲ್ಲಿ ಒಂದು ಸಾರಿ ಎರಡು ಸಾರಿ ವಿರೇಕಮಕ್ಕುಂ, ಶೀಘ್ರದಿ ಗುಣಮಕ್ಕುಂ. ಹರಳೆಣ್ಣೆ, ಗಜ್ಜುಗದ ಕುಡಿ, ನೀರುಳ್ಳಿ, ಇವಂ ಕಾಸಿ ಕೊಡಲು ಗುಣ.

ಮಕ್ಕಳ ಕೋವೆಗೆ :—ಮಯೂರಶಿಖಿಯನ್ನು ನೀರಲ್ಲಿ ತೇದು ಎರೆಯೆ ಗುಣ. ಕರಿ ಹಾಗಲಸೊಪ್ಪಿನ ರಸವನ್ನು ಎರೆಯೆ ಗುಣ. ನೆಲಾವರೆಬೇರಂ ಹಾಲಲ್ಲಿ ಅರೆದು ಕುಡಿಯೆ ಮಾಣ್ಗುಂ.

ಮಕ್ಕಳಿಗೆ ಗುಳಿದೋಷವಾದರೆ :—ಗರಿಕಟ್ಟೆನಿಡುವಂ ಶನಿವಾರ ಗಂಧಾಕ್ಷತೆ ವೀಳ್ಯ ದಿಂದ ಅರ್ಚಿಸಿ ಆದಿತ್ಯವಾರ ತಂದು ಆ ಮಗುವಿಗೆ, ತಾಯಿಗೆ, ರಕ್ಷೆಯ ಕಟ್ಟಲು, ಗುಳಿ ದೋಷ ಮಾಣ್ಗುಂ. ಮಕ್ಕಳು ಬೆಚ್ಚುತ್ತ, ಅಳುತ್ತ, ಉಚ್ಚರಿಸುತ್ತ ಇದ್ದ ಜ್ವರಕ್ಕೆ— ನಿಡುವಿನ ಮೇಲಿನ ಹಾವಿನ ಹರೆಯ ತಂದು ಇರಿಸಿಕೊಂಡಿದ್ದು ಯಂತ್ರದೊಳಗೆ ಒತಿ

ಹರೆಯನಿಕ್ಕಿ ಕಟ್ಟಲು ಜ್ವರ ಮಾಣ್ಗುಂ. ಮತ್ತಂ ಒಂದು ಹರವಿ ಉದಕದಲ್ಲಿ ಒಂದು ಹಿಡಿ ಹುರಗನ ಸೊಪ್ಪ ಹಾಕಿ ಕಾಸಿ ಮೈಯಲ್ಲಿ ಎರೆಯಲು ಎಲ್ಲಾ ಮಾಣ್ಗುಂ.

ಮಕ್ಕಳು ವ್ಯಾಧಿಯಾದುದಕ್ಕೆ :—ತುಪ್ಪದ ಗಣಿಕೆಯನು, ಬೆಲ್ಲಗಣಿಕೆಯನು ನೋಡಿ ಬಂದು ಶನಿವಾರ ಅರ್ಚನೆಯಂ ಮಾಡಿ ಆದಿತ್ಯವಾರ ಮೋನೆದಲ್ಲಿ ಎರಡು ಸೊಪ್ಪನ್ನೂ ತಂದು ಸಮಾನಂಗೊಂಡು ಕೈಯ್ಯಲ್ಲಿ ಹಿಸುಕಿ ಇಬ್ಬೆರಳು ರಸವ ಅಳಲೆಯಲ್ಲಿ ಹಿಂಡಿಕೊಂಡು ಅದರ ಕೂಡೆ ೧ ತೂಕ ಜೀರಿಗೆಯನ್ನು ಹಾಕಿ ಎರೆಯುವುದು. ಈ ಮೇರೆ ಯಲ್ಲಿ ದಿನ ಬಿಟ್ಟು ದಿನ ಮೂರು ವೇಳೆಯಲ್ಲಿ ಎರೆಯಲು ಮಲ ಸಡಿಲಾಗಿ ಈ ವ್ಯಾಧಿಯು ಗುಣವಾಗುವುದು,

ಬಾಲಕರ ಹಸಿಮಕ್ಕಳ ಅತಿಸಾರಕ್ಕೆ :—ಕುಸುಬೆಎಣ್ಣೆ, ತುಪ್ಪ ಇವಂ ಕುಡಿಸೆ ಅತಿಸಾರ ಮಾಣ್ಗುಂ.

ಬಾಲಕರ ಛರ್ದಿಗೆ :—ತಾರೇಕಾಯಿ, ಸಕ್ಕರೆ, ಬಿಸಿನೀರಲ್ಲಿ ಕುಡಿಸಲು ಬಾಲಕರ ಛರ್ದಿ ಮಾಣ್ಗುಂ.

ಸಣ್ಣವರ ಜ್ವರ, ಕೆಮ್ಮು, ಉಚ್ಚುವುದಕ್ಕೆ, ಓಕರಿಕೆಗೆ :—ಕರ್ಕಾಟಕಶೃಂಗಿ, ಹಿಪ್ಪಲಿ, ಅತಿಬಜೆ, ಭದ್ರಮುಸ್ತೆ, ಇವಂ ತೇದು ಮೊಲೆಹಾಲಲ್ಲಿ ಜೇನುತುಪ್ಪದಲ್ಲಿ ಕುಡಿಸೆ ಜ್ವರ, ಅತಿಸಾರ, ಓಕರಿಕೆ, ಕೆಮ್ಮು ಮಾಣ್ಗುಂ.

ಗರ್ಭಿಣೀಹೆಂಗಸಿನ ಶೂಲೆಗೆ :—ತಿಂಗಳು ತಿಂಗಳಿಗೆ ಶೂಲೆಯಾದರೆ ನೊರೆಹಾಲು, ಮೊಸರು, ಶುಂಠಿ, ಮೆಣಸು, ಇವಂ ಸಣ್ಣನಾಗಿ ಅರೆದು ನೊರೆಹಾಲು, ಮೊಸರು ಸಹ ಕುಡಿಯಲು ತಿಂಗಳು ತಿಂಗಳಿಗೆ ಬರುವ ಶೂಲೆ ಮಾಣ್ಗುಂ.

ಮುಟ್ಟುಕಟ್ಟಿಗೆ :—ಬೇವಿನ ಸೊಪ್ಪಿನ ಎಲೆಯ ರಸ, ಬೆಳ್ಳುಳ್ಳಿಗೆಡ್ಡೆ ರಸ, ಈ ಎರಡಕ್ಕೂ ಸರಿಯಾಗಿ ಎಣ್ಣೆಯನ್ನು ಕೂಡಿ ಮೊದಲು ಜೇನುತುಪ್ಪವಂ ಕೂಡಿಸಿ ಆಮೇಲೆ ಈ ಬಗೆ ಔಷಧವಂ ಕೊಡಲು ಹುಳು ಮೂತ್ರದಲ್ಲಿ ಬೀಳುವುದು. ಮೆಣಸನ್ನು ಬಿಳೀ ಅರಿವೆಯಲ್ಲಿ ಕಟ್ಟಿ ಆ ಅರುವೆ ಸಹ ದೀಪದ ಕುಡಿಯಲ್ಲಿ ಸುಟ್ಟು ನೀರಲ್ಲಿ ಅರೆದು ಕೊಳ್ಳಲು ಮುಟ್ಟು ಕಟ್ಟು ಗುಣವಾಗುವುದು.

ಗರ್ಭನಾಶನಕ್ಕೆ :—ತುತ್ತವನ್ನು ಕೆರಿಹುರುಳಿಯ ರಸದಿಂದ ಕುಡಿಯಲು ಗರ್ಭನಾಶ. ನೊಲ್ಲಸೊಪ್ಪಿನ ರಸವ ಮೂರು ತಿಂಗಳಾದರೆ ೧ ತೂಕ, ಆರು ತಿಂಗಳಾದರೆ ೨ ತೂಕ, ಈ ಮೇರೆಯಲ್ಲಿ ಕೊಡಲು ನಾಶ. ಕಲ್ಲುಕರಗನ ಬೇರು ಹಾಲಲ್ಲಿ ಅರೆದು ಕುಡಿಯಲು ನಾಶ. ಶುಂಠಿ, ಸೈಂಧವಲವಣ, ಗೋಳಿಗೆಕುದುರೆಲದ್ದಿ, ಇವಂ ನೀರಲ್ಲಿ ಅರೆದು ಕುಡಿಯಲು ನಾಶ. ಬ್ರಾಹ್ಮೀರಸವನ್ನು ಆಡಿನ ತುಪ್ಪದಿಂದ ಕೊಳ್ಳಲು ನಾಶ. ಬೇಳಡಕಲ ಬೇರಂ ಸಿದ್ಧದಿನದಲ್ಲಿ ತಂದು ಅರೆದು ಮಜ್ಜಿಗೆಯಲ್ಲಿ ಕುಡಿಯಲು ನಾಶ. ಲೊಕ್ಕಿಬೇರಂ ಅಂಬಿಲದಲ್ಲಿ ಅರೆದು ಕುಡಿಯಲು ನಾಶ. ಮುತ್ತುಗದ ಬೀಜವಂ ತುಪ್ಪದಿಂದ ಅರೆದು

ಕುಡಿಯಲು ನಾಶ. ಹಳೇಸುಣ್ಣ, ಸಾಸುವೆ, ಇವಂ ತುಪ್ಪದಲ್ಲಿ ಅರೆದು ಕುಡಿಯಲು ನಾಶ. ಒಂದುಸೇರು ತುಗರಿ, ಒಂದು ಸೇರು ಸಣಬಿನ ಬೀಜ, ಇವಂ ಎಣ್ಣೆಯಲ್ಲಿ ಅರೆದು ಯೋನಿಗೆ ಪೂಸುವುದು. ಸೂತಕವಾಗಿ ಮಿಂದ ದಿನ ಸೊಲ್ಲಗೆ ಬೆಲ್ಲಗಣಿಕೆ ರಸ, ಸೊಲ್ಲಗೆ ಎಣ್ಣೆ ಎರಡನ್ನೂ ಕೂಡ ಕುಡಿಯಲು ಬಸಿರು ನಿಲ್ಲುವುದು. ಮುತ್ತುಗಬೀಜವಂ ಚೆನ್ನಾಗಿ ತೇದು ಲಿಂಗಲೇಪನವ ಮಾಡಿಕೊಂಡು ಸ್ತ್ರೀ ಸಂಭೋಗವ ಮಾಡಲು ಗರ್ಭನಾಶನ. ಕಾಚ, ಹಿಪ್ಪಲಿ, ವಿಳಂಗ, ಸೈಂಧವಲವಣ, ಇವಂ ನೀರಲ್ಲಿ ಅರೆದು ಕುಡಿಯಲು ನಾಶ. ಸಣಬಿನ ಬೀಜವಂ ಅರೆದು ಕರಿಹುರುಳಿಯ ಕಟ್ಟಿನಲ್ಲಿ ಕುಡಿಯಲು ನಾಶ. ಅರಿದಳವನ್ನು ಹಾಲಲ್ಲಿ ಅರೆದು ಕೊಳ್ಳಲು ನಾಶ. ದೊಡ್ಡ ಈಚಲಹೂವಂ ನೀರಲ್ಲಿ ಅರೆದು ಒಂದು ಪಟಲ ಕುಡಿಯಲು ನಾಶ. ಎಲವದ ಹಗಿನಂ ಹಸುವಿನ ಹಾಲಲ್ಲಿ ಅರೆದು ಕುಡಿಯಲು ನಾಶ. ಮುತ್ತುಗದ ಬೀಜವಂ ನೀರಲ್ಲಿ ಅರೆದು ಕುಡಿಯಲು ನಾಶಂ. ಸಣಬಿನ ಬೀಜವಂ ನೀರಲ್ಲಿ ಅರೆದು ಕುಡಿಯಲು ನಾಶ.

ಸೂತಕ ಕೆಡುವುದಕ್ಕೆ :—ಬೆಳಕಿಡಲ ಬೇರಂ ಅಂಬಿಲದಲ್ಲಿ ಅರೆದು ಕುಡಿಯೆ ಋತು ಕೆಡುವುದು. ಅರಳಿಯ ಮುಗುಳಂ ಅರೆದು ಹುಳಿಮಜ್ಜಿಗೆಯಲ್ಲಿ ಕೊಳ್ಳಲು ಋತು ಕೆಡುವುದು. ಮುತ್ತುಗದ ಬೀಜವಂ ಜೇನುತುಪ್ಪದಿಂದ ಅರೆದು ಸೂತಕವಾದಾಗ ಮೂರು ದಿನ ಕುಡಿಯಲು ಸೂತಕ ಕೆಡುವುದು. ಅರಗು, ಅರಳಿಯ ಮುಗುಳು, ಈ ಎರಡನ್ನೂ ಕೂಡಿ ಹುಳಿಮಜ್ಜಿಗೆಯಲ್ಲಿ ಅರೆದು ಹುಳಿಮಜ್ಜಿಗೆಯಲ್ಲಿ ಕದಡಿ ಕುಡಿಯಲು ಸೂತಕ ಕೆಡುವುದು.

ಬಸಿರಾದವರಿಗೆ ಕೆಂಬರುವಿಗೆ:—ನೆಲಮಾವಿನ ಸೊಪ್ಪಂ ತಂದು ನೀರಲ್ಲಿ ಕುಟ್ಟಿ ಶೋಧಿಸಿಕೊಂಡು ಅರೆಸೊಲ್ಲಗೆ ರಸವನ್ನು ಮೂರು ದಿನ ಕುಡಿಯಲು ಗರ್ಭಿಣಿಯರ ಕೆಂಬರು ಮಾಣ್ಗುಂ. ಪಥ್ಯ ಹಾಲುಅನ್ನ. ಗೋರೋಚನವಂ ಹಾಲಲ್ಲಾಗಲೀ ಬೆಣ್ಣೆಯಲ್ಲಾಗಲೀ ಕೊಡುವುದು. ಕುಂಕುಮದ ಹೂವಂ ಹಸುವಿನ ಹಸಿಹಾಲಲ್ಲಿ ಅರೆದು ಕುಡಿಯಲು ಗರ್ಭಿಣಿಯರ ಕೆಂಬರುವು ಮಾಣ್ಗುಂ. ಸುಖಪ್ರಸವವಕ್ಕುಂ.

ಕೆಮ್ಮಿಗೆ :—ಹೆಗ್ಗುಳ್ಳದ ಹಣ್ಣಿನ ರಸದಿಂದ ಆವರಿಕೆತಿಗಡಂ ಅರೆದು ಮೆಲ್ಲಲು ಕೆಮ್ಮು ಮಾಣ್ಗುಂ. ಮೂರು ದಿನ ಮೆಲ್ಲುವುದು. ಶುಂಠಿ, ಹಿಪ್ಪಲಿ, ಮೆಣಸು, ಅಳಲೇಕಾಯಿ, ತಾರೇಕಾಯಿ, ನೆಲ್ಲಿಚಟ್ಟು, ಇವಂ ಸಮಾನಂಗೊಂಡು ಚೂರ್ಣವಂ ಮಾಡಿ ಜೇನುತುಪ್ಪದಿಂದ ಕಲಸಿ ನೀರಿಂದ ಕುಡಿಯಲು ಮಕ್ಕಳ ಕೆಮ್ಮು ಮೊದಲಾದ ಕೆಮ್ಮುಗಳು ಮಾಣುವುವು. ಗಂಡುಹೀರೆಸೊಪ್ಪಂ ತಂದು ಅಕ್ಕಿ ಸಂಗಡ ಇಡಿದು ಹಿಟ್ಟ ತೊಳಸಿ ಎಣ್ಣೆಯಲ್ಲಿ ಅದ್ದಿಕೊಂಡು ಮೆಲ್ಲಲು ಗೂರು, ಕೆಮ್ಮು, ಶ್ವಾಸ, ಕಾಸ, ಮಾಣ್ಗುಂ. ಲೋಳಿಸರದ ಸಿಪ್ಪೆಯ ತೆಗೆದು ಬಿಸಿ ಮಾಡಿ ಹಿಂಡಿಕೊಂಡು ಅಲ್ಪ ಒಳ್ಳೆ ಎಣ್ಣೆ ಬಿಟ್ಟು ಹಳೆಯ ಬೆಲ್ಲವ ಹಾಕಿ ಎರೆಯಲು ಕೆಮ್ಮು ಮಾಣ್ಗುಂ. ಕಲ್ಲುಪ್ಪು ಒಂದು ಸೇರು, ಎಕ್ಕೆ ಹಣ್ಣೆಲೆ ೨೫ ಒಣಗಿಸಿ ಇವಂ ಚೂರ್ಣವಂ ಮಾಡಿ ನಾಲ್ಕು ಬೆರಳಲ್ಲಿ ಬಂದಷ್ಟು ಬಿಸಿನೀರಲ್ಲಾಗಲೀ ಜೇನುತುಪ್ಪದಲ್ಲಾಗಲೀ ಕಲಸಿ ಮೆಲ್ಲಲು ಕೆಮ್ಮು ಮಾಣ್ಗುಂ. ನೂರು ಒಗರಡಕೆಯನ್ನು ಎರಡು ಹೋಳಾಗಿ ಕೊಯ್ದು, ಎಂಟು ಸೊಲ್ಲಗೆ ನೀರಂ ಹೊಯ್ದು ಒಂದು

ಸೊಲ್ಲಗೆ ಆಗುವ ಹಾಗೆ ಕಾಸಿ ಬಸಿದುಕೊಂಡು ಆ ನೀರೊಳಗೆ ಐದು ಹಲ ಬೆಲ್ಲವ ಹಾಕಿ ಮೆಣಸಿನಪುಡಿಯನ್ನು ಹಾಕಿ ಮೂವತ್ತು ನಿಂಬೇಹಣ್ಣನ್ನು ಹಿಂಡಿ ಅಟ್ಟು ಇಳುಹಿ ದೇಹಶೋಧನೆಯಂ ಮಾಡಿ ಆಮಲಕಪ್ರಮಾಣ ಕೊಳ್ಳುತ್ತ ಬರಲು ಶ್ವಾಸ, ಕಾಸ, ಮಂದಾಗ್ನಿ,ಪಾಂಡು, ಕಾಮಿಲೆ, ಗುಲ್ಮ, ಪಿತ್ತ,ಅರೋಚಕ, ದಾಹ, ಕೆಮ್ಮು, ಗೂರುಉಬ್ಬಸೆ, ಮೊದಲಾದ ಸಕಲ ರೋಗ ಹರ. ಲವಣಾಮ್ಲವರ್ಜಿತ. ಮಧುರಾಹಾರ ಪಥ್ಯ. ಇದು ಕೆಮ್ಮಿಗೆ ಕೈಗಂಡದ್ದು[1].

ಪೀನಸಕ್ಕೆ :—ಅರಿದಳ, ಮಣಿಸಿಲೆ, ಇಲಿಪಾಷಾಣ, ಗೌರೀಪಾಷಾಣ, ಅರಿಸಿನ, ಕಾಡರಿಸಿನ, ಕಹಿಹೀರೇಬೀಜ, ಕಹಿಸೋರೇಬೀಜ, ಓಮ, ಬೆಳ್ಳುಳ್ಳಿಹೊಟ್ಟು, ಚಿತ್ರಮೂಲದ ತಿಗಡು, ಇವಂ ಸಮಾನಂಗೊಂಡು ಚೂರ್ಣವಂ ಮಾಡಿ ಈ ಚೂರ್ಣದಲ್ಲಿ ಹೊಗೆ ದಿನ ತಪ್ಪಿ ದಿನ ಕೊಟ್ಟು ಸಬಸಿಗೆಸೊಪ್ಪಿನ ಎಸರಲ್ಲಿ ಊಟಕ್ಕೆ ಇಕ್ಕುವುದು. ಇದಕ್ಕೆ ತೈಲ—ಗರುಗದ ರಸ, ಗುಳ್ಳದ ಹಣ್ಣಿನ ರಸ, ಉತ್ತರಣೆಸೊಪ್ಪಿನ ರಸ, ಲೋಳಿಸರರಸ, ಈ ರಸಗಳಂ ಸಮಾನಂಗೊಂಡು ಅದರ ಸಮ ಎಣ್ಣೆಯಂ ಹೊಯ್ದು ಅಟ್ಟು ನಸ್ಯಂ ಗೈಯ್ಯೆ ಪೀನಸ ಮಾಣ್ಗುಂ. ಗಂಧಕ, ಹುಲಿಯುಗುರು, ಬಜೆ, ನುಗ್ಗೆ, ತುಳಸಿ, ಇವು ಎಲ್ಲಾ ಚೂರ್ಣವಂ ಮಾಡಿ ಪದ್ಮಕ, ಎಣ್ಣೆಯನ್ನೂ ಹಾಕಿ, ಮೂತ್ರದಲ್ಲಿ ಅಟ್ಟು ನಸ್ಯವಂ ಮಾಡಲು ಪೀನಸ ಮೂಗು ನಾರದು. ಹುಳು ಸಾಯುವುದು.

ಹೊಗೆ ಸೇದುವ ಕ್ರಮ :—ರಸ ಮೂರು ದುಡ್ಡು ತೂಕ, ಸೀಸ ಎರಡು ದುಡ್ಡು ತೂಕ, ಲಕ್ಕಿಸೊಪ್ಪಿನ ರಸ, ತುಳಸೀಸೊಪ್ಪಿನ ರಸ, ಉಮ್ಮತ್ತದ ರಸ, ಇವ ಮರ್ದಿಸಿ ರಸವ ಅರುವೆಗೆ ತೊಡೆದು ಒಣಗಿಸಿ ಮೂಗಿಗೆ ಹೊಗೆಯ ಕೊಡೆ ಪೀನಸ ಮಾಣ್ಗುಂ. ಪಥ್ಯ ಸಪ್ಪೆಹಾಲು ಅನ್ನ. ಆಡಿನ ಬೆಣ್ಣೆಯನ್ನು ಹಣತೆಯಂ ಹಾಕಿ, ದೀವಿಗೆಯಂ ಹೊತ್ತಿಸಿ, ಆ ಬೆಣ್ಣೆ ಕಾದು ತುಪ್ಪವಾದರೆ ಆ ತುಪ್ಪವನ್ನು ಕರಿಕಂಬಳಿಹರುಕಿನಲ್ಲಿ ಮೂಗಿಗೆ ಹಿಂಡೆ ಪೀನಸ ಮಾಣ್ಗುಂ. ವಾಯಿವಿಳಂಗ ಗ ೧ ತೂಕ, ಯಷ್ಟಿಮಧುಕ ಗ ೧ ತೂಕ, ಕೋಷ್ಠ ಗ ೧ ತೂಕ, ಸೈಂಧವಲವಣ ಗ ೧ ತೂಕ, ದೇವದಾರು ಗ೧ ತೂಕ, ಇಷ್ಟನ್ನೂ ಚೂರ್ಣವಂ ಮಾಡಿ ವಸ್ತ್ರಗಾಳಿತವ ಮಾಡಿ ಒಂದು ಸೇರು ಗರುಗದ ರಸ, ಒಂದು ಸೇರು ಆಕಳ ತುಪ್ಪ, ಇವು ಎರಡನ್ನೂ ಕೂಡ ಹೊಯ್ದು ಈ ಚೂರ್ಣವಂ ಹಾಕಿ ತುಪ್ಪವಂ ನೆಳಲಲಟ್ಟು ಮೂಗಿಗೆ ನಸ್ಯವಂ ಮಾಡುವುದು.

ಹೊಗೆಯ ಹಾಕುವ ಕ್ರಮ :—ಇಂಗಲೀಕ ೧ ತೂಕ, ತುತ್ತ ೧ ತೂಕ, ಸಜ್ಜರಸ ೧ ತೂಕ, ಇವಂ ಚೂರ್ಣವಂ ಮಾಡಿ ಪೊಟ್ಟಣ ಕಟ್ಟಿ ಒಂದು ಮುಚ್ಚಳದ ಒಳಗೆ ಕೆಂಡವ ಹಾಕಿ ಮೇಲೊಂದು ಮುಚ್ಚಳವ ಮುಚ್ಚಿ ತೂತು ಕೊರೆದು ಕೊಳವಿಯಲ್ಲಿ ಮೂಗಿಗೆ ಹೊಗೆಯ ಏರಿಸುವುದು. ಆ ಔಷಧದ ಹೊಗೆಯಿಂದ ಪೀನಸ ಮಾಣ್ಗುಂ. ಉತ್ತರಣೆಯ ಬೀಜ,

---

[1] ಇದರ ನಂತರ ತಾಲಪತ್ರಕೋಶದಲ್ಲಿ 'ಶ್ರೀನಾರಾಯಣಾಯ ನಮಃ' ಎಂದಿದೆ.

ಓಲೇಬೀಜ, ಕಂಗುಂಗೆಬೀಜ, ಇವ ಮೂರನ್ನೂ ಅರೆದು ಹಸುವಿನ ತುಪ್ಪದಲ್ಲಿ ನಸ್ಯವಂ ಮಾಡೆ ಶಿರೋರೋಗ, ಪೀನಸ ಕೆಡುಗುಂ.

ರಕ್ತಪಿತ್ತದಿಂ ಮೂಗಿನಲ್ಲಿ ರಕ್ತ ಸುರಿಯುವುದಕ್ಕೆ :—ದಾಳಿಂಬೇಹಣ್ಣಿನ ಹೂವು, ಗರಿಕೆ, ಯಷ್ಟಿಮಧುಕ, ಮಾವಿನ ಬೀಜ, ಇವಂ ಸಕ್ಕರೆಯನಿಕ್ಕಿ ಅಕ್ಕಿಗಚ್ಚಿನಲ್ಲಿ ಅರೆದು ಮೂಗಿಗೆ ನಸ್ಯಂ ಗೈಯ್ಯೆ ಮಾಣ್ಗುಂ. ಕಿರುಕುಸಾಲೆ, ಯಷ್ಟಿಮಧುಕ, ಇವಂ ಮೊಲೆಹಾಲಲ್ಲಿ ತೇದು ನಸ್ಯವಂ ಮಾಡಲು ರಕ್ತ ಸುರಿಯುವುದು ಮಾಣ್ಗುಂ. ಹಸಿಯ ನೊಸರ ರಸಮಂ ಬೇವಿನ ಎಣ್ಣೆಯಂ ಸಮಾನಂಗೊಂಡು ಅಟ್ಟು ಮೃದುನಸ್ಯಂ ಗೈಯ್ಯೆ ಎನಿತಪ್ಪ ಮೂಗಿನ ರಕ್ತ ಮಾಣ್ಗುಂ.

ಮೂಗಿನಲ್ಲಿ ಬಾಯಲ್ಲಿ ರಕ್ತ ಬೀಳುವುದಕ್ಕೆ :—ಕಹಿತೊಂಡೇಸೊಪ್ಪನ್ನು ಅಂಗೈಯ್ಯಲ್ಲಿ ಹಿಸುಕಿ ಹಿಂಡಿ ಮೂಗಿನಲ್ಲಿ ಒಂದು ಬಿಂದು ಎರಡು ಬಿಂದು ನಸ್ಯಂಗೈಯ್ಯಲು ಮೂರು ದಿನಕ್ಕೆ ಮಾಣ್ಗುಂ. ಕಾಡುತೊಂಡೆಯ ಬೇರಂ ತುಳಿದು ಹಾಲಲ್ಲಿ ಬೆಲ್ಲವ ಹಾಕಿ ಕುಡಿಯಲು ಬಾಯಿಂದ ರಕ್ತ ಬೀಳುವುದು ಮಾಣ್ಗುಂ. ಪಥ್ಯ ಹುಳಿವರ್ಜ್ಯ. ಮಂಡೆಗೆ ಹಸುವಿನ ಸಪ್ಪೆತುಪ್ಪವ ಒತ್ತಿ ನೀರ ಎರೆಯಲು ಗುಣ.

ಮೂತ್ರದಲ್ಲಿ ರಕ್ತ ಬೀಳುವುದಕ್ಕೆ :—ಹಾವುಮೆಕ್ಕೆಬೇರಂ ಹಾಲಲ್ಲಿ ಅರೆದು ಸಕ್ಕರೆಯ ಹಾಕಿ ಕುಡಿಯಲು ರಕ್ತ ನಿಲ್ಲುವುದು. ಕರಿಯೆಸಗದ ಸೊಪ್ಪು ತಂದು ನಾಲ್ಕು ಮೆಣಸನಿಕ್ಕಿ ಹಳೆಯ ನೀರಲ್ಲಿ ಅರೆದು ಕುಡಿಯಲು ರಕ್ತಬಂಧಗಳು ನಿಲ್ಲುವುವು. ಪಥ್ಯ ಮಜ್ಜಿಗೆ ಅನ್ನ. ಮೂರು ದಿನದಲ್ಲಿ ಗುಣ.

ಮೂಗಿನಲ್ಲಿ ರಕ್ತಸುರಿಯುವುದಕ್ಕೆ :—ಗರುಗದ ಸೊಪ್ಪಿನ ರಸ, ಬೆಳ್ಳುಳ್ಳಿ ಬೇಳೆ, ಮೆಣಸು, ಇವಂ ಗರುಗದ ರಸದಲ್ಲಿ ತೇದು ನಸ್ಯಂ ಗೈಯ್ಯೆ ಮಾಣ್ಗುಂ. ಇದಂ ಕುಡಿಯಲು ರಕ್ತ ಕಾರುವುದು ನಿಲ್ಲುವುದು. ದಾಳಿಂಬದ ಹೂವಿನ ರಸವಂ ಮೊಲೆಹಾಲಿಂದ ನಸ್ಯಂ ಗೈಯ್ಯೆ ಮೂಗಿನಲ್ಲಿ ಸುರಿವ ರಕ್ತ ನಿಲ್ಲುವುದು.

ಛಳಿ ಬರುವುದಕ್ಕೆ :—ತೋಟಿಯ ಸೊಪ್ಪಂ ಮೆಣಸು ಸಹ ಅರೆದು ಅಡಿಕೆ ಗಾತ್ರಕ್ಕೆ ಸಮಾನಂಗೊಂಡು ನೀರನ್ನು ಕದಡಿ ಛಳಿ ಬರುವಾಗ ಕುಡಿಯಲು ಛಳಿ ಮಾಣ್ಗುಂ.

ಛಳಿಗೆ ಕಲ್ಕ :—ಕುರುಟಿಗೆಚಿಗುರು, ೭ ಮೆಣಸು, ೭ ಬೆಳ್ಳುಳ್ಳಿ ಬೇಳೆ, ೭ ಶುಂಠಿ, ಹೆಸರು, ಅಮರದ ಬಳ್ಳಿ ಸಹ ಅರೆದು ಕಲ್ಕವ ಮಾಡಿ ಛಳಿ ಬರುವುದಕ್ಕೆ ಮೊದಲೇ ಕುಡಿಯಲು ಛಳಿ ನಿಲ್ಲುವುದು.

ತಾಪಕ್ಕೆ :— ನೆಲದಾಳಿಗೆಡ್ಡೆಯಂ ತಂದು ಜೇನುತುಪ್ಪದಿಂದ ತೇದು ನಾಲಿಗೆ ಲೇಪವಂ ಮಾಡೆ ದಾಹ, ತಾಪ ಹರ.

ತಾಪಜ್ವರಕ್ಕೆ ಕಲ್ಕ :—ಸಹದೇವಿ, ಯಿವಸಿಂಹಿ, ಗಾಂಧಾರಿ, ಈ ಮೂರು ಬಗೆ ಸೊಪ್ಪನ್ನು ಪಿಟ್ಟನಿಕ್ಕಿ ರಸವ ತೆಗೆದುಕೊಂಡು ಶುಂಠಿ, ಹಿಪ್ಪಲಿ, ಮೆಣಸು, ಬಜೆ, ಬೆಳ್ಳುಳ್ಳಿ,

ಇವಂ ಆ ರಸದಲ್ಲಿ ಅರೆದು ಕದಡಿ ಕುಡಿಯಲು ತಾಪಜ್ವರ ನಿಲ್ಲುವುದು. ಒಂದು ತೂಕ ಕೊತ್ತಂಬರಿಯ ಸಣ್ಣನಾಗಿ ಅರೆದು ಸಕ್ಕರೆಯಂ ಹಾಕಿ ಒಂದು ಸೇರು ಬಿಸಿನೀರಲ್ಲಿ ಕದಡಿ ಕುಡಿಯಲು ತಾಪಜ್ವರ ನಿಲ್ಲುವುದು.

ದಾಹಜ್ವರಕ್ಕೆ :—ಅತ್ತಿ ಬೇರಂ ನೀರಲ್ಲಿ ಅರೆದು ಕುಡಿಯೆ ದಾಹಜ್ವರ ಪರಿಹಾರ.

ಶೀತಜ್ವರಕ್ಕೆ :—ಅಡಕೆಚಿಟ್ಟಿನ ಬೇರಂ ಬೆಂಬೂದಿಯಲ್ಲಿ ಹಾಕಿ ಜೀರಿಗೆ, ಶುಂಠಿ ಸಹ ಅರೆದು ಬಿಸಿನೀರಲ್ಲಿ ಕುಡಿಯಲು ಶೀತಜ್ವರ ಮಾಣ್ಗುಂ.

ಶೀತಜ್ವರಕ್ಕೆ ಕಷಾಯ :—

ಅರಣ್ಯತುಲಸೀಮೂಲಂ ವಿಷ್ಣುಕ್ರಾಂತಿಮಹೌಷಧಂ ।
ಮಹಾಬಲಸಮಾಯುಕ್ತಂ ಶೀತಜ್ವರನಿವಾರಣಂ ॥

ಟೀಕೆ:—ವನತುಳಸಿ, ವಿಷ್ಣುಕ್ರಾಂತಿ, ಸಹ ಕಷಾಯವಂ ಕೊಡುವುದು ಶುಂಠಿ, ಕಳ್ಳಂಗಡಲೆ, ಈ ನಾಲ್ಕೂ ಸಹ ಕಷಾಯ ಕಾಸಿ ಕೊಳ್ಳಲು ಗುಣ.

ವಿಷಮಜ್ವರಕ್ಕೆ :—ಎಕ್ಕೇಬೇರಿನ ತಿಗುಡು, ನುಗ್ಗೆಯ ತಿಗುಡು, ಹಿಪ್ಪಲಿ, ಶುಂಠಿ, ಬೆಳ್ಳುಳ್ಳಿ, ಸಹ ಅರೆದು ಉಂಡೆಯಂ ಮಾಡಿ ಕೊಳ್ಳಲು ಮಾಣ್ಗುಂ. ಶುಂಠಿ, ಅಮರದವಳ್ಳಿ, ನೆಲಗುಳ್ಳದ ಬೇರು, ಇವಂ ಸಮಾನಂಗೊಂಡು ಅಷ್ಟಾವಶೇಷ ಕಷಾಯವಂ ಕಾಸಿ ಹಿಪ್ಪಲಿಯ ಪ್ರತಿಪಾಕವಿಕ್ಕಿ ಕುಡಿಯಲು ಮಾಣ್ಗುಂ.

ಪಿಪ್ಪಲೀ ಪಿಪ್ಪಲಿಮೂಲಂ ಚವ್ಯಂ ಚಿತ್ರಕನಾಗರಂ ।
ಪಂಚಕೋಲಮಿತಿ ಖ್ಯಾತಂ ಶೀತಜ್ವರನಿವಾರಣಂ ॥

ಟೀಕೆ :—ಹಿಪ್ಪಲಿ, ಹಿಪ್ಪಲೀಮೂಲ, ಚವ್ಯೆ, ಚಿತ್ರಮೂಲ, ಶುಂಠಿ, ಇವಂ ಕಷಾಯವಂ ಕಾಸಿ ಹಿಪ್ಪಲಿಯ ಪ್ರತಿಪಾಕವಿಕ್ಕಿ ಕುಡಿಯಲು ಶೀತಜ್ವರ, ವಾತಜ್ವರ, ವಿಷಮಜ್ವರ ಮಾಣ್ಗುಂ.

ಕುರುಕುಜ್ವರಕ್ಕೆ :—ಕೇದಗೆಬೇರಿನ ರಸ, ಹೊನಗೊನ್ನೆರಸ, ಇವು ಎರಡಕ್ಕುಂ ಸಕ್ಕರೆಯಂ ಹಾಕಿ ಕುಡಿಯಲು ಕುರುಕುಜ್ವರ ಮಾಣ್ಗುಂ.

ಬಿಟ್ಟು ಬಿಟ್ಟು ಬರುವ ಜ್ವರಕ್ಕೆ :—ಬೇವಿನ ಒಳನಾರು, ಶುಂಠಿ, ವಿಷ್ಣುಕ್ರಾಂತಿ, ಇವ ಕಷಾಯವಂ ಕಾಸಿ ಹಿಪ್ಪಲಿಯ ಪ್ರತಿಪಾಕವಿಕ್ಕಿ ಕುಡಿಯೆ ಸುಳುಜ್ವರ ಮಾಣ್ಗುಂ.

ಎಲ್ಲಾ ಜ್ವರಕ್ಕೆ :—ಕಕ್ಕೆತಿಗುಡು ಒಂದು ಹಿಡಿ, ಅಮರದ ಬಳ್ಳಿ ಎರಡು ಹಿಡಿ, ಅಳಲೇಕಾಯಿ ೨, ಇವಂ ಎರಡು ಮಾನ ನೀರಲ್ಲಿ ಕಷಾಯವ ಕಾಸಿ ಒಂದು ಸೊಲ್ಲಿಗೆ ಆದಾಗ ಅದರೊಳಗೆ ೨ ಹಿಪ್ಪಲಿಯ ಪ್ರತಿಪಾಕವಿಕ್ಕಿ ಕುಡಿಯಲು ಜ್ವರ ಮಾಣ್ಗುಂ. ಮತ್ತಂ ನೀರ ಬೊಮ್ಮೀಸೊಪ್ಪು, ನೀರಗೋಣಿಸೊಪ್ಪು, ಇವು ಎರಡು ಬಗೆಯನ್ನು ಪಿಟ್ಟನಿಕ್ಕಿ ಆ ರಸ ದಲ್ಲಿ ಜೀರಿಗೆ, ಹಿಪ್ಪಲಿ, ಕಟುಕರೋಹಿಣಿ, ಈ ಮೂರನ್ನು ಅರುವೆಯಲ್ಲಿ ಬೇಯಿಸಿ ಇಳುಹಿ ಅದಂ ಆ ರಸದಲ್ಲಿ ಅರೆದು ಕದಡಿ ಕುಡಿಯಲು ಎರಡು ವೇಳೆ ಮೂರು ವೇಳೆ ವಿರೇಕಮಕ್ಕುಂ. ಸರ್ವಜ್ವರ ಹರ. ಈ ಮೇರೆಯಲ್ಲಿ ಮೂರು ದಿನ ಕುಡಿಯಲು ಜ್ವರಂಗಳು ಮಾಣುವುವು.

ಮದನಕಾಮೇಶ್ವರೀಗುಳಿಗೆ :—ಅನುಪಾನ ಹಸುವಿನ ನೊರೆಹಾಲು, ಸಕ್ಕರೆ, ಸಹ ತೆಗೆದುಕೊಳ್ಳೆ ಸ್ತಂಭನ. ಜೇನುತುಪ್ಪದಲ್ಲಿ ಶ್ಲೇಷ್ಮಹರ. ಹಸುವಿನ ತುಪ್ಪದಲ್ಲಿ ವಾತ ಹರ. ಕಬ್ಬಿನ ಹಾಲಲ್ಲಿ ತ್ರಿದೋಷ ಹರ. ಲವಂಗದ ಹುಡಿಯಲ್ಲಿ ಬಹುಗ್ರಾಹಿ. ಸೂರ್ಯಕಾಂತಿ ಹೂವಿನ ರಸ, ಹಸುವಿನ ಹಾಲು ಸಹ ಸ್ತ್ರೀಯರಿಗೆ ಸ್ತಂಭನ. ಮದ್ದು ಮೆಲ್ಲುವವನಿಗೆ ಬದನೇ ಬೇರಿನ ಚೂರ್ಣದಲ್ಲಿ ಒಂದು ಗುಳಿಗೆ ಕೊಟ್ಟು ಈ ಗುಳಿಗೆ ಪ್ರಮಾಣದ ಮದ್ದು ಮೆಲ್ಲುವುದರಲ್ಲಿ ತಗ್ಗಿಸಿ ಇಳಕೊಂಡು ಬಂದರೆ ದಿನ ೧೧ಕ್ಕೆ ಮದ್ದು ಬಿಡುವುದು. ಇದ ತೆಗೆದುಕೊಂಡವರಿಗೆ ಹುಳಿ ವರ್ಜ್ಯ.

ಕೆಮ್ಮಿಗೆ :—ಹೆಣ್ಣು ಅಗಸೇಸೊಪ್ಪು, ನೆಲಗುಳ್ಳದ ಹೂವು, ಕೃಷ್ಣತುಳಸಿ, ಆಡುಸೋಗೆ, ಬಿಳುಗಾರ, ಯವಕ್ಷಾರ, ಹಿಪ್ಪಲಿ ಇಷ್ಟನ್ನು ಸಮತೂಕ, ಆಡುಸೋಗೇಸೊಪ್ಪಿನ ರಸ, ಕೃಷ್ಣತುಳಸಿರಸದಲ್ಲಿ ಪಿಟ್ಟ ಕಟ್ಟಿ ರಸದಲ್ಲಿ ಮರ್ದಿಸಿ ಕೊಡುವುದು.

ಕಾಸಕ್ಕೆ :—ಎಕ್ಕೇಎಲೆ ನೂರು, ಸುಣ್ಣ ಒಂದು ಸೇರು, ಪಂಚಕ್ಷಾರ ಪ್ರತ್ಯೇಕ ದುಡ್ಡು ತೂಕ, ಸುಣ್ಣ ಶೋಧಿಸಿಕೊಂಡು ಪಂಚಕ್ಷಾರ, ಪಂಚಲವಣ, ಹುಡಿ ಮಾಡಿ ಸುಣ್ಣದಲ್ಲಿ ಬೆರಸಿ ಈ ಎಕ್ಕೇಎಲೆಗಳಿಗೆ ಲೇಪಿಸಿ ಮಡಿಕೆಯಲ್ಲಿ ತುಂಬಿ ಕಿರುಮಣ್ಣುಗೊಂಡು ಗಜಪುಟ ಇಟ್ಟು ಭಸ್ಮವಂ ಮಾಡಿ, ಹಸಿಶುಂಠಿರಸದಲ್ಲಿ ದೇಹವರಿತು ತೆಗೆದುಕೊಳ್ಳಲು ಗುಣ. ಕೃಷ್ಣ ತುಳಸಿ, ನೆಲಗುಳ್ಳದ ಸೊಪ್ಪು, ಆಡುಸೋಗೇಸೊಪ್ಪು ಈ ೩ನ್ನೂ ಕುಟ್ಟಿ ಪಿಟ್ಟ ಕಟ್ಟಿ ಹಿಪ್ಪಲಿ ಇರಿಸಿ ಈ ರಸದಲ್ಲಿ ಹಿಪ್ಪಲಿ, ಬಿಳುಗಾರ ಸಹ ಕೊಡಲು ಮಕ್ಕಳ ಕೆಮ್ಮು, ಕಾಸ ಗುಣ.

ಸರ್ವವಿಷಕ್ಕೆ :—ದೊಡ್ಡಪಡಪತ್ರೆಚೂರ್ಣ ವರಾಹ ತೂಕ ಗುಳಿಗೆ ಮಾಡಿ ಕೊಡಲು ಹಾವುಗಳ ನಾನಾವಿಷ, ನಾನಾಪ್ರಾಣಿಗಳಿಗೂ ವಿಷ ಹರ. ಹುಳಿ ವರ್ಜ್ಯ.

ಕೃಮಿಗೆ: —

ಹರಿದ್ರಾಚೂರ್ಣಮೇಕಂ ತು ಪಯಸಾ ಪಿಬತೇ ನರಃ ।
ಮೂತ್ರಂ ವಾ ಮೂತ್ರಘಾತಂ ವಾ ಕ್ಷಿಪ್ರಮೇವ ವಿನಶ್ಯತಿ ॥
ಕುಲುತ್ಥವ್ಯೋಷಸವ್ಯೋಷಾತ್ಸೈಲೋ ಹಿಂಗುವಿಳಂಗವಾನ್ ।
ಕಾಸಶ್ವಾಸಾಗ್ನಿಸದನಕೃಮಿಗುಲ್ಮೋದರಾಪಹಾ ॥

ಕುಷ್ಠಕ್ಕೆ :—ಬೋಳಾಮಸ್ತಕಿ, ಬಂಗಾಳಪಚ್ಚೆ, ಪಚ್ಚೆತುತ್ತ, ಇಷ್ಟು ವರಹ ತೂಕ, ಅರ್ಧ ಹಸಿ ಅರ್ಧ ಬಿಸಿ ಮುರುದಾರಶೃಂಗಿ ಗ ೧ ತೂಕ, ಅಳಲೇಕಾಯಿ ಗ ೧ ತೂಕ, ಮರದರಿಸಿನ ಗ ೧ ತೂಕ, ರಸ ಗ ೨ ತೂಕ, ಹಸುವಿನ ಬೆಣ್ಣೆಯಲ್ಲಿ ಕಂಚಿನ ಹರಿವಾಣದಲ್ಲಿ ತಾಮ್ರದ ಚೆಂಬಿನಲ್ಲಿ ಮರ್ದಿಸಿ ಹುಳುಕಡ್ಡಿ ರಕ್ತ ಬರುವಹಾಗೆ ಕೆರೆದು ತೊಡೆಯೆ ಗುಣ.

ಜ್ವರನಿದಾನ :—

ಆದೌ ದಿನತ್ರಯಂ ಬಾಲ್ಯಂ ಜ್ವರೇ ಸಪ್ತ ಚ ಯೌವ್ವನಂ ।
ಜ್ವರಾಂತೇ ನವಮಂ ವೃದ್ಧಂ ತ್ರಿವಿಧಂ ಜ್ವರಲಕ್ಷಣಂ ॥

ಕೋಟ್ಯರ್ಧತ್ರಯರೋಮಕೂಪನಿಚಯಂ ಅಷ್ಟಾದಶಶಲ್ಯಕಂ ।
ಸಂಧಿಶ್ಚ ದ್ವಿಶತಂ ಚ ಪೇಶಿಶತಕಂ ಮರ್ಮಾಣಿ ಸಪ್ತೋತ್ತರಂ ॥
ಅಷ್ಟೌ ರಕ್ತಜಮೂತ್ರಜದ್ವಿದ್ವಿತಯಂ ಶುಕ್ರೇ ಚ ಕರ್ಷದ್ವಯಂ ।
ಶಾರೀರಂ ಕುಡಪದ್ವಯಂ ದ್ವಿಗುಣಿತಂ ಶ್ಲೇಷ್ಮಂ ಮರುತ್ತ್ವನ್ಯಥಾ ॥

ಚಾತುರ್ಥಿಕಜ್ವರಕ್ಕೆ :—ತೊಟ್ಟೆಸೊಪ್ಪು ಪಿಟ್ಟಸಿಕ್ಕಿ ಆ ರಸದಲ್ಲಿ ಲವಂಗ, ತ್ರಿಕಟುಕ, ಬೆಳ್ಳುಳ್ಳಿಯ ಬೇಳೆ ಸಹ ಅರೆದು ದೇಹವರಿತು ಕೊಡುವುದು, ಗುಣ. ಮೆಣಸು, ಚಿಟವುಡಲದ ಬೇರು, ಇವಂ ಕದಕಿ ನಿಂಬೇಹುಳಿಯಲ್ಲಿ ನೆನೆಯಿರಿಸಿ ಕಿವುಚಿ ಆ ಹುಳಿಯನ್ನು ಜ್ವರ ಬರುವಾಗ ಮೈಗೆ ಪೂಸಲು ಚಾತುರ್ಥಿಕ ಮೊದಲಾದ ಜ್ವರಗಳೆಲ್ಲಾ ಬಿಡುವುವು. ಕಟುಕರೋಹಿಣಿಯ ಎಕ್ಕೆಯ ಹಾಲಿಂದ ನೆನೆಯಿಕ್ಕಿ ಮರ್ದಿಸಿ ಒಣಗಿಸಿ ೩ ಭಾವನೆಯಂ ಮಾಡಿ ಉದ್ದಿನ ಪ್ರಮಾಣ ಗುಳಿಗೆಯಂ ಮಾಡಿ ನೆಳಲಲ್ಲಿ ಒಣಗಿಸಿ ವೀಳ್ಯದ ಎಲೆಗೆ ತೊಡೆದು ಮೆಲ್ಲಲು ಬಿಸಿ ನೀರಂ ಕುಡಿಯಲು ಸರ್ವಜ್ವರಹರ.

ಜಿಹ್ವಾರೋಗಕ್ಕೆ :—

ಪಾಠಾಬಲಸುಗಂಧೀನಾಂ ದಲಕ್ವಾಥಂ ಪಿಬೇನ್ನಿಶಿ ।
ಜಿಹ್ವಾರೋಗಂ ತಾಲುರೋಗಂ ಸದ್ಯ ಏವ ವ್ಯಪೋಹತಿ ॥
ಶಾರಿಕಾಬಲಯೋಷಂ ಚ ಧಾನ್ಯಶುಂಠೀಪಟೋಲಕಂ ।
ತತ್ಕ್ವಾಥಂ ಸಿತಯಾ ಯುಕ್ತಂ ಪಿಬೇಜ್ಜಿಹ್ವಾಮಯಪ್ರಣುತ್ ॥
ಪರ್ಪಟಾಬ್ದಪಟೋಲನಾಂ ಶಾರಿಕಾಜೀರಧಾನ್ಯಕಂ ।
ಸಶುಂಠಿನಿಶಿತ್ರಾ ಕ್ವಾಥಂ ಪಿಬೇಜ್ಜಿಹ್ವಾಮಯಾರ್ತಿನುತ್ ॥
ಆದಾನಮತಿಕಟ್ವಾಮ್ಲರೂಕ್ಷಭೋಜನಲಂಘನೈಃ ।
ಅಕಾಲಜಾಗರಾಸ್ವಸ್ಥವ್ಯಾಯಾಮಾದುಚ್ಚಭಾಷಣೈಃ ॥
ತೈಲಾತಪಾದಿಯೋಗ್ಯೈಶ್ಚ ಜಿಹ್ವಾರೋಗಃ ಪ್ರಜಾಯತೇ ।
ಜಿಹ್ವಾಯಾಂ ದೋಷಮದ್ರಾವಂ ಪೇಷಂ ಶ್ಯಾವಂ ಸಂಕಟಕಂ ॥
ಅರುಚಿಸ್ವರಸಂತಾಪಂ ವಿವರ್ಣವದನಂ ಭ್ರಮಂ ।
ಸರ್ವಾವಯವಮಸ್ಪಂದಂ ಜಿಹ್ವಾರೋಗಸ್ಯ ಲಕ್ಷಣಂ ॥
ವಾತಶ್ಯಾವಂ ಭವೇಚ್ಛೂಲಂ ಪಿತ್ತಶ್ಯಾವಂ ಸಕಂಟಕಂ ।
ಕಫೇ ಶುಭ್ರಾತಿಪಿಚ್ಛಿಲ್ಯಂ ಸಂಸರ್ಗೇ ಮಿತ್ರಲಕ್ಷಣಂ ॥
ಜಿಹ್ವಾಯಾಂ ಸ್ಫುಟನಂ ಚಾಪಿ ಸಾಮಾನ್ಯಂ ದೋಷಲಕ್ಷಣಂ ।
ತತ್ರ ಗಂಡೂಷಲೇಪಾದಿ ಭಜೇಲ್ಲಘು ಚ ಭೋಜನಂ ॥
ಪಟೋಲಶಾರಿಕಾಕ್ವಾಥಂ ಪಿಬೇಜ್ಜಿಹ್ವಾದಿದೋಷನುತ್ ।
ಕಾಶ್ಮೀರಮಧುಕಂ ಚೈವ ತಥಾ ರುದ್ರಾಕ್ಷರೋಚನಾಂ ॥

ಪುನರ್ನವಿಸಮಂ ಲೇಪಾದ್ಗಂಡೂಷಂ ಸರ್ವದೋಷನುತ್ ।
ಸುಗಂಧಿಜರ್ಝರೀಮೂಲಚರ್ವಣಾದಸ್ಯ ದೋಷನುತ್ ॥
ಸುಸ್ಫೀತಖದಿರಕ್ವಾಥಭಕ್ಷಣಂ ತತ್ರದಾರುಣಂ ।
ಜಿಹ್ವಾತಾಲುಭವಂ ರೋಗಂ ನಾಶಯೇನ್ನಾತ್ರ ಸಂಶಯಃ ॥

ಬಿಳಿಸಾಸುವೆ, ಸೈಂಧವ, ಆಕಲುಕರ್ರಿ, ವಿಳಂಗ ಈ ನಾಲ್ಕು ಸಮಾನವಾಗಿ ಚೂರ್ಣಿಸಿ ನಾಲಿಗೆಯ ಮೇಲೆ ಹಾಕಲು ಹರ.

ಪುತ್ರೋತ್ಪತ್ತಿಗೆ :—

ವಚಾಗ್ರಂ ನಿಂಬಬೀಜಂ ಚ ಸ್ತನ್ಯೇನ ಪಯಸಾ ಪಿಬೇತ್ ।
ಪುತ್ರಂ ಪ್ರಸೂಯತೇ ನಾರೀ ದೈವಕೋಪಂ ವಿಮುಂಚತಿ ॥
ಅಂಕೋಲಮೂಲವಲ್ಕಂ ತು ಚೂರ್ಣೀಕೃತ್ವಾ ಗುಡೈರ್ಯುತಂ ।
ಕಾಕಾಂಡತುಲ್ಯಮಶ್ನೀಯಾತ್ ಪುತ್ರಿಣೀ ಸ್ತ್ರೀ ಭವಿಷ್ಯತಿ ॥
ಉತ್ತಮಾಕನ್ನಿಕಾಮೂಲಂ ಶೋಷಯಿತ್ವಾ ಪಯಃ ಪಿಬೇತ್ ।
ಪಾಯಸಾನ್ನಂ ಸಮಶ್ನೀಯಂ ಪುತ್ರಿಣೀ ಸ್ತ್ರೀ ಭವಿಷ್ಯತಿ ॥
ಸೌದರ್ಶನಂ ಮಹಾಮಂತ್ರಂ ಶುಚಿರ್ಭೂತ್ವಾ ಸಮಾಹಿತಾ ।
ನಿತ್ಯಮಷ್ಟೋತ್ತರಶತಂ ಜಪನ್ಪುತ್ರಮವಾಪ್ನುಯಾತ್ ॥

ಅಸ್ಯ ಶ್ರೀ ಸುದರ್ಶನಮಹಾಮಂತ್ರಸ್ಯ ಅಹಿರ್ಬುಧ್ನ್ಯೋ ಭಗವಾನ್ ಋಷಿಃ, ವಿರಾಟ್ ಛಂದಃ, ಸುದರ್ಶನರೂಪೀ ಮಹಾವಿಷ್ಣುರ್ದೇವತಾ, ರಂ ಬೀಜಂ, ಹೃಂ ಶಕ್ತಿಃ, ಈಂ ಕೀಲಕಂ, ಸುದರ್ಶನಪ್ರೀತ್ಯರ್ಥೇ ಜಪೇ ವಿನಿಯೋಗಃ. ಧ್ಯಾನಂ–

ಶಂಖಂ ಚಕ್ರಂ ಚ ಪಾಶಂ ಪರಶುಮನಿಮಿಷಂ ಶೂಲಪಾಶಾಂಕುಶಾಗ್ನಿಂ
ಬಿಭ್ರಾಣಂ ವಜ್ರಖೇಟಂ ಹಲಮುಸಲಗದಾಕುಂತಮತ್ಯುಗ್ರದಂಷ್ಟ್ರಂ ।
ಜ್ವಾಲಾಕೇಶಂ ತ್ರಿಣೇತ್ರಂ ಜ್ವಲದನಲನಿಭಂ ಹಾರಕೇಯೂರಭೂಷಂ
ಧ್ಯಾಯೇತ್ಷಟ್ಕೋಣಸಂಸ್ಥಂ ಸಕಲರಿಪುಜನಪ್ರಾಣಸಂಹಾರಚಕ್ರಂ ॥

ಜಪ :—ಸಹಸ್ರಾರ ಹುಂ ಫಟ್ ಸ್ವಾಹಾ[1].

---

[1] ಇದರನಂತರ ತಾಳಪತ್ರಕೋಶದಲ್ಲಿ ಕೆಳಗಿನ ಶ್ಲೋಕವಿದೆ :—

ರಕ್ತಜಾಃ ಕೃಮಯಸ್ಸೂಕ್ಷ್ಮಾಸ್ತನುಮಧ್ಯಾಗ್ರಶಕ್ತಯಃ ।
ಸ್ಮರವೇಶ್ಮನಿ ಕಂಡೂತಿಂ ಜನಯನ್ತಿ ಯಥಾಬಲಂ ॥
ಕಂಡೂತೇರಪ್ರತೀಕಾರಂ ತನುಲಿಂಗೇನ ಸಂಗಮೇ ।
ನ ತೃಪ್ಯನ್ತಿ ಸ್ತ್ರಿಯಸ್ತಸ್ಮಾಲ್ಲಿಂಗವೃದ್ಧಿಃ ಪ್ರಜಾಯತೇ ॥

ಆಹಿಕಜ್ವರಕ್ಕೆ, ವಾತ ನಾನಾಜ್ವರಗಳಿಗೆ :—ಶೋಧಿಸಿದ ರಸ ೧, ನಾಭಿ ೧, ಗಂಧಕ ೧, ಈ ಮೂರರ ಸಮ ದುತ್ತೂರಬೀಜ, ಇದರ ಇಮ್ಮಡಿ ತ್ರಿಕಟುಕ, ಇವನ್ನು ಚೂರ್ಣಿಸಿ ನಿಂಬೇ ಹುಳಿಯಲ್ಲಿ ಮರ್ದಿಸಿ ಗುಂಜೀತೋರ ಗುಳಿಗೆ, ಆಲದ ರಸ ಅನುಪಾನ.

ತಾಪಜ್ವರಕ್ಕೆ :—ಹಿಪ್ಪಲಿ ೩, ಇಂಗಲೀಕ ೨, ನಾಭಿ ೧, ಈ ಮೂರನ್ನೂ ಲೊಕ್ಕಿ ಸೊಪ್ಪಿನ ರಸದಲ್ಲಿ ಮರ್ದನೆ, ತಾರೇಕಾಯಿಪ್ರಮಾಣ ಗುಳಗೆ. ಮೊಸರು ಅನುಪಾನ. ಬೆಳ್ಳುಳ್ಳಿ, ಶ್ರೀತುಳಸಿ, ಶುಂಠಿ, ಜೀರಿಗೆ, ಹುಣಸೇಕಡ್ಡಿ, ಬೇವಿನಕಡ್ಡಿ, ಅನುಪಾನವರಿತು ಕೊಡುವುದು.

ಮೂಲವ್ಯಾಧಿಗೆ :—ಪಂಚಕೋಲ, ಅಳಲೇಕಾಯಿ, ಜೇಪಾಳ, ಓಮ, ಜೀರಿಗೆ ಬಗೆ ಎರಡು, ಅಗುಳುಶುಂಠಿ, ವಿಳಂಗ, ಕೊಡಸಿಗೆಬೀಜ, ಗೇರುಹರುಳು, ತಾರೇಕಾಯಿ, ಇಷ್ಟು ಚೂರ್ಣ ಮಾಡಿ ಬೆಲ್ಲ ಹಾಕಿ ಇಡುವುದು. ತಾರೇಕಾಯ ಪ್ರಮಾಣ ಗುಳಿಗೆ, ಮಜ್ಜಿಗೆ, ತಣ್ಣೀರಲ್ಲಿ ಕೊಳ್ಳಲು ಗುಣ.

ಚೇಳಿನ ಔಷಧ :—ಎಕ್ಕೇಹಾಲು, ಇಂಗು, ಮುತ್ತುಗದ ಬೀಜ, ತೇದು ತೊಡೆ ಯಲು ಗುಣ.

ದೇಹಮಬ್ಬುವರ್ಧನಕ್ಕೆ :—ಶುಂಠಿ ಪಲ ೧, ತಾಳೇಬೆಲ್ಲ ಪಲ ೩, ಸಮುದ್ರಪಾಳಬೀಜ ಪಲ ೧, ಈ ಮೂರನ್ನೂ ಮರ್ದಿಸಿ ಎಲಚಿಹಣ್ಣಿನ ಪ್ರಮಾಣ ಗುಳಿಗೆಯ ಕೊಡಲು ಕರ ಉಷಿ ಮಾಸಿ ಸಾಯಂಕಾಲದಲ್ಲಿ ಗುಣ. ಪಥ್ಯ ಮಧುರಾಹಾರ.

ಮೂತ್ರಸಿಕ್ಕನೆಗೆ :—ಕಗ್ಗಲಿ ಚಕ್ಕೆ, ಕಿರುಗಡುಸಿಗೆ, ಬೇವಿನ ಚಕ್ಕೆ, ಚವೆ, ತ್ರಿಕಟುಕ, ಓಮ, ಇವ ಚೂರ್ಣ ಮಾಡಿ ಆಮಲಕಪ್ರಮಾಣ ಕೊಳ್ಳಲು ಮೂತ್ರಸಿಕ್ಕನೆ ಗುಣ.

ಮೂಷಕ ಮೂಸುವುದಕ್ಕೆ :—ಮಾರ್ಜಾಲಮಲ, ತಾಳೇಬೆಲ್ಲ ಕೂಡಿಸಿ ಇರಿಸಿದರೆ ಆ ಮನೆಯಲ್ಲಿ ನಿಲ್ಲವು. ಅದು ಖಂಡಿತ. ಕರಿಕೋಷ್ಠ, ಶುಂಠಿ, ಟಂಕಣ, ಮೂಲಿಕಾ, ಪಿಕಾ ಜಂಬೀರಸಂಯುಕ್ತಂ, ಗಂಡೂವುಂಡಾಹರ್ಶ ೧೦, ಅಪಿಸಿ, ಜಂಬೀರ, ಕೊಡಸಿಗನ ಬೀಜ, ಅತಿಬಜೆ, ಮುಸ್ತೆ, ಶುಂಠಿ, ಜೀರಿಗೆ, ಬೂರುಗದ ಹಗಿನು, ಜಾಯಿಕಾಯಿ, ಗಜ್ಜುಗದ ತಿರುಳು, ಮಾವಿನ ಬೀಜ, ಬೆಲ್ಲವತ್ತದ ತಿರುಳು, ಹೆಮ್ಮರದ ಚಕ್ಕೆ, ಇಷ್ಟನ್ನೂ ಭಂಗಿರಸದಲ್ಲಿ ಮರ್ದನೆ. ಸರಟಕನ ಬೇರನುಪಾನ.

ಅಥ ಸಾಧ್ಯಾಸಾಧ್ಯಂ ಮುಹುರ್ವಕ್ಷ್ಯತೇ । ತತ್ರಸಾಧ್ಯಂ :—

ಇಂದೀವರಸಮಂ ನೇತ್ರಂ ಮುಖಂ ತಾರೇಶಸನ್ನಿಭಂ ।
ಸಮಧಾತುಗತಿರ್ನಾಡೀ ಸ್ವರಃ ಕೋಕಿಲಸನ್ನಿಭಃ ॥
ಕ್ಷುತಂ ಕ್ಷುಧಾ ಮೂರ್ಧ್ನಿ ಕಂಡೂರನ್ನವಾಂಛಾ ತನುರ್ಲಘುಃ ।
ದಂತಾಃ ಕುಂದನಿಭಾಭಾಸಾ ಜಿಹ್ವಾ ಮಾರ್ದವಸದ್ರವಾ ॥
ಯವಾಗುಪ್ರಾಶನೇ ಸ್ವೇದಃ ಕರ್ಣಯೋಃ ಶ್ರವಣಂ ಸಮಂ ।
ಘ್ರಾಣೇ ಗಂಧಸಮಜ್ಞಾನೇ ಪಾದಪಾಣಿತಲೋಷ್ಣತಾ ॥

ನಖಪಕ್ಷ್ಮಾಕ್ಷಿರೇಖಾಸು ರಕ್ತಸಂಪೂರ್ಣತಾ ಯದಾ ।
ಜ್ಞಾತ್ವಾ ಚೈವಂವಿಧಂ ಸಾಧ್ಯಂ ಚಿಕಿತ್ಸಾಂ ಕುರುತೇ ಭಿಷಕ್ ॥

ಅಸಾಧ್ಯಂ :—

ಜ್ವರಸ್ತೀಕ್ಷ್ಣೋಽಥವಾ ಶೀತಶ್ಚಾಥವಾಲ್ಪಜ್ವರೋಽಪಿ ವಾ ।
ನೇತ್ರಾಂತೌ ರಕ್ತರಹಿತೌ ಪಾದಪಾಣಿನಖಾಸ್ತಥಾ ॥
ನೇತ್ರೇ ಕಾಂತಿವಿಹೀನೇ ಚ (ನ ಶ್ರುತೌ ಸಾಗರಧ್ವನಿಃ ।
ಸ್ವೇದಹೀನಜ್ವರಶ್ಚೈವ ಹ್ಯಥವಾ ಸ್ವೇದ ಉತ್ಕಟಃ ॥
ಮುಖೇ ಕಾಂತಿಸ್ತಥಾ ಹೀನಾ) ನೇತ್ರೇ ಭುಗ್ನೇಽಥವಾ ಕೃಶೇ ।
ನಾಭಿಹೃನ್ನಾಸಿಕಾಪಾದಪಾಣಿಶೈತ್ಯಂ ಹಿಮಾಂಶುವತ್ ॥
ಊರ್ಧ್ವಶ್ವಾಸೋ ಧನುರ್ವಾತೋ ಹಿಕ್ಕಾ ಸರ್ವಾಂಗಕಂಪನಂ ।
ಶಿರಃಕಂಪೋಽಪ್ಯಮಸ್ಮಾರಃ ಕಫಃ ಕಂಠಂ ಸಮಾಗತಃ ॥
ಗಂಧಸ್ವಾದುಂ ನ ಜಾನಾತಿ ಮಲಂ ಕಪಿಲವರ್ಣಕಂ ।
ಶಿಥಿಲಾ ಚಪಲಾ ಚೈವ ನಾಡೀ ಕುಟಿಲಸೂತ್ರಕಾ ॥
ಆದೌ ಪಿತ್ತಗತಿರ್ನಾಡೀ ತತೋ ವಾತಗತಿರ್ಭವೇತ್ ।
ತತಃ ಶ್ಲೇಷ್ಮಗತಿರ್ನಾಡೀ ಚಕ್ರವದ್ಭ್ರಮತೇ ಮುಹುಃ ।
ಮಂದನಾಡೀ ಭವೇದ್ಯಸ್ಯ ಹ್ಯಸಾಧ್ಯಂ ಭವತಿ ಧ್ರುವಂ ॥

ಅಗ್ನಿಮಾಂದ್ಯ, ಅಜೀರ್ಣ, ಆಮದೋಷ, ಕಾಸ, ಶ್ವಾಸ, ಪಾಂಡು, ಕಾಮಾಲೆ, ಕ್ರಿಮಿ, ಅಸ್ಥಿಗತಜ್ವರ, ಉದರರೋಗ, ನಾನಾವ್ಯಾಧಿಗಳಿಗೆ :—ಮಂಗರುವಳ್ಳಿ, ಲಕ್ಕಿಹೂ, ಕುಟಮ, ಈ ೩ನ್ನೂ ಸಮ ವರ್ತಿಸಿ ಚೂರ್ಣಿಸಿ ಮಡಕೆಗೆ ಹಾಕಿ ಸಿರುಮಣ್ಣುಗೊಂಡು ಒಂದು ಬಗೆ ಸೌದೆಯನ್ನು ಇಡಲು ಮೃದುಅಗ್ನಿಯಿಂದ ಉಷ್ಣಮಾಡಿ ಜೇನು ಅನುಪಾನ, ಎಲಚಿಹಣ್ಣಿನ ಪ್ರಮಾಣ ಕೊಳ್ಳಲು ಗುಣ. ತೊಟ್ಟಿಯಸೊಪ್ಪಂ ಪಿಟ್ಟನಿಕ್ಕಿ ಆ ರಸದಲ್ಲಿ ಲವಂಗ, ತ್ರಿಕಟುಕ, ಬೆಳ್ಳುಳ್ಳಿಯ ಬೇಳೆ ಸಹ ಅರೆದು ದೇಹವರಿತು ಕೊಡುವುದು. ಗುಣ. ಮೆಣಸು, ಚಿಟವುಡಲದ ಬೇರು, ಇವಂ ಕದಡಿ ನಿಂಬೇಹುಳಿಯಲ್ಲಿ ನೆನೆಇರಿಸಿ ಕಿವಿಚಿ ಆ ಹುಳಿಯ ಜ್ವರ ಬರುವಾಗ ಮೈಗೆ ಪೂಸಲು ಚಾತುರ್ಥಿಕ ಮೊದಲಾದ ಜ್ವರಗಳೆಲ್ಲಾ ಬಿಡುವುವು. ಕಟುಕುರೋಹಿಣಿಯ ಎಕ್ಕೇಹಾಲಿಂದ ನೆನೆಯಿಕ್ಕಿ ಮರ್ದಿಸಿ ಒಣಗಿಸಿ ೩ ಭಾವನೆ ಮಾಡಿ ಉದ್ದಿನ ಪ್ರಮಾಣ ಗುಳಿಗೆಯಂ ಮಾಡಿ ನೆಳಲಲ್ಲಿ ಒಣಗಿಸಿ ವೀಳ್ಯದೆಲೆಗೆ ತೊಡೆದು ಮೆಲ್ಲಲು ಬಿಸಿನೀರಂ ಕುಡಿಯೆ ಸರ್ವಜ್ವರ ಹರ.

ಛಳಿಗೆ ಗುಳಿಗೆ :—ಅರಿದಳ, ಮಣಿಶಿಲೆ, ಗಂಧಕ, ಇವು ಮೂರನ್ನೂ ಸಮಾನಂ ಗೊಂಡು ಹಾಗಲದ ಸೊಪ್ಪಿನ ರಸದಲ್ಲಿ ಮರ್ದಿಸಿ ತುಗರಿಯ ತೋರ ಗುಳಿಗೆಯಂ ಕಟ್ಟಿ ಛಳಿ ಬರುವಾಗ ಬೆಲ್ಲ, ಸಕ್ಕರೆ, ಬಿಸಿನೀರಲ್ಲಿ ಒಂದು ಗುಳಿಗೆಯಂ ಕೊಡಲು ವಾಂತಿ ಯಕ್ಕುಂ. ಛಳಿ ನಿಲ್ಲುವುದು. ಮೂರು ದಿನಕ್ಕೆ ಮಾಣ್ಗುಂ.

ವಿರೇಕಕ್ಕೆ :—ಕೊನರ ತುಪ್ಪದಲ್ಲಿ ಹುರಿದು ಮೆಲ್ಲೆ ವಿರೇಕಮಕ್ಕುಂ. ಜೇಪಾಳದ ಚೂರ್ಣ ೧ ಭಾಗ, ಶುಂಠಿ ಕರುಕು ೮ ಭಾಗ, ಇವು ಎರಡನ್ನೂ ಅರೆದು ಮೆಣಸಿನ ಗಾತ್ರ ಗುಳಿಗೆಯಂ ಮಾಡಿ ಬೆಲ್ಲ, ಬಿಸಿನೀರಲ್ಲಿ ಕೊಡಲು ವಿರೇಕಮಕ್ಕುಂ. ಕಂಗೆಟ್ಟರೆ ಬಿಸಿ ಗಂಜಿಯಂ ಕುಡಿಯೆ ನಿಲ್ಲುವುದು.

ಉರಿಮೂತ್ರಕ್ಕೆ :—ಹೊನಗೊನ್ನೆರಸದಲ್ಲಿ ಸಕ್ಕರೆ ಬೆರಸಿ ಕುಡಿಯೆ ಮಾಣ್ಗುಂ. ಜೀರಿಗೆ, ಏಲಕ್ಕಿ, ಪುಡಿ ಮಾಡಿ ಬೆಣ್ಣೆಯಲ್ಲಿ ಕಲಸಿ ಸಕ್ಕರೆ ಬೆರಸಿ ಕೊಳ್ಳಲು ಗುಣ. ಕನ್ನೆಕುಮಾರಿಯೆಂದರೆ ಅಡಿಕೆಚಿಟ್ಟನ ಬೇರಿನ ತೊಕ್ಕ ಸಕ್ಕರೆ ಸಹ ಹಾಲಲ್ಲಿ ಅರೆದು ಕುಡಿಯಲು ಮಾಣ್ಗುಂ. ಹುಣಸೇಸೊಪ್ಪು ಮೊಸರು ಸಹ ಕಿವುಚಿ ಸೊಪ್ಪ ತೆಗೆದುಹಾಕಿ ಮೊಸರಂ ಕುಡಿಯಲು ರಕ್ತಉಷ್ಣ ಮಾಣ್ಗುಂ. ಮೆಂತ್ಯವನ್ನು ನೀರಲ್ಲಿ ನೆನೆಸಿ ಬೆಳಗಾಗಿ ಆ ನೀರಲ್ಲಿಯೇ ಅರೆದು ಕದಡಿ ಕುಡಿಯಲು ಉರಿಮೂತ್ರ ಮಾಣ್ಗುಂ. ಗುಳ್ಳದ ಬೇರಾಗಲೀ ನೀರಲ್ಲಿ ಅರೆದು ಕೊಳ್ಳಲು ಉರಿಮೂತ್ರ ಮಾಣ್ಗುಂ. ಬಿಸಿನೀರ ಕುದಿಯುವ ಹಾಗೆ ಕಾಸಿ ನಿಂಬೇಹಣ್ಣ ಹಿಂಡಿ ಕುಡಿಯಲು ಉರಿಮೂತ್ರ ಮಾಣ್ಗುಂ. ಬೆಳ್ಳಡಿಕಲ ಬೇರಂ ತಂದು ಅರೆದು ಸನು ಸಕ್ಕರೆಯ ಬೆರಸಿ ತುಪ್ಪದಲ್ಲಿ ಸೇವಿಸೆ ಶೋಣಿತಉರಿಮೂತ್ರ ಮಾಣ್ಗುಂ. ಆ ಬೇರಂ ಹಾಲಲ್ಲಿ ಅರೆದು ಕುಡಿಯಲು ಸಿಕ್ಕುಮೂತ್ರ ಮಾಣ್ಗುಂ. ಈ ಬೇರಂ ಮೊಸರಲ್ಲಿ ಕೊಳ್ಳಲು ಕಾಮಿಲೆ ಮಾಣ್ಗುಂ.

ಮೂತ್ರರೋಗಕ್ಕೆ :—ಏಲಕ್ಕಿ ೧ ತೊಲ, ತವಕ್ಷೀರ ೪ ತೊಲ, ಯಷ್ಟಿಮಧುಕ ೮ ತೊಲ, ಸಕ್ಕರೆ ೧೬ ತೊಲ, ಇವಂ ಚೂರ್ಣವಂ ಮಾಡಿ ಸಕ್ಕರೆ ಬೆರಸಿ ಆಡಿನ ಹಾಲಲ್ಲಿ ಕದಡಿ ಕುಡಿಯಲು ಮೂತ್ರರೋಗ ಗುಣ. ಕುಂಬಳದ ಬೀಜವನ್ನು ಅರೆದು ಮರುದಿವಸ ಬೆಲ್ಲವಂ ಕಲಸಿ ಕೊಳ್ಳಲು ಮೂತ್ರರೋಗ ಗುಣ. ಆದಿತ್ಯಭಕ್ತನ ಬೇರಂ ಆಡಿನ ಮೂತ್ರದಿಂದ ಅರೆದು ಕೊಳ್ಳೆ ಮೂತ್ರರೋಗ ಗುಣ. ಆಲದ ಬಿಳಲು, ಅದರ ಮುಗುಳು, ಎರಡನ್ನೂ ಮಜ್ಜಿಗೆಯಲ್ಲಿ ಅರೆದು ಅಕ್ಕಿಹಿಟ್ಟು ಮಜ್ಜಿಗೆಯಲ್ಲಿ ಅಂಬಿಲ ಇಟ್ಟು ಜೀರಿಗೆಯ ಹುಡಿ ಮಾಡಿ ಹಾಕಿ ತುಪ್ಪ ಸಹ ಮೂರು ದಿವಸ ಉಣ್ಣಲು ರಕ್ತಮೂತ್ರರೋಗ ಗುಣ. ಸಮುದ್ರ ಪಾಳವಂ ಸಕ್ಕರೆ ಬೆರಸಿ ಎದೆಯಿಂದ ಇಳಿಯ ಪೂಸೆ ಹನಿಪ ಮೂತ್ರರೋಗ ಗುಣ.

ಶುಕ್ಲಪ್ರಮೇಹಕ್ಕೆ :—ಹೊಲಿಯ ಸೊಪ್ಪು, ಹಿಟ್ಟುಳಿಕೆಯ ಸೊಪ್ಪು, ಜೀರಿಗೆ, ಇವಂ ಸಮಾನಂಗೊಂಡು ಹಸುವಿನ ಹಾಲಲ್ಲಿ ಕುಡಿಯೆ ಹತ್ತು ದಿನಕ್ಕೆ ಮಾಣ್ಗುಂ. ತ್ರಿಫಲೆ, ದೇವದಾರು, ಅರಿಸಿನ, ಹಾವುಮೆಕ್ಕೆಬೇರು, ಭದ್ರಮುಸ್ತೆ, ಇವಂ ಕಷಾಯವಂ ಕಾಸಿ ಈ ಕಷಾಯದೊಳು ಜೇನುತುಪ್ಪವಂ ಬೆರಸಿ ಕುಡಿಯೆ ಇಪ್ಪತ್ತು ತೆರದ ಪ್ರಮೇಹ ಮಾಣ್ಗುಂ. ಶ್ರೀತುಳಸಿಯ ರಸ, ಒಳ್ಳೆಎಣ್ಣೆ, ನಿಂಬೇಹುಳಿ, ಈ ಮೂರನ್ನೂ ಸಮಾನಂಗೊಂಡು ಮೂರು ದಿನ ಕುಡಿಯಲು ಶುಕ್ಲಪ್ರಮೇಹ ಮಾಣ್ಗುಂ. ಉಪ್ಪು ಹುಳಿ ವರ್ಜ್ಯ. ಕಿರುನೆಲ್ಲಿಯ ಸಮೂಲ, ಜೀರಿಗೆ, ಸಕ್ಕರೆ, ಸಹ ಈ ಮೂರನ್ನೂ ನೀರಿನಲ್ಲಿ ಅರೆದು ಕುಡಿಯೆ ಮಾಣ್ಗುಂ. ಹುಳಿ, ಉಪ್ಪು ವರ್ಜ್ಯ.

ಪ್ರಮೇಹಕ್ಕೆ :—ಆದಿತ್ಯವಾರ ವಡವರದ ಬೇರಂ ತಂದು ಆಡಿನ ಹಾಲಿನಲ್ಲಿ ಮೂರು ದಿನ ಕುಡಿಯಲು ಸಾವಕ್ಕಿನುಚ್ಚಿನ ಹಾಗೆ ಪ್ರಮೇಹದ ಕಲ್ಲು ಒಡೆದು ಜಲದಲ್ಲಿ ಬೀಳುವುದು. ಬೆಲ್ಲದ ಬೀಜ, ಅರ್ಧವನ್ನು ಎಳನೀರ ಮುಗುಳ ತೆಗೆದು ಅದರಲ್ಲಿ ಹಾಕಿ ಇಬ್ಬನಿಯಲ್ಲಿ ಇರಿಸಿ ಉದಯದಲ್ಲಿ ತೆಗೆದು ಅರೆದು ಸಕ್ಕರೆಯಂ ಹಾಕಿ ಮೂರು ದಿನ ಕುಡಿಯೆ ಕಲ್ಲು ಒಡೆದು ಬೀಳುವುದು. ಕೊರಗಣಿಕೂಗನ ಗೆಡ್ಡೆಯಂ ಆದಿತ್ಯವಾರ ತಂದು ಹಸುವಿನ ಹಾಲಿನಲ್ಲಿ ಅರೆದು ಸಕ್ಕರೆಯಂ ಹಾಕಿ ಮೂರು ದಿನಂ ಕುಡಿಯೆ ಪ್ರಮೇಹದ ಕಲ್ಲು ಬೀಳುವುದು. ಪಥ್ಯ ಹೆಸರೆಸರು, ಮಜ್ಜಿಗೆ ಓಗರ. ಹುರುಳಿಯ ಹಾಲಂ ಉತ್ತರಣಿಯ ಬೂದಿಯಂ ಸಹವಾಗಿ ಕೂಡಿಸಿದರೆ ಪ್ರಮೇಹದ ಕಲ್ಲು ಒಡೆದು ಬೀಳುವುದು. ಮಲ ಮೂತ್ರ ಕಟ್ಟಿದರೆ ಹಳೇಹಣ್ಣಿಯ ಬೇರಂ ನೀರಲ್ಲಿ ಅರೆದು ಕುಡಿಯೆ ಗುಣ. ಇಂಗು ಗ ೧ ತೂಕ, ಚವುಳು ಗ ೧ ತೂಕ, ಜೀರಿಗೆ ಗ ೧ ತೂಕ, ಈ ೩ನ್ನೂ ಅರೆದು ಅವುಡಲದ ಎಣ್ಣೆಯಲ್ಲಿ ಕುಡಿಯೆ ಗುಣ. ಬೆಳತಿಗೆ ಅಕ್ಕಿ ಮುಗಳು ಅಕ್ಕಿಯಾಗಿ ಕುದಿಯುವಾಗ ಗಂಜಿಯಂ ತೆಗೆದುಕೊಂಡು ಆದರೊಳು ನಿಂಬೇಹಣ್ಣಂ ಹಿಂಡಿ ಸಕ್ಕರೆಯಂ ಹಾಕಿ ತೆಗೆದುಕೊಳ್ಳಲು ಜಲ ಬಿಡುವುದು. ಮಂಡಸಿಗೆಸೊಪ್ಪಿನ ರಸದಲ್ಲಿ ಹರಳೆಣ್ಣೆ ಸಹ ಕುಡಿಯೆ ಮೂತ್ರ ಬಿಡುವುದು. ಹಳೇಹುಣಸೇಹಣ್ಣು, ಉಪ್ಪುನೀರು, ಗಂಡುಸಿಗೇಕಾಯಿ, ಇವಂ ಅವುಡಲದ ಎಣ್ಣೆಯಲ್ಲಿ ಅರೆದು ಅದನ್ನೇ ಬತ್ತಿಯ ಮಾಡಿ ಆಸನಕ್ಕೆ ಇರಿಸಲು ವಿಸರ್ಜನೆ. ಹಿದುಕಿ.........ನೆ ಬೇರಿನ ತಿಗಡು ಹಸಿಹಾಲಲ್ಲಿ ಆಗಲೀ, ಎಮ್ಮೆ ಬೆಣ್ಣೆಯಲ್ಲಾಗಲೀ, ಆಡಿನ ಹಾಲಲ್ಲಿಯಾಗಲೀ ಸಣ್ಣನಾಗಿ ಅರೆದು ಅರುವೆಯಲ್ಲಿ ಶೋಧಿಸಿಕೊಂಡು ಸಕ್ಕರೆಯಂ ಬೆರಸಿ ಅರ್ಧ ಸೇರಂ ಕುಡಿಯೆ ಆ ಕ್ಷಣದಲ್ಲಿಯೇ ವಿಸರ್ಜನೆ.

ಕೃತ್ರಿಮಕ್ಕೆ ಲಕ್ಷಣ :—

ಆಲಸ್ಯಂ ಕುರುತೇ ಜಾಡ್ಯಂ ಶ್ವಾಸಕಾಸಬಲಕ್ಷಯಂ ।
ರಕ್ತಸ್ರಾವಂ ಶೂಲಶೋಫಂ ಪೀಡಾಂ ಚಕ್ಷುರ್ವಿಲಕ್ಷಣಂ ॥
ಕೇಶಚ್ಯುತಂ ಶುಷ್ಕಕಾಸಂ ಪ್ರಲಾಪಂ ಹೃದಿ ವೇದನಾಂ ।
ಹರಿದ್ರಾವರ್ಣಸರ್ವಾಂಗಂ ಕೃತ್ರಿಮವ್ಯಾಧಿಲಕ್ಷಣಂ ॥

ಗೋದುಂಬೆಸೊಪ್ಪು ತುಳಿದು ಉಬೆಗೆ ಹಾಕಿ ರಸ......................ರಸಿ ತಪಸೀ, ಮೆಣಸು, ಎರಡು ವರಹ ತೂಕ ಹಾಕಿ ಸಹ ಕೊಳ್ಳಲು ಗುಣ. ಹಾವುಮೆಕ್ಕೆಯ ಬೇರು ಒಂದು ಒಳಹಿಡಿ, ಹಿರಿಮದ್ದಿನಬೇರು ಅಡಿಕೆಗಾತ್ರ, ಕಿರುಕುಸಾಲೆಬೇರು, ೩ ನೆಲಗುಳ್ಳದ ಬೇರಿನ ತಿಗಡು, ಬಿಳಿಗಣಜಿಲೆಬೇರು ಎರಡು ಪಾಲು, ಈ ಐದು ಬಗೆಯನ್ನು ಮೂರು ನಿಂಬೇಹೋಳ ಹಿಂಡಿಕೊಂಡು ಸಣ್ಣನಾಗಿ ಅರೆದು ಒಳನಿಂಬೇಹೋಳ ಬೇರೆಯಾಗಿ ಹಿಂಡಿಕೊಂಡು ಈ ಹುಳಿ ಎರಡರಷ್ಟು ಒಳ್ಳೆಣ್ಣೆಯ ಕದಡಿಕೊಂಡು ಒಂದು ದಿನಕ್ಕೊಂದು ತೆಗೆದುಕೊಳ್ಳುವುದು. ಕೊಂಬುವ ಕ್ರಮ :—ಆದಿತ್ಯವಾರ ಹಗಲು ಅಭ್ಯಂಗನವಾಡಿ ಆಮೇಲೆ ಹಸುವಿನ ಹಾಲೋಗರ ಊಟವಾಡಿ ರಾತ್ರಿಯಲ್ಲಿ ತೆಗೆದುಕೊಂಡು ಅಂಗತಂಗನಾಗಿ ಕಾಲ ಗೋಡಗೆ ಒದ್ದುಕೊಂಡು ಎದೆಯಲ್ಲಿ ಔಷದ ನಿಲುವ ಹಾಗೆ ಒಂದು ಘಳಿಗೆ ಇದ್ದು ಆ ಮರುದಿನ ಹಾಲುಅಂಬಲಿಯ ಊಟಮಾಡೋಣ. ಬೆಳಗ್ಗೆ ತುಪ್ಪ, ಮೆಣಸು ಊಟ

ಮಾಡೋಣ. ಗುಣವಾಗುವುದು. ಇಂತೆರಡುವೇಳೆ ವಿರೇಕವಾದರೆ, ಕುಟಿಲವಿಧ ಗಂಟು ಗಂಟಾಗಿಹುದು ಗುಣ.

ಇನ್ನೊಂದುಕ್ರಮ :—ಶನಿವಾರದಿನ ಅಭ್ಯಂಗ ಮಾಡೋಣ. ಅಭ್ಯಂಗವಾದೊಡನೆ ಕೊಡುವ ಔಷಧ—ಹಾವುಮೆಕ್ಕೆಬೇರಿನ ಸಮಾನ ನಿಂಬೇಹುಳಿ, ಎಣ್ಣೆ, ಈ ಮೂರು ಸಮ ಭಾಗ ಅರಿಸಿ ಮೀಸಿ ಇವ ಸೇರಿಸಿ ಊಟಮಾಡಿ ಬೇಗ ತೆಗೆದುಕೊಳ್ಳೋಣ. ವಾಂತಿಯಾ ದರೂ ಒಳ್ಳೆಯದು, ದಕ್ಕಿದರೂ ಒಳ್ಳೆಯದು. ಆ ಬೆಳಗಾಗೆ ಅಪಾರ ಬೇಳೆ ಹಾಕಿದ ಹೆಸರು ಅಪಾರ ಕಪ್ಪು ಹಸುವಿನ ಹಾಲು ಹಾಕಿಕೊಂಡು ಹೊಟ್ಟೆತುಂಬ ಊಟಮಾಡಲು ದೇಹದೊಳ ಗಿದ್ದದ್ದು ಗಂಟುಗಂಟಾಗಿ ಮಲದಲ್ಲಿ ಬಿದ್ದುಹೋ(ಗುವುದು.) ಆಮೇಲೆ ಕೃತ್ರಿಮಹರ ಔಷಧಗಳ ಸೇವೆ ಮಾಡುವುದು.

ಚಾತುರ್ಥಿಕಕ್ಕೆ :—ಇವುದ......ಹಿರಿಮದ್ದಿನ ಸೊಪ್ಪಿನ ರಸದಲ್ಲಿ ನೆನೆಯಿಕ್ಕಿ ಕಡಲೆ ತೋರಗುಳಿಗೆಯ ಮಾಡಿ ಬಿಸಿನೀರಲ್ಲಿ ಮೂರು ಗುಳಿಗೆಯ ಕೊಳ್ಳುವುದು.

ಬಹುಮೂತ್ರಕ್ಕೆ :—ಸರದಾಳಿಯ ಸಮೂಲವಂ ತಂದು ನಿಂಬೇಹುಳಿಯಲ್ಲಿ ಕೊಳ್ಳಲು ಗುಣ. ಕೊಳವಳಿಕೆಯ ಬೀಜವಂ ಪುಡಿಮಾಡಿ ಹಾಲಲ್ಲಿ ತಳಿಯಲು ಪುಡಿಯಾಗು ವುದು. ಅದ ಉಂಡೆಯ ಮಾಡಿ ಹಾಲು ಸಕ್ಕರೆಯಲ್ಲಿ ಕೊಳ್ಳಲು ಗುಣ. ಉತ್ತರಣೆಯ ಅಕ್ಕಿಯಂ ತಂದು.........ಪಾನವ ಅಟ್ಟು ಉಣ್ಣಲು ಗುಣ. ಕಹಿಸೋರೆಯ ರಸ, ವೀಳ್ಯದೆಲೆ ಯ ರಸ, ಈ ಎರಡು ರಸಗಳಲ್ಲಿ ಅರೆದು ಕೊಳ್ಳಲು ಗುಣ. ಎಮ್ಮೆಸಗಣಿಯನ್ನು ನೀರಲ್ಲಿ ಕದಡಿ ಶೋಧಿಸಿಕೊಂಡು, ಅರಸಿನದಷ್ಟು ರಸದಲ್ಲಿ ಏಲಕ್ಕಿ ಪುಡಿಮಾಡಿ ಹಾಕಿ ೧೨ ದಿನ ಕೊಳ್ಳಲು ಗುಣ. ಹುಳಿಶಲಧಿ ವರ್ಜ್ಯ. ಪಾದರಿಯ ಹೂವಂ ಸುಟ್ಟು ಭಸ್ಮವಂ ಮಾಡಿ ಆಡಿನ ಹಾಲಲ್ಲಿ ಕುಡಿಯೆ ಗುಣ.

ಬಹುಮೂತ್ರಕ್ಕೆ :—ಕೊಳವಳಿಕೆಯ ಬೀಜ, ಉದ್ದು, ಇವಂ ಸಮಾನಂಗೊಂಡು ಚೂರ್ಣ ಮಾಡಿ ಎಮ್ಮೇವೊಸರಲ್ಲಿ ಕಲಸಿ ಕೊಳ್ಳಲು ಬಹುಮೂತ್ರ ಮಾಣ್ಗುಂ.

ಮೇಹಕ್ಕೆ :—ಬೇಲದ ಬೀಜ, ಕಗ್ಗಲಿಸೆಕ್ಕೆ, ಮರದರಿಸಿನ, ನೆಲದಾಳೆಯ ಬೇರು, ಅರಿಸಿನ, ಅಗುಳುಶುಂಠಿ, ಮಾವಿನ ಬೀಜ, ಭದ್ರಮುಸ್ತೆ, ಅಂದರೆ ಕೊಡನಾರಿಗೆಡ್ಡೆ ಇಷ್ಟನ್ನೂ ಮುಳ್ಳುನಿವಂದಿಗೆ ಸೊಪ್ಪು ಇವು ಸಹ ಕೊಂಡು ರಸವ ಹಿಂಡಿಕೊಂಡು ಈ ರಸದಲ್ಲಿ ಏಳುದಿನ ತೆಗೆದುಕೊಳ್ಳೆ ಪಥ್ಯದೊಳಿರೆ ಸಕಲ ಮೇಹ ಗುಣ. ಕಾಂತಸಿಂದೂರ ವ ೩ ಹ ತೂಕ, ರಸಭಸ್ಮ ಗ ೨ ತೂಕ, ಸೀಸಭಸ್ಮ ೨ ತೂಕ, ಮಣಿಸಿಲೆ ಗ ೨ ತೂಕ, ಬೆಳುಗಾರ ಇವು ಪ್ರತ್ಯೇಕ ೧ ತೂಕ ೧ ತೂಕ, ಮಂಡೂರ, ಅಭ್ರಕಸಿಂದೂರ, ಬೇಲದ ಬೀಜ, ಅಳಲೆ ಕಾಯಿ, ನೆಲೆದಾಳಗೆಡ್ಡೆಯ ಚೂರ್ಣ, ಇವು ಪ್ರತ್ಯೇಕ ೧೬ ತೂಕ, ಒಂದು ಹಲ ನಾಭಿ ತೂಕಕ್ಕೆ ತೆಂಗಿನ ಹೊಂಬಾಳೆಯನ್ನು ಮರದವೇರಿಂದ ನೆಲಮುಟ್ಟದ ಹಾಗೆ ಇಳುಹಿ ಕೊಂಡು ಅಂತರದಲ್ಲಿಯೇ ಒಣಗಿಸಿ ಚೂರ್ಣಮಾಡಿ ಆ ಚೂರ್ಣ, ಗರುಗ, ಅಗುಳುಶುಂಠಿ,

ಮೆಣಸಿನ ಸಮಾನಂ ಗ ೨ ಕ್ಕೆ ಅಡಿಕೆ ಹಗಿನು, ಮುತ್ತುಗ ಹಗಿನು, ಬೇಲದ ಹಗಿನು, ಈ ಪ್ರತ್ಯೇಕಕ್ಕೆ ಗ ೧೩ ತೂಕ, ಇಷ್ಟಂ ಚೂರ್ಣವ ಮಾಡಿ ತ್ರಿಫಲೆ ಕಷಾಯದಲ್ಲಿ ಸಣ್ಣ ವಾಗಿ ಅರೆದು ಕಡಲೆಯ ಪ್ರಮಾಣ ಗುಳಿಗೆಯಂ ಮಾಡಿ ಒಂದು ಗುಳಿಗೆ ಜೇನುತುಪ್ಪದಲ್ಲಿ ಕಲಸಿ ಕೊಡಲು, ಶುಕ್ಲಪ್ರಮೇಹ, ಮೂತ್ರಕೃಛ್ರ, ಮಾಂಸಮೇಹ, ಅಸಾಧ್ಯಮೇಹ ಮೊದಲಾದವು ಗುಣ. ಚಂದ್ರಕಾಂತಪರ್ಣವೆಂದರೆ – ಕೆಲವು ವಿಷ್ಣುಕ್ರಾಂತಿಪರ್ಣವಂ ತಂದು ಕರದಿಂ ಮರ್ದಿಸಿ ಬಂದ ನೊರೆಕೂಡೆ ಒಂದುಪಾವು ರಾಯಪುರಿಯ ಸಕ್ಕರೆಯಿಂದ ಕಲ್ಕ ಮಾಡಿ ಕೂಡಿ ಮೂರು ದಿನ ಕೊಳ್ಳಲು ದ್ವಂದ್ವಮೇಹನಾಶ. ಕಾಂತಿಗಿಟ್ಟ ವೀರ್ಯ ವರ್ಧನಂ. ನಡುಪ್ರಾಯದ ಈಚಲಮರದ ಬೇರಂ ತಂದು ಶೇಕರಿಸಿ ಮಜ್ಜಿಗೆಯಲ್ಲಿ ನೆನೆ ಇಕ್ಕಿ ಬೆಳಗಾಗೆ ಒಂದು ಹಿಡಿ ಬೇರನ್ನು ಸಣ್ಣನಾಗಿ ಮಜ್ಜಿಗೆಯಲ್ಲಿ ತಿರುಹಿ ಮಜ್ಜಿಗೆಯ ಹೊಯ್ದು ಶೋಧಿಸಿಕೊಂಡು ಸೊಲ್ಲಿಗೆ ರಸವಂ ಸೇವಿಸಲು ಶುಕ್ಲ, ರಕ್ತ, ಎರಡು ಬಗೆಯ ಮೇಹ ನಾಶವಾಗುವುದು. ಗುಣವಾಗುವುದು. ಪಥ್ಯ ಮಜ್ಜಿಗೆಯ ಅನ್ನ, ಲವಣ ವರ್ಜಿತ, ಮೂರು ದಿನ ಕುಡಿಯಲು ಗುಣವಾಗುವುದು. ಅಸಾಧ್ಯಕ್ಕೆ ಮತ್ತೂ ಎರಡು ದಿನ ಕುಡಿಯಲು ಗುಣ. ಸರದಾಳಿಯ ಬೇರಂ ತಂದು ನೀರಲ್ಲಿ ಕುಟ್ಟಿ ರಸವಂ ತೆಗೆದುಕೊಂಡು ಒಂದು ಸೊಲ್ಲಿಗೆ ರಸವಂ ಕುಡಿಯಲು ಮೂರು ದಿನಕ್ಕೆ ಗುಣ. ಮತ್ತು ನಾಲ್ಕು ಎಂಟು ದಿನ ಈ ಬೇರಿನ ಹರುಕನ್ನು ತೆಗೆದು ಅಡಿಕೆಯ ಸಂಗಡ ಕತ್ತರಿಸಿ ವೀಳ್ಯವ ಹಾಕಿಕೊಂಡು ಪಾನ, ರಸವಂ ನುಂಗುವುದು, ಗುಣ. ಬಿಡದೇ ಕಾಲು ಮಂಡಲ ಸೇವಿಸಲು ಗುಣ. ಪಥ್ಯ ಹಾಲು ಮೆಣಸು ಹುಳಿ ವರ್ಜ್ಯ.

ನಂದ್ಯಾವರ್ತದಲೈಃ ಪಿಷ್ಟ್ವಾ ವೃಷಪಲ್ಲವಮೇವ ಚ ।
ತೈಲಂ ವಿಪಾಕಯೇನ್ನೂನಂ ಮೇಹವಿಂಶತಿನಾಶನಂ ॥

ಹೊಟ್ಟೆಬೇನೆಗೆ :—ಬೊಬ್ಬುಲಿಯ ಒಳನಾರು, ಆವರಿಕೆಯ ತಿಗಡು, ದಾಳಿಂಬದ ಹೀಚು, ಅತಿಬಜೆ, ಇವು ಎಲ್ಲವನ್ನೂ ಮೊಸರ ನೀರ ಬಿಟ್ಟು ಅರೆದು ಹಸಿ ಅಡಿಕೆಯ ಗಾತ್ರ ಗುಳಿಗೆಯಂ ಮಾಡಿ ಉದಯದಲ್ಲಿ ಒಂದು ಗುಳಿಗೆ, ಸಂಜೆಯಲ್ಲಿ ಒಂದು ಗುಳಿಗೆ ನುಂಗಲು ಗ್ರಹಣಿ, ಹೊಟ್ಟೆಬೇನೆ, ಅತಿಸಾರ, ಇವು ಮಾಣುವುವು. ಪಥ್ಯ ಬೆಳತಿಗೆ ಅಕ್ಕಿಯೋಗರ, ಶುಂಠಿಯ ಪುಡಿ, ಎಣ್ಣೆ, ಕಟ್ಟುಮೊಸರು ಉಂಬುದು.

ಹೊಟ್ಟೆಬೇನೆಗೆ :—ಉತ್ತರಣಿಯ ಬೇರಂ ತಂದು ಸಣ್ಣನಾಗಿ ಎಮ್ಮೆಯ ಮೊಸರಲ್ಲಿ ಅರೆದು, ಅಡಿಕೆಯ ಗಾತ್ರ ಗುಳಿಗೆಯಂ ಮಾಡಿ ೩ ಗುಳಿಗೆಯಂ ಉದಯದಾಗ ಎಮ್ಮೆ ಮೊಸರಲ್ಲಿ ಮೂರು ದಿನಂ ಸೇವಿಸೆ ಹೊಟ್ಟೆಬೇನೆ ನಿಲ್ಲುವುದು. ಪಥ್ಯ ಮಜ್ಜಿಗೆ ಓಗರ.

ನುಣಚುನೆತ್ತರು ಹೋಗುವುದಕ್ಕೆ :—ಸುಣ್ಣ ಒಂದು ಭಾಗ, ಬೆಲ್ಲ ಎರಡು ಭಾಗ, ಇವಂ ಎಣ್ಣೆಯಲ್ಲಿ ಕಲಸಿ ಲೇಪನಂ ಮಾಡೆ ಹೊಟ್ಟೆನೆತ್ತರು ಮಾಣ್ಗುಂ. ಮತ್ತಂ ಕಾಡ ಬೆರಣೆಯಂ ಸುಟ್ಟು ಆ ಬೂದಿಯನ್ನು ಏಲಕ್ಕಿಚೂರ್ಣವಂ ಹಾಕಿ ಕಟ್ಟುಮೊಸರು, ಹಾಲಲ್ಲಿ ಅರೆದು ಗುಳಿಗೆಯಂ ಮಾಡಿ ಸೇವಿಸಲು ರಕ್ತ ನಿಲ್ಲುವುದು. ಕೊಡಸಿಗನ ತಿಗಡು, ಕಾಚು.

ಇವಂ ಕಟ್ಟುಮೊಸರಲ್ಲಿ ಅರೆದು ದಿನ ಒಂದಕ್ಕೆ ಮೂರು ಗುಳಿಗೆ ಲೆಖ್ಖದಲ್ಲಿ ಆ ಕಟ್ಟು ಮೊಸರಲ್ಲಿಯೇ ಮೂರು ದಿನ ತೆಗೆದುಕೊಂಡರೆ ಶ್ವೇತಾತಿಸಾರ, ರಕ್ತಾತಿಸಾರ, ಜ್ವರ ಸಹ ಮಾಣ್ಗುಂ.

ಹೊಟ್ಟೆಬೇನೆಗೆ:—ದಾಳಿಂಬದ ಹೀಚು, ಮಾವಿನ ಬೀಜ, ಬೇಲದ ಹಣ್ಣು, ಬೆಲ್ಲವತ್ತದ ಹೀಚು, ಎಲವದ ಹಗಿನು, ಧಾತಕೀಕುಸುಮ, ಅಜಮೋದ, ಅತಿಬಜೆ, ಕೊಡಸಿಗನ ತಿಗಡು, ಭದ್ರಮುಸ್ತೆ, ಓಮ, ಗಜ್ಜುಗದ ಬೀಜ, ಎರಡು ಜೀರಿಗೆ, ಲೋಧ್ರ, ಶುಂಠಿ, ಸಾಸುವೆ, ಇವಂ ಸಮಾನಂಗೊಂಡು ಚೂರ್ಣವಂ ಮಾಡಿ ಎಮ್ಮೆಮೊಸರಲ್ಲಿ ಕೊಳ್ಳಲು ಆಮರಕ್ತ ಕೂಡಿ ಹೋಗುವುದೆಲ್ಲವೂ ನಿಲ್ಲುವುದು. ಹೊಟ್ಟೆ ನುಲಿನುಲಿದು ನೋಯುವಂಥಾ ನಾನಾ ಮಲ, ಜ್ವರಾತಿಸಾರ, ಇನಿತುಂ ತೀರ್ಗುಂ. ಮೂಲವ್ಯಾಧಿ ಕೂಡಿದ ಅತಿಸಾರ, ಜ್ವರ, ಗ್ರಹಣಿ, ಸರ್ವರೋಗಂ ಮಾಣ್ಗುಂ. ಕಸಕಸ, ಎಲವದ ಹಗಿನು, ಧಾತಕೀಕುಸುಮ, ಧೂಪದ ಹಳುಕು, ಜಾಯಿಕಾಯಿ, ಇವು ಐದೂ ಎರಡೆರಡು ವರಹದ ತೂಕ, ದೀಪ್ಯ ಎಂದರೆ ಓಮ ಐದು ವರಹ ತೂಕ, ಕನಕಪತ್ರವೆಂದರೆ ಉಮ್ಮತ್ತದ ಸೊಪ್ಪು ಒಣಗಿಸಿದ್ದು ವರಹ ತೂಕ, ಇಷ್ಟನ್ನೂ ಚೂರ್ಣವಂ ಮಾಡಿ, ಗೋಮೂತ್ರ ಹುಯಿದು ಹಾಕುವುದು. ಈ ಚೂರ್ಣವಂ ನಿತ್ಯವೂ ವರಹ ತೂಕದಷ್ಟು ಕಟ್ಟುಮೊಸರಲ್ಲಿ ಕೊಡಲು ಗುಣ. ಮತ್ತಂ ಅಗುಳುಶುಂಠಿ, ಎಲವದ ಹಗಿನು, ಧಾತಕೀಕುಸುಮ, ಭದ್ರಮುಸ್ತೆ, ಬೆಲ್ಲವತ್ತದ ಹೀಚು, ಹೆಗ್ಗುಳ್ಳದ ಬೇರು, ಇವಂ ಮಜ್ಜಿಗೆಯಲ್ಲಿ ಅರೆದು ಕೊಡೆ ಗುಣ. ಆಡುಸೋಗೆ, ಯಷ್ಟಿಮಧುಕ, ಇವಂ ಒಪ್ಪಿಡಿಯ ತಂದು ಚೂರ್ಣವಂ ಮಾಡಿ ಜೇನುತುಪ್ಪದಿಂದ ಕಲಸಿ ಕೊಳ್ಳಲು ಗುಣ. ಎಲಚಿ ಕೊನರು ಹಳೇ ಮಜ್ಜಿಗೆಯಲ್ಲಿ ಅರೆದು ಕೊಡೆ ಆಗಲೇ ನಿಲ್ಲುವುದು.

ಹೊಟ್ಟೆರಕ್ತಹೋದರೆ:—ಹುಣಸೇಎಲೆ ಕುಡಿಯಂ ತಂದು ಮೆಂತ್ಯೆಯ ಹಾಕಿ ಎರಡು ಬಗೆಯನ್ನೂ ಕಟ್ಟುಮೊಸರ ಬಿಟ್ಟು ಸಣ್ಣನಾಗಿ ಅರೆದು ಅಡಿಕೆಯ ಗಾತ್ರ ಗುಳಿಗೆಯಂ ಮಾಡಿ ಮೂರುದಿನಂ ಕೊಳ್ಳಲು ನಿಲ್ಲುವುದು. ಪಥ್ಯ ಮೊಸರೋಗರ. ಹಿಂಗು, ಶುಂಠಿ, ಸೈಂಧವಲವಣ, ಇವಂ ಸಮಾನಂಗೊಂಡು ಚೂರ್ಣವಂ ಮಾಡಿ ಬಿಸಿನೀರಲ್ಲಿ ಕುಡಿಯೆ, ನಾಭಿ ಶೂಲೆ, ಹೊಟ್ಟೆಬೇನೆ, ಅತಿಸಾರ ಮಾಣ್ಗುಂ. ಲವಂಗ ೨ ತೂಕ, ಹಿಪ್ಪಲಿ ೨ ತೂಕ, ಎಲವದ ಹಗಿನು ೨ ಭಾಗ, ಧಾತಕೀಕುಸುಮ ೨ ಭಾಗ, ಸೈಂಧವಲವಣ ೨ ಭಾಗ, ಬೆಲ್ಲ ವತ್ತದ ಹಣ್ಣು ೨ ಭಾಗ, ಓಮ ೨ ಭಾಗ, ಜೀರಿಗೆ ೨ ಭಾಗ, ಮಾವಿನಬೀಜ ೨ ಭಾಗ, ಹೊಂಬಗೆ ೯ ಭಾಗ, ಹಲ ೧೪ಕ್ಕೆ ಬೀಳಿಸಿ ಗ ಒಂದನ್ನು ಚೂರ್ಣಮಾಡಿ ಕಟ್ಟುಮೊಸರಲ್ಲಿ ಕೊಳ್ಳಲು ಹೊಟ್ಟೆಬೇನೆ ಮಾಣ್ಗುಂ.

ಅತಿಸಾರಕ್ಕೆ :—ಪಾವಟೆಯ ಮೂಲವಂ ತಂದು ಮೊಸರಲ್ಲಿ ಅರೆದು ಕೊಳ್ಳಲು ಗುಣ. ದಾಳಿಂಬದ ಸಮೂಲವಂ ತಂದು ಮೊಸರಲ್ಲಿ ಅರೆದು ಕೊಳ್ಳಲು ಗುಣ, ಹೊಟ್ಟೆಬೇನೆ ಗುಣ, ಕೋಲುಮುಕ್ಕನ ಬೇರಂ ಪುಡಿಮಾಡಿ ಗೇರುಕರುಕಲು ಕಲಸಿ ಕಟ್ಟುಮೊಸರಲ್ಲಿ ಕೊಳ್ಳೆ ಗುಣ. ಅತ್ತಿಯ ಒಳನಾರು, ಈ ಕಾಯಿ ರಸದಲ್ಲಿ ಲವಂಗ ಸಹ ಕಲ್ಕವಂ ಮಾಡಿ ಕೊಳ್ಳಲು

ಗುಣ. ಕಿರುಕುಸಾಲೆಯ ಬೇರಂ ನೀರಲ್ಲಿ ಅರೆದು ಮಧುವಿನಿಂದ ಕೊಳ್ಳಲು ರಕ್ತಕ್ಕೆ ಗುಣವಾಗುವುದು.

ಮೂತ್ರಕಲ್ಲಿಗೆ ಗುಳಿಗೆಯ ಮಾಡುವ ಕ್ರಮ :—ಕೆಂಪಿನ ಅಂಕೋಲಬೇರು, ಹುಳಿಸೊಪ್ಪು, ಗೇರು, ದೇವಮುಳ್ಳು, ಬಿಳಿಕಣಿಕೆಬೇರು, ಈಶ್ವರಿಬೇರು, ಗಾಯತ್ರೀಬೇರು, ಇದೆಲ್ಲಾ ಸಮಾನಾಂಶ, ಇವಕ್ಕೆ ಸಮ ಇಂಗು, ಅಂಬಿಲದಲ್ಲಿ ಅರೆದು ಮೂತ್ರಕಲ್ಲಿಗೆ ಗುರುಗುಂಜಿಯ ಪ್ರಮಾಣಕ್ಕೆ ಕೊಡುವುದು.

ಮೂತ್ರರಕ್ತಕ್ಕೆ :—ಚತುರ್ಭಾಗ ಚವ್ರಡಂಗಿರಸ, ಆವಿನ ನೊರೆಪಾಲು ಕುಡಿಸುವುದು. ಕಿರುಕುಸಾಲೆ ರಸದಲ್ಲಿ ತ್ರಿವಾರು ಕೂಡಿ, ನಾರುಬೇಳೆಸೊಪ್ಪು, ಬೆಳ್ಳುಳ್ಳಿಬೇಳೆ, ಕ್ರಮುಕ ಅರೆದುಕೊಂಡು ಸೊಂಡೇಕಾಯ ಗಾತ್ರ ಗುಳಿಗೆ ಮಾಡಿ ಕೊಳ್ಳೆ ಮಾಣ್ಗುಂ.

ಅತಿಸಾರಕ್ಕೆ :—ಕಾಡೆಳ್ಳು, ಗೇರುಬೀಜ, ಗರುಗರಸ, ಬೇಲ, ನಿಂಬೇಹುಳಿ, ಸುರಸುರಿಕೆ ಹೂವಿನ ರಸ, ಹಾಲಿವಾನ ರಸ, ಒಳ್ಳೆಣ್ಣೆ ಇನೆಲ್ಲಾ ಸಮಾಂಶ ಇಕ್ಕಿ, ಯಷ್ಟಿಮಧುಕ, ಗಿಲಿಗಿಲಿಕೆ, ಸಂಪಿಗೆಮುಗುಳು, ಲಾಮಂಚ, ಕಟುಕರೋಹಿಣಿ, ಮಂಜಿಷ್ಠೆ, ಇವೆಲ್ಲಾ ಚೂರ್ಣ ಹಾಕಿ ಕಾಸಿ ಹದದಲ್ಲಿ ತೆಗೆದು ತಲೆಗೆ ಲೇಪಿಸುವುದು.

ಬಹಳ ಹೋದರೆ :—ಬೇವಿನ ಚಿಗುರಂ ಹಂಚಿನಲಿವೆಣ್ಣೆನಿಂ ಅರೆದು ಮಧುವಿನಿಂದ ಕೊಳ್ಳಲು ಗುಣ. ಮಾವಿನ ಓಟೆಕರುಕು, ಹುರಿದ ಜೀರಿಗೆ, ಎರಡೂ ಅರೆದು ಮಧುವಿನಿಂದ ಕೊಳ್ಳಲು ಅತಿಸಾರ, ಹೊಟ್ಟೆಬೇನೆ ಮಾಣ್ಗುಂ. ನೆಲ್ಲಹರಳು ತುಪ್ಪ ಬೆರಸಿ ಕೊಳ್ಳಲು ಗುಣ. ಹಿರವುಡಲದಬೇರಂ ಎಮ್ಮೇನೊಸರಲ್ಲಿ ಅರೆದು ಕುಡಿಯೆ ಗುಣ. ಬೇಲದ ಕುಡಿ, ಮೆಣಸು, ಶುಂಠಿ, ಹಿಪ್ಪಲಿ, ಅಳಲೇಕಾಯಿ, ಸೈಂಧವಲವಣ, ಇವಂ ಬಿಸಿನೀರಿಂದ ಕೊಳ್ಳೆ ಗುಣ. ಲವಂಗ, ಓಮ, ಶುಂಠಿ, ಹಿಪ್ಪಲಿ, ಅಳಲೇಕಾಯಿ, ಸೈಂಧವಲವಣ, ಎಲವದ ಹಗಿನು, ಶುಂಠಿ, ಧಾತಕೀ ಕುಸುಮ, ಇವಂ ಮಜ್ಜಿಗೆಯಲ್ಲಿ ಅರೆದು ಕದಡಿ ಅದರೊಳಗೆ ಕಲ್ಲುವ ಹಾಕಿ ಕೊಳ್ಳಲು ತೀವ್ರವಾಗಿ ಹರಿವ ಅತಿಸಾರ ಮಾಣ್ಗುಂ.

ಗ್ರಹಣಿಗೆ :—ಅಳಲೇಕಾಯಿ, ಚಿತ್ರಮೂಲ, ಇವು ಎರಡನ್ನೂ ಚೂರ್ಣವಂ ಮಾಡಿ ತುಪ್ಪದಲ್ಲಿ ಅಟ್ಟು ವಿಳಂಗ, ತ್ರಿಕಟುಕವ ಪ್ರತಿಪಾಕದಲ್ಲಿ ಇಕ್ಕಿ ಲೇಹ್ಯಂ ಮಾಡಿ ಕೊಳ್ಳಲು ಗ್ರಹಣಿ ಗುಣ. ದಾಳಿಂಬದ ಬೀಜ, ಮಾವಿನ ಬೀಜ, ಬೇಲದ ಹಣ್ಣು, ಬೆಲ್ಲವತ್ತದ ಬೀಜ, ಎಲವದ ಹಗಿನು, ಮೆಕ್ಕೆಬೇರು, ಜೀರಿಗೆ, ಸಾಸುವೆ, ಕೊಡಸಿಗನ ಸೆಕ್ಕೆ, ಇವಂ ನೊಸರಿಂದ ಅರೆದು ಕೊಳ್ಳಲು ಗುಣವಾಗುವುದು.

ಸಂಬಾರವಳ್ಳಿಯನ್ನು ಸಣ್ಣನಾಗಿ ಅರೆದು ಎಣ್ಣೆಯಲ್ಲಿ ಕಲಸಿ ಕುಡಿಯಲು ನಾನಾಬಗೆ ಹೊಟ್ಟೆಬೇನೆಗಳೆಲ್ಲಾ ಗುಣ. ಅಗುಳುಶುಂಠಿ, ಮೆಣಸು, ಇವಂ ಅರೆದು ನೊಸರಲ್ಲಿ ಕೊಡಲು ಗುಣ. ತ್ರಿಕಟುಕವಂ ಬಿಸಿನೀರಿಂದ ಅರೆದು ಕುಡಿಯೆ ಆಮಾತಿಸಾರ ಗುಣ. ಮಾವಿನ ಬೀಜದ ತಿರುಳು, ಗಜ್ಜುಗದ ತಿರುಳು, ಸೈಂಧವಲವಣ, ಬೇಲಬೇರುತಿಗಡು, ಇವಂ ಸಮಾನಂ

ಗೊಂಡು ಚೂರ್ಣವಂ ಮಾಡಿ ಕಾದ ಕಬ್ಬಿಣದ ಸೌಟಿನಲ್ಲಿ ತಿಲತೈಲವನೆರೆದು ಆ ಚೂರ್ಣವ ಹಾಕಿ ಗುಳಿಗೆಯ ಮಾಡಿ ಕೊಳ್ಳೆ ಎಲ್ಲಾ ಬಗೆಯ ಹೊಟ್ಟೆಬೇನೆಯು ಗುಣ. ಮಾವಿನ ಬೀಜ ಇಲ್ಲದಿದ್ದರೆ ಅಮರದವಳ್ಳಿತಿರುಳನ್ನು ಇದೇ ಪ್ರಕಾರದಲ್ಲಿ ತೆಗೆದುಕೊಳ್ಳುವುದು. ಓಮ, ಜೀರಿಗೆ, ಶುಂಠಿ, ಇವಂ ಮೊಸರಲ್ಲಿ ಕೊಳ್ಳಲು ಗುಣ. ಸರದಾಳಿಸೊಪ್ಪಂ ನಿಂಬೇಹುಳಿಯಲ್ಲಿ ಅರೆದು ಕೊಳ್ಳೆ ಗುಣಂ. ಬೆಳದಕಿಲ ಬೇರಂ ಮೊಸರಲ್ಲಿ ಅರೆದು ಕೊಳ್ಳೆ ಗುಣ. ಹಿಪ್ಪಲಿ ಮೂಲ, ಹಿಪ್ಪಲಿ, ಜೀರಿಗೆ, ಚವ್ಯ, ಶುಂಠಿ, ಇವಂ ಚೂರ್ಣವ ಮಾಡಿ ಬಿಸಿನೀರಲ್ಲಿ ಕುಡಿಯೆ ಶ್ಲೇಷ್ಮ, ಗ್ರಹಣಿ ಮಾಣ್ಬುಂ.

ಜ್ವರಾತಿಸಾರಕ್ಕೆ:—ಹೆಮ್ಮರದ ಸೆಕ್ಕೆ, ಅತಿಬಜೆ, ಗೇರಿನ ಗೆಡ್ಡೆ, ಶುಂಠಿ, ಬೆಲ್ಲವತ್ತದ ಬೀಜ, ದಾಳಿಂಬದಕಾಯಿಓಟೆ, ಇವಂ ಸಮಾನಂಗೊಂಡು ೧೮ ದಿನ ೧೩ ತೂಕ ಕಲ್ಕವಾಗಿ ಅರೆದು ಕೊಂಡರೆ ಜ್ವರಾತಿಸಾರ ಮಾಣ್ಬುಂ. ಶುಂಠಿ, ಅತಿಬಜೆ, ಗೇರಿನ ಗೆಡ್ಡೆ, ನೆಲಬೇವು, ಅಮರದ ಬಳ್ಳಿ, ಕೊಡಸಿಗನ ಬೀಜ, ಇವಂ ಸಮಾನಂಗೊಂಡು ಅಷ್ಟಾವಶೇಷ ಕಷಾಯ ಕಾಸಿ ಅತಿಬಜೆ ೧ ತೂಕವಂ ಪ್ರತಿಪಾಕದಲ್ಲಿ ಕೊಳ್ಳೆ ಜ್ವರಾತಿಸಾರ ಮಾಣ್ಬುಂ.

ಹೊಟ್ಟೆಶೂಲೆಗೆ, ಪಾರ್ಶ್ವಶೂಲೆಗೆ :—ಒಳ್ಳಿತಾದ ಮೆಣಸು ಹೊನ್ನು ತೂಕವನ್ನು ವೀಳ್ಯದೆಲೆಗೆ ತೊಡೆದು ಆ ಎಲೆ ಮೆಲ್ಲಲು ಹರ. ಇಂಗು, ಬಜೆ, ಚಿತ್ರಮೂಲ, ಶುಂಠಿ, ಓಮ, ಜೀರಿಗೆ, ಹಿಪ್ಪಲಿಕುಡಿ, ಅಳಲೇಕಾಯಿ, ನೆಲ್ಲಿಗಿಡ, ತಿಗಡೆ, ಇವಂ ಚೂರ್ಣವಂ ಮಾಡಿ ಮಾದಳದ ಹುಳಿಯಲ್ಲಿ ಕಲಸಿ ನೆಲ್ಲಿಕಾಯಷ್ಟು ಬಿಸಿನೀರಲ್ಲಿ ಕೊಳ್ಳಲು ಪಕ್ಕಶೂಲೆ ಮಾಣ್ಬುಂ. ಸುಣ್ಣವನ್ನು ಬೆಣ್ಣೆಯನ್ನುಕೂಡಿ ಕಲಸಿ ನುಂಗಲು ಹೊಟ್ಟೆಶೂಲೆ ಹರ.

ಹೊಟ್ಟೆ ಉರಿಯುವುದಕ್ಕೆ :—ಈಶ್ವರೀಬೇರು, ಅಗಳುಶುಂಠಿಯ ಬೇರು, ಇವಂ ನೀರಲ್ಲಿ ಅರೆದು ಕುಡಿಯೆ ಹೊಟ್ಟೆಉರಿ ಮಾಣ್ಬುಂ.

ಯೋನಿಶೂಲೆಗೆ :—ಸೋಮನಾಥನ ಇಂಗು ೧೧ ತೂಕವಂ ಅರೆದು ಆವಿನ ಹಾಲಲ್ಲಿ ಕಲಸಿ ದಿನ ೨೨ ದಿನ ಕೊಳ್ಳಲು ಯೋನಿಶೂಲೆ ಹರ.

ರಕ್ತ ಹೋಗುವುದಕ್ಕೆ :—ಬೆಲ್ಲವನ್ನು ಹಾಲಲ್ಲಿ ಕದಡಿ ಕುಡಿಯೆ ರಕ್ತ ನಿಲ್ಲುವುದು.

ಹೊಟ್ಟೆಶೂಲೆಗೆ :—ಹಾವುಮೆಕ್ಕೆಕಾಯಿ, ಸೈಂಧವಲವಣ, ಎರಡನ್ನೂ ಅರೆದು ಬಿಸಿ ನೀರಲ್ಲಿ ಕೊಳ್ಳಲು ಗುಣ.

ವಾತಕ್ಕೆ :—ತಾಳೇಓಲೆರಸದಲ್ಲಿ, ಎಕ್ಕದ ಬೇರಿನ ತಿಗಡ ಅರೆದು ಸೇವಿಸಲು ಮಾಣ್ಬುಂ. ಭೂತದ ಸಮೂಲವಂ ತಂದು ಕರಿಬತ್ತವ ಹಾಕಿ ಇಡಿದು ದಿನಕ್ಕೆ ಬೇಕಾದಷ್ಟು ಮೆಲ್ಲಲು ಶೂಲೆವಾತ ಮಾಣ್ಬುಂ. ಎಕ್ಕೆಹಾಲು, ಆಡಿನ ಹಾಲು, ಲೊಕ್ಕಿಸೊಪ್ಪಿನ ರಸ, ಹುಣಸೇ ಸೊಪ್ಪಿನ ರಸ, ಭಂಗಿಸೊಪ್ಪಿನ ರಸ, ಹೇಕಣಿಕೆ ರಸ, ಸಬ್ಬಸಿಗೆರಸ, ಅವುಡಲದ ಸೊಪ್ಪಿನ ರಸ, ಹಿಡಿಹಿಡಿಕೆಯ ಪತ್ರೆ, ಓಟೆಹೂವಿನ ರಸ, ನಿರ್ಗುಂಡಿಕೆಯ ರಸ, ನುಗ್ಗೆಯ ರಸ, ಇವೆಲ್ಲ ಸೊಪ್ಪಿನ ರಸವನ್ನೂ ಸಮಾನಂಗೊಂಡು ಅರೆದು ಕೊಳ್ಳೆ ವಾತ ಮಾಣ್ಬುಂ. ಗರುಗದ

ಬೇರನ್ನು ಗೋಮೂತ್ರದಲ್ಲಿ ಅರೆದು ಕೊಳ್ಳೆ ಲಂ ತೆರದ ವಾತ ಮಾಣ್ಗುಂ. ಇಂಗುಳದ ಸೆಕ್ಕೆಯ ಇಳಿಯ ಕಿವಿಚಿ ತಂದು ಹಳೇನೀರಲ್ಲಿ ಅರೆದು ದೇಹಕ್ಕೆ ಕೊಳ್ಳಲು ಸಂದುವಾತ ಮಾಣ್ಗುಂ. ಏಳುಸೆರೆ ಉದ್ದಿನ ಹಿಟ್ಟು, ಏಳುಸೆರೆ ಹುರುಳಿಯ ಹಿಟ್ಟು, ಅಂಗುರದ ಹಿಟ್ಟು ಏಳುಸೆರೆ, ಎಳ್ಳುಹಿಟ್ಟು ಏಳುಸೆರೆ, ಈ ನಾಲ್ಕು ಬಗೆ ಹಿಟ್ಟನ್ನು ಸಮಾನಂಗೊಂಡು ಈ ಚೂರ್ಣವಂ ಎಣ್ಣೆಯಲ್ಲಿ ಕಲಸಿ ಕೊಂಡರೆ ರಕ್ತ ಹೋಗುವುದು, ತಿಮಿರವಾತ, ಏಳುವಾಗ ನೋವು, ಸಂದುವಾತಶೂಲೆ, ಹಳೇನೋವು, ಹಲ್ಲುಬಾಯಿ ಕೂಡುವುದು ಇಷ್ಟು ವಾತ, ಎಲುಬಿನೊಳಗೆ ಹರಿವ ಬೇನೆ ಇವು ಎಲ್ಲವೂ ಮಾಣ್ಗುಂ. ಪಥ್ಯ ಹುಳಿ ಶಲಧಿ ವರ್ಜ್ಯ. ಹುಣಸೇಸೊಪ್ಪಿನ ರಸ, ಲಕ್ಕಿಸೊಪ್ಪಿನ ರಸ, ಎಕ್ಕೆಯ ಹಾಲು, ಆಡಿನ ಹಾಲು, ಚಿಟವುಡಲದ ಎಣ್ಣೆ, ಇವಂ ಸಮಾನಂಗೊಂಡು ಅಟ್ಟು ಮೈಗೆ ಪೂಸಲು ನಲ್ವತ್ತೆಂಟು ಬಗೆ ವಾತವೆಲ್ಲ ಮಾಣ್ಗುಂ ಸೈಂಧವಲವಣವಂ ಚೂರ್ಣವ ಮಾಡಿ ಚಿಟವುಡಲದ ಎಣ್ಣೆಯಲ್ಲಿ ಕಲಸಿ ನೋವಿಗೆ ಪೂಸಲು ಎಂಥಾ ವಾತವಾದರೂ ಮಾಣ್ಗುಂ.

ಮೂಲವ್ಯಾಧಿಗೆ :—ಹೆಮ್ಮರಳಿಹಂಚಿನ ಹಾಲಲ್ಲಿ ತ್ರಿಫಲೆಯಂ ನೆನೆಸಿ ಒಳನೊಳಿ ಯಾದವರಿಗೆ ಬತ್ತಿ ಇರಿಸುವುದು, ಹೊರನೊಳೆಗೆ ಬತ್ತಿಯ ಹಾಕುವುದು. ಕೊಡಹತ್ತಿಬೀಜವಂ ನೀರಲ್ಲಿ ಅರೆದು ಗುಳಿಗೆಯಂ ಮಾಡಿ ಗುದದಲ್ಲಿ ಇರಿಸಲು ಗುಣ. ಬೋಳ, ನಾಗಕೇಸರ, ಖಂಡಸಕ್ಕರೆ, ಎಳ್ಳು, ಸಕ್ಕರೆ ಬೆರಸಿ ಕುದಿಎಣ್ಣೆಯಲ್ಲಿ ಕಲಸಿ ಮೆಲ್ಲಲು ಗುಣ. ಅಳಲೇಕಾಯಿ, ೫ ಹಲ, ಮೆಣಸು ೮ ಹಲ, ಜೀರಿಗೆ ೮ ಹಲ, ಹಿಪ್ಪಲಿ ೧ ಹಲ, ಹಿಪ್ಪಲೀಮೂಲ ೨ ಹಲ, ಚಿತ್ರ ಮೂಲ ೪ ಹಲ, ಶುಂಠಿ ೫ ಹಲ, ಗೇರುಹರಳು ೮ ಹಲ, ಸೂರಣ ೧೬ ಹಲ, ಸದ್ಯಕ್ಷಾರ ೧ ಹಲ, ಯವಕ್ಷಾರ ೧ ಹಲ, ಇವು ಎಲ್ಲವನ್ನೂ ಚೂರ್ಣಮಾಡಿ ಇದರ ಇಮ್ಮಡಿ ಬೆಲ್ಲವಂ ಬೆರಸಿ ದಿನ ೧ ಕ್ಕೆ ೪ ತೂಕವಂ ಸೇವಿಸಲು, ಮೇಲೆ ಮಜ್ಜಿಗೆ ಕುಡಿಯಲು ಗುಣ. ಕಹಿಹೀರೇಕಾಯ ಒಣಗಿದ ಪುಡಿ, ಸೈಂಧವಲವಣ, ಅರಸಿನ, ಎಕ್ಕೆಹಣ್ಣೆಲೆ ರಸ, ಇವಂ ಹಿಂಡಿಕೊಂಡು ಸಣ್ಣ ನಾಗಿ ಅರೆದು ಚಿಟವುಡಲದ ಎಣ್ಣೆಯಲ್ಲಿ ಕಲಸಿ ಕಟ್ಟುವುದು. ಹೊರನೊಳೆ ಸಾಯುವುದು. ಎತ್ತುನಾಲಿಗೆ ಸಮೂಲವಂ ತಂದು ನವಣೆ ಅಕ್ಕಿಹಿಟ್ಟಿನಲ್ಲಿ ಅಟ್ಟು ತೊಳಸಿ ತುಪ್ಪದಿಂದ ಮೆಲ್ಲಲು ಎಲ್ಲಾ ಮೂಲವ್ಯಾಧಿಯೂ ಮಾಣ್ಗುಂ.

ಚೇರುಕುಟಿಗೆ :—ಗಜ್ಜುಗದ ತಿರುಳು ನಾಲ್ಕು ತೂಕ, ಬೆಳ್ಳುಳ್ಳಿ ೪ ತೂಕ, ಸೈಂಧವ ಲವಣ ೪ ತೂಕ, ಇಂಗು ೨ ತೂಕ, ಇವಂ ಬಿಸಿನೀರಲ್ಲಿ ಅರೆದು ಸಮಾನವಾಗಿ ಹತ್ತು ಗುಳಿಗೆಯಂ ಮಾಡಿ ಅರೆಸೌಟು ಅವುಡಲದ ಎಣ್ಣೆ ನಾಲ್ಕು ಸೌಟು ಹಾಲಲ್ಲಿ ತೇದು ಉದಯದಲ್ಲಿ ದಿನಂ ಪ್ರತಿಯೂ ತೆಗೆದುಕೊಳ್ಳುವುದು ಚೇರುಕುಟಿ ಮಾಣ್ಗುಂ. ಪಥ್ಯ ತುಪ್ಪಓಗರ, ನುಗ್ಗೇಕಾಯಿ, ಹುರಳೀಕಾಯಿ, ದಿನ ೧ಕ್ಕೆ ಒಂದು ಗುಳಿಗೆಯ ನೀರೆಯಲ್ಲಿ ಹತ್ತು ಗುಳಿಗೆಯನ್ನು ಕೊಳ್ಳಲು ಗುಣ. ಗಜ್ಜುಗದ ತಿರುಳು, ಸೈಂಧವಲವಣ, ಹಿರಿಮದ್ದಿನ ಬೇರು, ಈ ಇನ್ನೂ ಸಮಾನಂಗೊಂಡು ಚೂರ್ಣವಂ ಮಾಡಿ ನಿತ್ಯ ಗ ತೂಕವ ಸೇವಿಸಲು ಗುಣ. ಗಜ್ಜುಗದ ತಿರುಳು ೧೦ನ್ನು ಎಣ್ಣೆಯಲ್ಲಿ ಅಟ್ಟು ಚೆನ್ನಾಗಿ ಕಾಸಿ ಆ ಎಣ್ಣೆಯನ್ನು ಹೊಟ್ಟೆಗೆ ಗ ೧ ತೂಕ ಕೊಳ್ಳುವುದು. ಮಿಕ್ಕ ಎಣ್ಣೆಯ ಮೈಗೆ ಲೇಪ ಮಾಡುವುದು. ದಿನ ೨ ಕ್ಕೆ ಗುಣ.

ಗೋದರುಡಿಗೆ :—ಬದನೇಕಾಯಿ, ಗರುಗದರಸ, ಎಣ್ಣೆಯಲ್ಲಿ ಅರೆದು ಮೆಲ್ಲಲು ಗುಣ. ನೆಲದಾಳಗೆಡ್ಡೆಯನ್ನು ಆಡಿನ ಮೊಸರಲ್ಲಿ ಅರೆದು ಕುಡಿಯೆ ಗುಣ. ಗಜ್ಜುಗದ ಕೊನರಂ ತೆಂಗಿನಕಾಯ ಸಹ ಅರೆದು ಕಟ್ಟಲು ಗುಣ.

ಗುಲ್ಮಕ್ಕೆ :—ಇಂಗು ಗ ೧ ತೂಕ, ಬಜೆ ಗ ೨ ತೂಕ, ಚಿತ್ರಮೂಲ ೩ ತೂಕ, ಶುಂಠಿ ೪ ತೂಕ, ಓಮ ೫ ತೂಕ, ಅಳಲೇಕಾಯಿ ೬ ತೂಕ, ಹಿಪ್ಪಲಿ ೭ ತೂಕ, ಕೋಷ್ಠ ೮ ತೂಕ, ತಿಗಡೆ ೯ ತೂಕ, ಇವು ಎಲ್ಲವ ಚೂರ್ಣವಂ ಮಾಡಿ ವಸ್ತ್ರಗಾಳಿತವ ಮಾಡಿ ತುಪ್ಪದಲ್ಲಿ ಕಲಸಿ ನೆಲ್ಲಿಕಾಯಷ್ಟು ಮೆಲ್ಲಲು ಪಂಚಗುಲ್ಮಂಗಳು ಮಾಣುವುವು. ಕವಟಿಕಾಯನ್ನು ತಂದು ಕತ್ತರಿಸಿ ಆಸರಿಗೆ ಉಪ್ಪ ಹಾಕಿ, ಒರಳಲ್ಲಿ ಆಡಿಸಿ ಚಿಕ್ಕ ಅಡಿಕೆ ಗಾತ್ರದಷ್ಟು ದೇಹವರಿತು ದಿನ ೩ ಕೊಡುವುದು. ಅನೇಕ ತರದ ಗುಲ್ಮಂಗಳು ಮಾಣುವುವು. ನೆಲದಾಳಗೆಡ್ಡೆಯನ್ನು ಹಾಲಲ್ಲಿ ಅರೆದು ಕುಡಿಯೆ ಗುಣ. ಮೆಣಸು, ಬೆಳ್ಳುಳ್ಳಿ, ಇಂಗು, ಎಲೆಗಳ್ಳಿಯ ಹಾಲು, ಜೀರಿಗೆ, ಸೈಂಧವಲವಣ, ಸಂವತ್ಸರಲವಣ, ಸದ್ಯಕ್ಷಾರ, ಬಿಡುಲವಣ, ಯವಕ್ಷಾರ, ಇವು ಎಲ್ಲವನ್ನು ಸಮಾನಂಗೊಂಡು ನೀರಲ್ಲಿ ಅರೆದು ಗುಳಿಗೆ ಮಾಡಿ ಏಳುದಿನ ನುಂಗೆ ಎಂಥಾ ಗುಲ್ಮ, ಶ್ಲೇಷ್ಮಗುಲ್ಮ, ಸನ್ನಿಪಾತಗುಲ್ಮ, ಇವು ಎಲ್ಲಾ ಮಾಣುವುವು.

ಗೆಡ್ಡೆಗೆ :—ವಳ್ಳಿಯ ಸೋರೇಕಾಯ ನಡುದಿನದಲ್ಲಿ ಇದ್ದ ಹಾಗೆ ಪಚನ ಮಾಡಿ ಅದರ ಒಳಗೆ ಒಂದು ಹಿಡಿ ಸಾಸುವೆ, ಒಂದು ಹಿಡಿ ಹಿಪ್ಪಲಿ, ಒಂದು ಹಿಡಿ ಮೆಣಸು, ಒಂದು ಹಿಡಿ ಉಪ್ಪು, ಒಂದು ಹಿಡಿ ಶುಂಠಿ, ಈ ಐದು ಬಗೆಯನ್ನು ಒಡೆದು ಆ ಕಾಯ ಒಳಕ್ಕೆ ತುಂಬಿ, ಒಣಗಿಸಿ ತೆಗೆದು ಚೂರ್ಣವಂ ಮಾಡಿ ಆ ಚೂರ್ಣವಂ ವಾಲುಕಾಯಂತ್ರದಲ್ಲಿ ತೆಗೆದುಕೊಂಡು ಬಿಸಿನೀರು ಕುಡಿಯಲು ಗೆಡ್ಡೆ, ಜಲಗರ, ನೀರೋಡುವಿಕೆ ಮೊದಲಾದ ಉದರವ್ಯಾಧಿಯು ಮಾಣ್ಗುಂ. ಇಂಗುಳ, ದೇವದಾರು, ಏಳು ಹಿಡಿ ತವುಡು ಈ ೩ ಬಗೆಯನ್ನೂ ಸಮಾನಂಗೊಂಡು ಉದಯದಲ್ಲಿ ಮೂರು ಬೆರಳ ಸರಿ ಬಂದಲ್ಲಿ ತೆಗೆದುಕೊಳ್ಳಲು ಬಿಸಿನೀರಲ್ಲಿ ಕುಡಿಯೆ ಸಮಸ್ತವಾದ ಗೆಡ್ಡೆರೋಗ ಮಾಣ್ಗುಂ.

ಮಹೋದರಕ್ಕೆ :—ನಿಂಬೇಹಣ್ಣಿನ ರಸದಲ್ಲಿ ಕರಿಜೀರಿಗೆಯನ್ನು ಅರೆದು, ಅಡಿಕೆಗಾತ್ರ ಗುಳಿಗೆಯಂ ಮಾಡಿ ದಿನ ೧ ಕ್ಕೆ ೩ ಗುಳಿಗೆಯಾಗಿ ಮೂರು ದಿನ ನುಂಗಲು ಮಹೋದರ ಮಾಣ್ಗುಂ. ಆಡಿನ ಹಿಕ್ಕೆಯನ್ನೂ, ಜೀರಿಗೆಯನ್ನೂ ಕಟ್ಟುಮೊಸರಲ್ಲಿ ಅರೆದು, ಕೈಮೊಸರಲ್ಲಿ ನುಂಗಲು ಮಹೋದರ ಮಾಣ್ಗುಂ. ಚಿತ್ರಮೂಲದ ಬೇರು, ಕಾಗೆಮಾರಿಯ ಬೇರು, ಮೂಕೊರತಿ ಬೇರು, ಈ ಮೂರನ್ನು ಸಮಾನಂಗೊಂಡು ಚೂರ್ಣವಂ ಮಾಡಿ ಒಂದು ಬಳ್ಳವಾಗಲೀ, ಒಂದು ಸೇರೆಯಾಗಲೀ ಹಸುವಿನ ಬೆಣ್ಣೆಯನ್ನು ಉಪ್ಪುಹಾಕದೇ ಕಾಸಿ ಆ ಚೂರ್ಣವಂ ಸಂಗಾತ ಹಾಕಿ ಕಾಸಿ ಆ ತುಪ್ಪವನ್ನು ಮೂರು ದಿನಂ ಕೊಳ್ಳಲು ಗುಣ. ಕೈಕಾಲುಬಾತು ಒಡೆಯುವ ಹಾಗೆ ಇದ್ದ ಮಹೋದರ ಗುಣವಾಗುವುದು. ಇದು ಸಿದ್ಧಾಂತ. ಪಥ್ಯ ಮೊಸರ ಸವಿಯೆಸರು, ಅನ್ನ. ಇದು ಒಳ್ಳೆಯ ಯೋಗ. ಲೊಕ್ಕಿಸೊಪ್ಪಿನ ರಸವಂ ಅವುಡಲದ ಎಣ್ಣೆಯಲ್ಲಿ ಕೊಳ್ಳಲು ಮಹೋದರ ಮಾಣ್ಗುಂ.

ಕಾಲಿನ ವ್ಯಾಧಿಗೆ :—ನಾಗರಹಾ(ವು) ಹರಿದು ಹೋದ ಬಳಿಯಣ ಮಳಲ ತಂದು ............................... ಕಾಲಿಗೆ ಪೂಸಲು ಕುರು ಕರಗುವುದು. ಕೆಂಪಿನ ಪಾಷಾಣ, ಇಲಿಪಾಷಾಣ, ಗೌರೀಪಾಷಾಣ, ನಾಭಿ, ಇವಂ ಸಮಾನಂಗೊಂಡು ಸಮಭಾಗ ನಿಂಬೇಹುಳಿಯಲ್ಲಿ ಅರೆದು ಕಾಲಿಗೆ ಕಾಸಿನ ಅಗಲಕ್ಕೆ ತೊಡೆಯುವುದು. ನಾಲ್ಕು ದಿನಕ್ಕೆ ಒಂದು ಬಾರಿ ತೊಡೆಯುವುದು.

ಮೈಬಾತರೆ :—ಕಿರುಗೋಳಿಯ ಸೊಪ್ಪಂ ಬಿಸಿ ಮಾಡಿ ಕಟ್ಟುವುದು. ಕೆಂಪಿನ ಲಾಳ ಹರುಕು ಸಮೂಲವಂ ತಂದು ಕರಿಮಾಡಿ ಈ ಕರಿ ಮೂರು ಭಾಗ, ಹೊಸ ಸುಣ್ಣ, ಹಳಮಡಿ ಒಂದು ಭಾಗ, ಈ ಎರಡನ್ನೂ ಕೂಡಿ ಆ ಕುರುವನ್ನು ಗಾಯವ ಮಾಡಿ ಆ ಗಾಯಕ್ಕೆ ಇಕ್ಕಿದ ಒಂದು ಘಳಿಗೆಗೆ ಆ ಕುರು ಕರಗಿ ಬೀಳುವುದು. ಬಿದ್ದ ಬಳಿಕ ಆ ಇಕ್ಕಿದ ಔಷಧಿಯ ಒಂದು ಭಾಗ, ಎಮ್ಮೆಯ ಹಸಿ ಬೆಣ್ಣೆಯ ಗೋಡೆಗೆ ಹನಿಸಿ ನೀರ ತೆಗೆದು ಬಳಿಕ ಆ ಬೆಣ್ಣೆಯನ್ನು ಗಾಯಕ್ಕೆ ಇಕ್ಕಿದರೆ ಹುಣ್ಣು ಮಾಯುವುದು.

ಗುಲ್ಮಕ್ಕೆ :— ಹರಳೆಣ್ಣೆ ಒಂದು ಮಾನ, ಕಲುವ ಒಂದು ಮಾನ, ಕೋಳಿ ತೆಗೆದ ಉಳ್ಳಿಬೇಳೆ ಒಂದು ಮಾನ, ಇಷ್ಟನ್ನೂ ಪುಟವ ಹಾಕಿ ಕೆಂಪಾದ ಒಡನೆ ಇಳುಹಿ, ಶುಂಠಿ, ಚೂರ್ಣ, ಬೆಲ್ಲದ ಚೂರ್ಣವನ್ನು ಕೊಳ್ಳಲು ೮ ಬಗೆ ಗುಲ್ಮ ಮಾಣ್ಗುಂ.

ಗಂಡಾಮಲೆಗೆ :—ಕತ್ತಿಗಾಲದ ಹಂಚಿನ ಬೇರು, ಕಡಲೆ ಸಹ ನೆನೆ ಇಕ್ಕಿ, ಕಡಲೆಯನ್ನು ಒಣಗಿಸಿ, ಒಂದು ಹಿಡಿ ಕಡಲೆಯನ್ನು ಮೆಲ್ಲಲು ಗುಣ. ಇಷ್ಟಂ ಇದರಲ್ಲಿ ಕಾಸಿ ಇಕ್ಕುವುದು. ಆಮೇಲೆ ಪಾಷಾಣ ಹಣ ತೂಕ, ತುತ್ತ ಗ೧ ತೂಕ, ಇವು ಎರಡನ್ನೂ ನಿಂಬೇಹುಳಿಯಲ್ಲಿ ಅರೆದು ಆ ಹಣ್ಣಿನ ಮೇಲೆ ಬಾಡಿಸಿ ಇಕ್ಕುವುದು. ಇದು ಉರಿದರೆ ಮೊಸರ ಬತ್ತಿಯ ಹಾಕುವುದು. ಆಮೇಲೆ ನೀರು ಹರಿಯುವುದು, ಕೀವುಗಟ್ಟುವುದು. ಅದಕ್ಕೆ ಹೂರದ ಎಲೆ ಹಾಕುವುದು. ಪಥ್ಯ ಶಲಧಿವರ್ಜ್ಯ.

ಗೂದೆ ಹೊರಟು ನೆಗೆ ಹಾಯುವುದಕ್ಕೆ :—ಎಲಹುರಿ ಅರೆದು ಸಟ್ಟುಗದಿಂದ ಕೂಳ ಇರಿಸಿ ಇದನ್ನು ಆಸನಕ್ಕೆ ಮೆತ್ತಿ ಹತ್ತಿ ಹಾಕಿ ಕಚ್ಚೆ ಕಟ್ಟಲು ಸ್ವಸ್ಥಾನಕ್ಕೆ ಹೋಗುವುದು. ಕೋಳಿಕುಟುಮನ ಗೆಡ್ಡೆ ಕತ್ತರಿಸಿ ಹಳೇಮಣ್ಣು, ಮುಟ್ಟಿದರೆ ಮುರುಟೆಯ ಸೊಪ್ಪು, ಇವಂ ಅರೆದು ಎಣ್ಣೆಯಲ್ಲಿ ಕಲಸಿ ಮೂಡಮುಖಂ ತೋರಿಸಿ ಒಳಕ್ಕೆ ಅವುಕಿ ನೂಕಲು ಒಳಕ್ಕೆ ಹೋಗುವುದು. ಹಿಡಿಹಿಡಿಕೆಸೊಪ್ಪಿನ ಬೀಜ, ಒಳ್ಳೆಣ್ಣೆಯಲ್ಲಿ ಕಾಸಿ ತೊಡೆಯುವುದು. ಈ ಸೊಪ್ಪು ಗೋವರಳಿಯ ಹೊಟ್ಟು ಸಹ ಹೊಗೆ ಕಾಸುವುದು, ಕಾಡಹೀರೇಕಾಯಾಗಲೀ, ಸಮೂಲವಾಗಲೀ, ಹೊಗೆಯ ಕಾಸುವುದು.

ಹೆಂಗಸಿನ ನೆಗೆ ಹೊರಟದ್ದಕ್ಕೆ :—ಚವುಡಂಗಿಯ ಸೊಪ್ಪಂ ಎಣ್ಣೆಯಲ್ಲಿ ಕಲಸಿ ಕಟ್ಟಲು ಗುಣ. ಉತ್ತರಣಿಎಲೆಯಂ ತಂದು ಅರೆದು ಬೆಚ್ಚನೆ ಮಾಡಿ ಕಟ್ಟಲು ಒಳಕ್ಕೆ ಹೋಗುವುದು,

ವಾಂತಿ ಆಗುವುದಕ್ಕೆ :—ಪಚ್ಚೆತುತ್ತ ಒಣಕಡಲೆ ಗಾತ್ರ ನಿಂಬೇಹುಳಿಯಲ್ಲಿ ತೇದು ನಿಂಬೇಹೋಳಿಗೆ ತೊಡೆದು ಮೆದ್ದರೆ ವಾಂತಿ ಆಗುವುದು. ನಿಲ್ಲಬೇಕಾದರೆ ಮೊಸರು ಓಗರವ ಉಂಬುದು.

ಪಿತ್ತ ವಾಂತಿ ಆಗುವುದಕ್ಕೆ :—ಅರಿದಳವ ಸುಣ್ಣದಲ್ಲಿ ಮರ್ದಿಸಿ ವೀಳ್ಯದೆಲೆಗೆ ತೊಡೆದು ವೀಳ್ಯವಂ ಮಾಡಿದರೆ ಪಿತ್ತ ವಾಂತಿ ಆಗುವುದು. ನಿಲ್ಲಬೇಕಾದರೆ ಉಡಿತನಕ ತೊಳೆದು ನೀರು ಮುಕ್ಕಳಿಸಲು ನಿಲ್ಲುವುದು. ಕತ್ತಿಗಾಲನ ಬೇರನ್ನು ಹಾಲಲ್ಲಿ ಕುಟ್ಟಿ ಅರಿಸೊಲ್ಲಿಗೆಯಂ ಕುಡಿದು ಆಮೇಲೆ ಎರಡು ವೀಳ್ಯವಂ ಹಾಕಲು ವಾಂತಿಯಕ್ಕುಂ. ಸಾಕಾದರೆ ವೀಳ್ಯವ ಹಾಕದೆ ನೀರ ಮುಕ್ಕಳಿಸಲು ನಿಲ್ಲುವುದು.

ವಾಂತಿ ನಿಲ್ಲುವುದಕ್ಕೆ :—ಬೆಟ್ಟದಾವರೆ ಚಿಗುರಂ ಮಜ್ಜಿಗೆಯಲ್ಲಿ ಅರೆದು ಕುಡಿಯೆ ಆಗಲೇ ನಿಲ್ಲುವುದು. ಬಿಳುಗಾರವಂ ಕೆಂಡದಲ್ಲಿ ಸುಟ್ಟು............... ಜೇನುತುಪ್ಪದಲ್ಲಿ ನೀರುಳ್ಳಿಯ ರಸ, ನಿಂಬೇಹುಳಿಯಲ್ಲಿ ಮರ್ದಿಸಿ ದೇಹಕ್ಕೆ ಕೊಡಲು ನಿಲ್ಲುವುದು. ತಾರೇ ಕಾಯ ೧ ಕದಕ ನೀರಲ್ಲಿ ನೆನೆಯಿಕ್ಕಿ ಕಿವುಚಿ ದೇಹಕ್ಕೆ ಕೊಡಲು ನಿಲ್ಲುವುದು. ಖರ್ಜೂರ ಬೀಜವಂ ನೀರಲ್ಲಿ ತೇದು ಕುಡಿಯೆ ನಿಲ್ಲದೇ ಇದ್ದ ವಾಂತಿಯೂ ನಿಲ್ಲುವುದು.

ಹೊಟ್ಟೆ ನೋಯುವುದಕ್ಕೆ :—ಮಾವಿನ ಬೀಜದ ತಿರುಳಂ ಪುಡಿಮಾಡಿ ಅಂಬಿಲ, ಮಜ್ಜಿಗೆಯಲ್ಲಿ ಅರೆದು ಕುಡಿಯೆ ಆಗಲೇ ನಿಲ್ಲುವುದು.

ಅಕ್ಸಾರಕ್ಕೆ :—ಸಿರೆಹೊಡೆ, ಕರಿಹುಲಿಯ ಸೊಪ್ಪು, ಚಿಲಕೀರೆಯ ಬೇರು, ಇವು ಇನ್ನೂ ಅರೆದು ರಸವಂ ಹಿಂಡಿಕೊಂಡು ಆ ರಸಕ್ಕೆ ಸಕ್ಕರೆ ಹಾಕಿ ದೇಹಕ್ಕೆ ಕೊಡಲು ಆ ಕ್ಷಣವೇ ಮಾಣ್ಗುಂ. ಮತ್ತಂ ತೊಂಡೇಕಾಯ ನೀಳನಾಗಿ ಸೀಳಿ ಅದಂ ನಾಲಿಗೆಯಲ್ಲುಜ್ಜಿ ತೊಳೆದು ಬಂಜೆವಾಗಲದ ಬೇರಂ ನೀರಲ್ಲಿ ತೇದು ನಾಲಿಗೆಗೆ ತೊಡೆದು ದೇಹಕ್ಕೆ ಕೊಳ್ಳಲು ಅಕ್ಸಾರ ಮಾಣ್ಗುಂ. ಗಜ್ಜುಗದ ತಿರುಳು, ಪುತ್ರಜೀವಿಮಣಿತಿರುಳು, ಇವಂ ಅರೆದು ಬಿಸಿ ನೀರಲ್ಲಿ ಕುಡಿಯೆ ಅಕ್ಸಾರ, ಜ್ವರ ಸಹ ಮಾಣ್ಗುಂ. ಒಂದೆಲಗನ ಸೊಪ್ಪಂ ತಂದು ರಸವಂ ತೆಗೆದುಕೊಂಡು ಸಕ್ಕರೆ ಬೆರಸಿ ಕುಡಿಯೆ ಅಕ್ಸಾರ ಮಾಣ್ಗುಂ. ಈ ಸೊಪ್ಪಂ ಬೇಯಿಸಿ ಪಚ್ಚಡಿಯುಂ ಮಾಡಿ ಅನ್ನದಲ್ಲಿ ಉಂಡರೆ ಅಕ್ಸಾರ ಮಾಣ್ಗುಂ. ಹೊಮ್ಮುಗಳ ಹೂವಂ ಅಗೆದು ಮೆಲ್ಲಲು ಅಕ್ಸಾರ ಮಾಣ್ಗುಂ.

ತಲೆ ತಿರುಗುವುದಕ್ಕೆ :—ಅಮರದವಳ್ಳಿಎಲೆ ರಸ, ಬೆಲ್ಲ, ಉರುವ, ಇವಂ ಸಮಾನಂ ಗೊಂಡು ನಸ್ಯವಂ ಗೈಯ್ಯೆ ತಲೆ ತಿರುಗುವುದು ಮಾಣ್ಗುಂ.

ಜಂತು ಬೀಳುವುದಕ್ಕೆ :—ಪಾರಿವಾಣದ ಸೊಪ್ಪು, ಹಾಗಲದ ಸೊಪ್ಪು, ಸಮಾನಂ ಗೊಂಡು ತುಳಿದು ಆ ರಸವಂ ಕುಡಿಯೆ ಹೊಟ್ಟೆಯ ಜಂತು ಬೀಳುವುದು. ............ ಬೇರನ್ನು ನೀರಲ್ಲಿ ತೇದು ಹೊಟ್ಟೆಗೆ ಪೂಸಲು ಜಂತು ಬೀಳುವುದು. ಬಾಳೇಬೇರಂ ಹಾಲಲ್ಲಿ ಕುಟ್ಟಿ ತೆಗೆದುಕೊಳ್ಳಲು ಜಂತು ಬೀಳುವುದು. ಜಂ................. ಅರೆದು ಕುಡಿಯೆ ಜಂತು ಬೀಳುವುದು.

ಕಡುಕುರು ಮಾಣುವುದಕ್ಕೆ :—ಹಾವುಮೆಕ್ಕೇಬೇರನ್ನು, ಎಳ್ಳನ್ನು ಅರೆದು ಮೈಗೆ ಪೂಸಲು ಕಡುಕುರು ಮಾಣ್ಗುಂ.

ಮೈತಿಮಿರಕ್ಕೆ :—ಕನ್ನೆಕುಮಾರಿಯ ಬೇರಂ ಹಾಲಲ್ಲಿ ದೇಹಕ್ಕೆ ಕೊಟ್ಟು ಮೈಗೆ ಪೂಸಲು ಮೈತಿಮಿರ ತಡೆಯುವುದು. ಕಣಿಗಿಲಬೇರು, ಸಾಸುವೆ, ತಗಚೇಬೀಜ, ಕಕ್ಕೇಬೀಜ, ವಿಳಂಗ, ಅರಿಸಿನ, ಸೈಂಧವಲವಣ, ಇವೆಲ್ಲವಂ ಅರೆದು ಮೈಗೆ ಒರೆಸಲು ಮೈತಿಮಿರ ನಿಲ್ಲುವುದು. ಇದು ಸಿದ್ಧಾಂತ.

ಹಲಕುರುವಿಗೆ :—ಯವಕ್ಷಾರ, ಹೊಸ ಸುಣ್ಣ, ಇವಂ ಅರೆದು ಹಲಕುರು ಮೊದಲಾದುದಕ್ಕೆ ಮೂರು ದಿನ ತೊಡೆಯೆ ನೀರು ಬಿಡುವುದು. ಆಗಲೇ ಕತ್ತರಿಸಿ ಬೀಳುವುದು.

ಬಂಗು ಮಾಣುವುದಕ್ಕೆ :—ಸುಣ್ಣ, ಅರಿದಳ, ಆಲದ ಹಣ್ಣೆಲೆ, ಬಜೆ, ಕೋಷ್ಠ, ಅರಿಸಿನ, ಇವಂ ಸಮಾನಂಗೊಂಡು ಅರೆದು ಎಣ್ಣೆಯಲ್ಲಿ ಕಲಸಿ ಪೂಸಲು ಬಂಗು, ಜಂಬೂ ಮೊಡವೆ, ಇವೆಲ್ಲಾ ಮಾಣ್ಗುಂ. ಬೂರದಕಾಯಿರಸದಿಂ ಸೋಂಕಿಸಲು ಅಂಗುರವ ತೇದು ವಾಲುಕದಲ್ಲಿ ಹಾಕಿ ಮರ್ದಿಸಿ ತೊಡೆಯಲು ಬಂಗು ಮಾಣ್ಗುಂ.

ತೊನ್ನುರೋಗಕ್ಕೆ :—ನೆಲದಾಳವ ಗೋಮೂತ್ರದಿಂ ಅರೆದು ಪೂಸಲು ತೊನ್ನು ಮಾಣ್ಗುಂ.

ಬಿಳಿತೊನ್ನಿಗೆ :—ಹರಿಚರ್ಮ ೧೨ ತೂಕ, ಕರಡಿಚರ್ಮ ೩೦ ತೂಕ, ಅರಸಿನ ೧೨ ತೂಕ, ಇವಂ ಹಂಚಿನೊಳು ಪುಟವಿಕ್ಕಿ ಬೂದಿಯ ಮಾಡಿಕೊಂಡು ಒಳ್ಳೆಣ್ಣೆ ಸೇರು ೧ ಎಣ್ಣೆಯಲ್ಲಿ ಆ ಬೂದಿಯಂ ಕಲಸಿ ಕಪಿಹೀರೇಕಾಯಲ್ಲಿ ಆ ಬಿಳುಪನ್ನು ಉಜ್ಜಿಕೊಳ್ಳುವುದು. ೨೭ ದಿನ ಲೇಪಮಾಡೆ ತೊನ್ನು ಗುಣವಾಗುವುದು.

ಊದುಗಾಮಾಲೆಗೆ :—ಎತ್ತುನಾಲಿಗೆರಸವಂ ಎಣ್ಣೆಯಲ್ಲಿ ಕುಡಿಯೆ ಊದುಕಾಮಾಲೆ ಮಾಣ್ಗುಂ.

ವಿದ್ಧಕಾಮಾಲೆಗೆ :—ದ್ರಾಕ್ಷೆಹಣ್ಣು, ಕೊತ್ತಂಬರಿ, ಯಷ್ಟಿಮಧುಕ, ಏಲಕ್ಕಿ, ಶುಂಠಿ, ಇವನ್ನು ಸಮಾನಂಗೊಂಡು ಚೂರ್ಣವಂ ಮಾಡಿ ಸಕ್ಕರೆ ಬೆರಸಿ ದಿನ ೧ಕ್ಕೆ ೬ ತೂಕವ ತಿಗೆದುಕೊಳ್ಳಲು ವಿದ್ಧಕಾಮಾಲೆ ಮಾಣ್ಗುಂ,

ಪಾಂಡುಕಾಮಾಲೆಗೆ :— ವಜ್ರಗಿರಿಯ ಬೇರಂ ಆಕಳ ಮಜ್ಜಿಗೆಯಲ್ಲಿ ಕೊಳ್ಳಲು ಪಾಂಡುಕಾಮಾಲೆ ಮಾಣ್ಗುಂ.

ಕಾಮಾಲೆಗೆ :—ಎಕ್ಕೆಬೇರಂ ನವಣಕ್ಕಿಯ ತೊಳೆದ ನೀರಲ್ಲಿ ಅರೆದು ಕುಡಿಯೆ ಕಾಮಾಲೆ ಮಾಣ್ಗುಂ. ಅಮರದ ವಳ್ಳಿಯನ್ನು ಅರೆದು ಆಡಿನ ಹಾಲಲ್ಲಿ ಸಕ್ಕರೆ ಬೆರಸಿ ಕುಡಿಯೆ ಕಾಮಾಲೆ ಗುಣಂ. ಎಲಚಿಸೊಪ್ಪಂ ಎಮ್ಮೆಮೊಸರಲ್ಲಿ ಅರೆದು ಗುಳಿಗೆಯಂ ಮಾಡಿ ಕೊಳ್ಳಲು ಕಾಮಾಲೆ ಮಾಣ್ಗುಂ. ಪಥ್ಯ ಎಮ್ಮೆಹಾಲು, ಅನ್ನ. ಕಿರುನೆಲ್ಲಿಯ ಸೊಪ್ಪು, ಏಲಕ್ಕಿ, ಜೀರಿಗೆ, ಸಹ ಅರೆದು ಹಾಲಲ್ಲಿ ಕುಡಿಯುವುದು. ಪಥ್ಯ ಹಾಲು, ಅನ್ನ. ಕಾಮಾಲೆ ಮಾಣ್ಗುಂ.

ಕಿವಿ ಕೇಳದೇ ಇದ್ದುದಕ್ಕೆ:—ತಾರೇಕಾಯಿತಿರುಳು, ಅರಿದಳ, ಮಣಿಸಿಲೆ, ಇವಂ ಸಮಾನಂಗೊಂಡು ಎಣ್ಣೆಯಲ್ಲಿ ಅಟ್ಟು ಕಿವಿಗೆ ಎರೆಯೆ ಕಿವುಡು ಮಾಣ್ಗುಂ. ತಾರೇಕಾಯ ರಸ ಒಳ್ಳೇ ಎಣ್ಣೆಯಲ್ಲಿ ಕಾಸಿ ಕಿವಿಗೆ ಬಿಡಲು ಕಿವುಡು ಮಾಣ್ಗುಂ. ಕಿವಿ ಕೇಳಬರುವುದು.

ಬಿಕ್ಕಳಿಕೆಗೆ :—ಸಕ್ಕರೆಯನ್ನು ನೊರೆಹಾಲಿಂದ ನಸ್ಯಂಗೈಯ್ಯೆ ಬಿಕ್ಕು ಮಾಣ್ಗುಂ. ಮತ್ತಂ ಶ್ರೀಗಂಧವಂ ನೊರೆಹಾಲಿಂದ ನಸ್ಯಂಗೈಯ್ಯೆ ಬಿಕ್ಕು ಮಾಣ್ಗುಂ. ಹಸಿಯ ಶುಂಠಿ, ಹಿಪ್ಪಲಿ, ಸಕ್ಕರೆ, ಇವು ಮೂರನ್ನು ಅರೆದು ಗುಳಿಗೆಯ ಮಾಡಿ ಬಾಯಲ್ಲಿ ಇರಿಸೆ ಬಿಕ್ಕು ಮಾಣ್ಗುಂ.

ಛರ್ದಿಗೆ :—ಇಂಗಲೀಕ ೯ ತೂಕ, ಗಜ್ಜುಗದ ತಿರುಳು ೯ ತೂಕ, ಬೆಲ್ಲವತ್ತ್ರದ ತಿರುಳು ೯ ತೂಕ, ಎಲೆಮದ್ದು ೧ ತೂಕ, ಇವು ನಾಲ್ಕನ್ನೂ ವಿಜಯರಸದಿಂದ ಮರ್ದಿಸಿ ಮಾಷಮಾತ್ರ ಗುಳಿಗೆಯಂ ಮಾಡಿ, ನಾಲಿಗೆಗೆ ಹಾಕಲು ಗುಣ.

ಬಿಕ್ಕಳಿಕೆಗೆ :—ದವನ, ಜೀರಿಗೆ, ಶುಂಠಿ, ಇವಂ ಜೇನುತುಪ್ಪದಿಂದ ಅರೆದು ಕೊಳ್ಳಲು ಬಿಕ್ಕಳಿಕೆ ಮಾಣ್ಗುಂ. ಬೆಲ್ಲವತ್ತ್ರದ ಕಷಾಯದಲ್ಲಿ ಹಿಪ್ಪಲಿ, ದ್ರಾಕ್ಷೆಹಣ್ಣು ಸಹ ಮೆಲ್ಲಲು ಬಿಕ್ಕಳಿಕೆ ಮಾಣ್ಗುಂ. ಗುರುಗುಂಜಿಯ ಬೇಳೆಯನ್ನು ಸಿಂಬೇಹುಳಿಯಲ್ಲಿ ತೇದು ಆ ಸಿಂಬೇ ಹೋಳಿಗೆ ತೊಡೆದು ನಾಲಿಗೆಗೆ ಹಚ್ಚಲು ಬಿಕ್ಕಳಿಕೆ ಗುಣ. ನವಿಲಿನ ಗರಿಯನ್ನು ಜೇನುತುಪ್ಪದಲ್ಲಿ ನಾಲಿಗೆಗೆ ತೊಡೆಯೆ ಬಿಕ್ಕು ನಿಲ್ಲುವುದು ಉತ್ತರಣೆಯ ಬೀಜವಂ ಪುಡಿ ಮಾಡಿ ಜೇನುತುಪ್ಪದಿಂದ ಮೆಲ್ಲಲು ಬಿಕ್ಕು ಮಾಣ್ಗುಂ, ಇದಕ್ಕೆ ಬಿದ್ದ ನಾಲಿಗೆ ಬರುವುದು.

ಬಾಣಂತೀರೋಗಕ್ಕೆ :—ಗೋಕ್ಷೀರ ಸೇರು ೩೨, ಹಿಪ್ಪಲಿ ಗ ೧, ಹಿರಿಮದ್ದು ಮೂಲ ಸೇರು ೧, ಇವ ಚೂರ್ಣ ಮಾಡಿ ಹಾಲು ಉಕ್ಕಿ ಬಂದಾಗ ಹಾಕಿ ಮೃದು ಅಗ್ನಿಯಲ್ಲಿ ಕಾಸಿ ತೊಳಸಿ ಪಾಯಸದ ಹದನಾದಾಗ, ಚೂರ್ಣ, ತ್ರಿಕಟುಕ, ತ್ರಿಫಲೆ, ಚಾತುರ್ಜಾತ, ಅಕಲಕರೆ, ಏಲಕ್ಕಿ, ಭಾರಂಗಿ, ತಗರ, ಮಂಜಿಷ್ಠೆ, ಕುರಟಿಕೆಸೊಪ್ಪು, ಬಿಳಿಸೊಂಡೆಯ ಸಮೂಲ, ಭದ್ರಮುಸ್ತೆ, ಜೀರಿಗೆಯ ಬಗೆ ೨, ಕೊತ್ತಂಬರಿ, ಸಬಸಿಗೆ, ರಾಸ್ಮೆ, ಸೊಗದೆ, ಖರ್ಜೂರ, ತಾಳೀಸಪತ್ರೆ, ಜಾಯಿಕಾಯಿ, ಹಿಪ್ಪಲೀಮೂಲ, ಅಜವೋದ, ನೆಲದಾಳು, ಹಾಗೆ ೨೫ ಬಗೆಯ ೧೮ ತೂಕ ಸಕ್ಕರೆಯ ಮೇರೆಯಲ್ಲಿ ಸಮಾನಂಗೊಂಡು ಚೂರ್ಣವಂ ಮಾಡಿ ಹಾಕಿ ತುಪ್ಪ ಸೇರು, ಜೇನುತುಪ್ಪ ಸೇರು, ಸಕ್ಕರೆ ಸೇರು, ತಾಮ್ರಭಸ್ಮ ೫ ತೂಕ ಸಹ ಹಾಕಿ ತೊಳಸಿ ಪಾಕವ ಮಾಡಿ ಇರಿಸಿಕೊಂಡು ಈ ರಸಾಯನವಂ ದಿನ ೧ ಕ್ಕೆ ಗ ೧ ತೂಕ ಕೊಳ್ಳಲು ಬಾಣಂತಿಕ್ಷಯ, ಪಾಂಡು, ವಿಷಮಜ್ವರ, ಸಕಲ ರೋಗಂಗಳು ಮಾಣುವುವು.

ಬಾಣಂತೀರೋಗಕ್ಕೆ :—ಅಳಲೇಕಾಯಿಲೇಹ್ಯ, ಹಸಿ ಶುಂಠಿ ನಾಲ್ಕು ಸೇರು, ಅಟ್ಟು ಇಳುಹಿ ಈ ರಸದ ಇಮ್ಮಡಿ ಗೋಕ್ಷೀರ, ಈ ಎರಡನ್ನು ಕೂಡಿ ತೊಳಸಿ ಕಾಸಿ, ಪಾಯಸದ ಹದವಾದಾಗ ಚೂರ್ಣ, ತ್ರಿಕಟುಕ, ಚಾತುರ್ಜಾತ, ಜಾಯಿಕಾಯಿ, ಕಸಕಸೆ, ಅಕಲಕರೆ, ಭಾರಂಗಿ, ನೆಲಗುಳ್ಳದ ಬೀಜ, ತುಂಬೇಹೂವು, ಗರುಗದ ಚೂರ್ಣ, ಸಂವತ್ಸರಲವಣ, ಸೈಂಧವಲವಣ,

ಸದ್ಯಕ್ಷಾರ, ಯವಕ್ಷಾರ, ಬಿಳುಗಾರ, ಹೊಮ್ಮುಗಳು, ಇಷ್ಟನ್ನೂ ಸಮಾನಂಗೊಂಡು ಚೂರ್ಣವಂ ಮಾಡಿ ಹಾಕಿ ತೊಳಸಿ ಲೇಹ್ಯದಲ್ಲಿ ತೆಗೆದುಕೊಳ್ಳಲು, ಬಾಣಂತಿಕ್ಷಯ, ಕಾಸ, ಪಾಂಡು, ವ್ರಣ, ಜ್ವರ, ಮೊದಲಾದ ಬಾಣಂತಿರೋಗ ಸಕಲವೂ ಮಾಣ್ಗುಂ. ಇದು ಮಹಾ ಒಳ್ಳೆಯ ಯೋಗ.

ಅತಿಸಾರಕ್ಕೆ :—ಅಳಲೇಕಾಯ ಒಳಗಿನ ಬೀಜವಂ ತೇದು ಹುಳಿಮಜ್ಜಿಗೆಯಲ್ಲಿ ಕೊಳ್ಳೆ ನಿಲ್ಲುವದು. ಹಸುಮಕ್ಕಳಿಗೆ ಮೊಲೆಹಾಲಲ್ಲಿ ಕೊಡುವುದು. ಸಾರಂಗದ ಕೊಂಬನ್ನೂ ನೀರಲ್ಲಿ ತೇದು ಅಡಿಕೇತೋರವ ಎಮ್ಮೆ ಕಟ್ಟುಮೊಸರಲ್ಲಿ ಕೊಳ್ಳಲು ರಕ್ತಾತಿಸಾರ ನಿಲ್ಲುವುದು. ಬಾಳೇ ಹಣ್ಣಂ ಎಣ್ಣೆಯಲ್ಲಿ ಕಲಸಿ ನುಂಗಲು ರಕ್ತ ನಿಲ್ಲುವುದು.

ಬಾಣಂತೀಜ್ವರಕ್ಕೆ ಕಷಾಯ :—ಅಮರದವಳ್ಳಿ, ಶುಂಠಿ, ಇವಂ ಕಷಾಯವಂ ಕಾಸಿ ಹಿಪ್ಪಲಿ ಪ್ರತಿಪಾಕವಿಕ್ಕಿ ಕೊಳ್ಳಲು ಸರ್ವಜ್ವರ ಮಾಣ್ಗುಂ. ಶ್ಲೋಕ—

ನಿದಿಗ್ಧಿಕಾನಿಂಬಶಲಾಕಶುಂಠೀಕಪಿತ್ಥಕೃಷ್ಣಾಲಶುನೈಃ ಸಮಾಂಶೈಃ ।
ಕ್ವಾಥಂ ತತಸ್ಸೈಂಧವರೇಣುಮಿಶ್ರಂ ಪ್ರಸೂತಿಕಾಯಾಃ ಸಕಲಾಮಯಘ್ನಂ॥

ಟೀಕೆ :—ಹೆಗ್ಗುಳ್ಳದ ಬೇರು, ನೆಲಗುಳ್ಳದ ಬೇರು, ನೆಲಬೇವು, ಹೇರಳೆಚಿಗುರು, ಶುಂಠಿ, ಬೆಲ್ಲವತ್ತದ ಬೇರು, ಹಿಪ್ಪಲಿ, ಬೆಳ್ಳುಳ್ಳಿ, ಇವಂ ಕಷಾಯವಂ ಮಾಡಿ ಸೈಂಧವ ಲವಣ, ರೇಣುಕಬೀಜ, ಇವಂ ಸಣ್ಣನಾಗಿ ಪುಡಿಮಾಡಿ ಆ ಕಷಾಯಕ್ಕೆ ಹಾಕಿ ಕೊಳ್ಳಲು ಬಾಣಂತಿಯರ ಸಕಲ ರೋಗಂಗಳು ಮಾಣುವುವು.

ಶುಂಠಿ, ಕೊತ್ತಂಬರಿ, ಗೋಣಿಯ ಬೇರು, ನೆಲದಾಳದ ಬೇರು, ಅಳಲೇಕಾಯಿ, ಇವಂ ಅರೆದು ಬಿಸಿನೀರಲ್ಲಿ ಕುಡಿಯೆ ಬಾಣಂತಿಜ್ವರ ಮಾಣ್ಗುಂ.

ಸಣ್ಣವರ ಜ್ವರಕ್ಕೆ :—ಕೆಮ್ಮು, ಉಚ್ಚುವದು, ಓಕರಿಕೆಗೆ:–ಕರ್ಕಟಕಶೃಂಗಿ, ಹಿಪ್ಪಲಿ, ಅತಿಬಜೆ, ಭದ್ರಮುಸ್ತೆ, ಇವಂ ತೇದು ಮೊಲೆಹಾಲಲ್ಲಿ, ಜೇನುತುಪ್ಪದಲ್ಲಿ ಕೊಳ್ಳೆ ಜ್ವರ, ಅತಿ ಸಾರ, ಕೆಮ್ಮು, ಕಾರಿಕೆ, ಉಚ್ಚುವುದು ಸಹ ಎಲ್ಲಾ ಮಾಣ್ಗುಂ.

ಕೆಮ್ಮುಗೂಡಿದ ಜ್ವರಕ್ಕೆ :—ನೆಲಗುಳ್ಳ, ಅಮರದವಳ್ಳಿ, ಶುಂಠಿ, ಆಡುಸೋಗೆ, ಇವಂ ಕಷಾಯವಂ ಕಾಸಿ ಹಿಪ್ಪಲಿಯ ಪ್ರತಿಪಾಕದಲ್ಲಿ ಕುಡಿಯೆ ಕೆಮ್ಮುಗೂಡಿದ ಜ್ವರ ಮಾಣ್ಗುಂ.

ಬರೀಕೆಮ್ಮಿಗೆ :—ಮುರ್ಕಳಿಮರದ ಒಳನಾರು, ಹಾಲಲ್ಲಿ ಅರೆದು ಕುಡಿಯೆ ಕೆಮ್ಮು ಹರ.

ಹೊಟ್ಟೆಬೇನೆಗೆ :—

ಜಾತೀಫಲಂ ಸೈಂಧವಂ ಹಿಂಗುಳಂ ಚ ವರಾಲಶುಂಠೀವಿಷಹೇಮಬೀಜಂ ।
ಸಪಿಪ್ಪಲೀಕಂ ಜಲಭಿಪ್ರಯುಗ್ಮಂ ಜಂಬೀರನೀರೈಃ ಪರಿಮರ್ದನೀಯಂ ॥
ತ್ರಿಶೂಲತೋಯೇನ ಕನಕಾರಸೇನ ಗುಂಜಾಪ್ರಮಾಣಂ ವಟಕಾನಿ ಕುರ್ಯಾತ್ ।
ರಕ್ತಾತಿಸಾರಂ ಸಿತಯಾನುಪಾನಂ ರಸೇಂದ್ರಜಾತ್ಯಾದಿಗುಣಪ್ರಸಿದ್ಧಂ ॥

ಟೀಕೆ :—ಜಾಯಿಕಾಯಿ, ಸೈಂಧವಲವಣ, ಇಂಗಲೀಕ, ವತ್ಸನಾಭಿ, ಉಮ್ಮತ್ತದ ಬೀಜ, ಹಿಪ್ಪಲಿ, ಭದ್ರಮುಸ್ತೆ, ಘೂಸದ ಹಳುಕು, ಇಷ್ಟನ್ನೂ ಮೂರು ತೂಕವಂಹಾಕಿ, ನಿಂಬೇಹಣ್ಣಿನ ರಸ, ಭಂಗೀರಸ, ಉಮ್ಮತ್ತದ ರಸ, ಈ ಮೂರು ಬಗೆಯ ರಸದಲ್ಲೂ ಮೂರು ಜಾವ ಮರ್ದಿಸಿ ಗುರುಗುಂಜೀತೋರದ ಗುಳಿಗೆಯಂ ಕಟ್ಟಿ ಕೊಡಲು ವಾತಶೂಲೆ, ಕಫಶೂಲೆ, ನಾನಾಬಗೆಯ ಉಗ್ರಶೂಲೆ, ಆಮಶೂಲೆ, ಆಮಾತಿಸಾರ, ಮೊದಲಾದ ಹೊಟ್ಟೆ ಬೇನೆ, ಶೂಲೆಗಳು ಮಾಣುವುವು. ರಕ್ತಾತಿಸಾರಕ್ಕೆ ಅನುಪಾನದಲ್ಲಿ ಕೊಡುವುದು. ನಾನಾ ಬಗೆಯ ಅತಿಸಾರಕ್ಕೂ ಒಳ್ಳೆಯದು.

ಆಮ್ಲಪಿತ್ತಕ್ಕೆ :—ಮಾದಳದ ಹಣ್ಣು, ತ್ರಿಕಟುಕ, ಕರಿಹತ್ತಿಹರಳು, ರಾಜಾನ್ನದ ಅಕ್ಕಿಯ ಹುರಿಹಿಟ್ಟು, ನೆಲಹರಳು, ಸೈಂಧವಲವಣ, ಏಲಕ್ಕಿ, ಎಲೆಹಂಬಿನ ನಾರು, ಹುಣಸೇಹಣ್ಣಿನ ಒಳನಾರು, ಇಂಗು, ಸುಟ್ಟಕರಿ, ಬಿಳುಗಾರದ ಹರಳು, ಇವಂ ಬಿಳಿಗರಿಕೆ ರಸದಿಂ ಅರೆದು ಮುದ್ಗಪ್ರಮಾಣ ಗುಳಿಗೆಯಂ ಮಾಡಿ ಅರಸಿನ, ಜೇನಿನಿಂದ ಕೊಡುವುದು. ಪಥ್ಯ ಮೊಸರು, ಕಟು ಓಗರ. ಹೀಗೆ ಒಂದು ಮಂಡಲ ತೆಗೆದುಕೊಳ್ಳುವುದು. ರಾತ್ರಿಗೆ ಕೊಡುವ ಕಷಾಯ—ಸಿಹಿತೊಂಡೆ, ಹೊಂಬೆಸರು, ಕಳ್ಳಂಗಡಲೆ, ಇವಂ ಕಷಾಯವಂ ಕಾಸಿ, ಹಿಪ್ಪಲಿ, ಶುಂಠಿ, ಇವು ಎರಡನ್ನೂ ಪ್ರತಿಪಾಕ ಹಾಕಿ ಕೊಡುವುದು, ಆಮ್ಲಪಿತ್ತ ಹರ, ಸಿದ್ಧಾಂತ.

ಆಮ್ಲಪಿತ್ತಕ್ಕೆ :—

ಗುಡೂಚಿಖಾದಿರಂ ಯಷ್ಟಿವಾಲಂ ಚೂರ್ಣಮಿದಂ ಸಮಂ |
ಮಧುನಾ ಲೇಹ್ಯತೇ ಸರ್ವಮಾಮ್ಲಪಿತ್ತಹರಂ ಪರಂ ||

ಓಕರಿಕೆಗೆ :—ಹರಿನಮಾಟೆ ತಿರುಳು, ಜೀರಿಗೆ, ಸಕ್ಕರೆ, ಇವಂ ಜೇನುತುಪ್ಪದಲ್ಲಿ ಕೊಳ್ಳಲು ಛರ್ದಿ, ಓಕರಿಕೆ ಹರ. ಮಾವಿನ ಬೀಜದ ತಿರುಳು ನೀರಲ್ಲಿ ಅರೆದು ಕೊಳ್ಳಲು ಗರ್ಭಿಣಿಯರ ಛರ್ದಿ ಮಾಣ್ಗುಂ.

ಪಿತ್ತ ಉದ್ರೇಕಕ್ಕೆ :—ತೊಂಡೆಯ ಸೊಪ್ಪ ತಂದು ಹಿಂಡಿ ಸೊಲ್ಲಿಗೆ ಹಾಲ ಹೊಯ್ದು ಕುಟ್ಟಿ ಹಿಂಡಿಕೊಂಡು ಮೆಣಸಿನ ಪುಡಿ, ಬೆಲ್ಲ ಸಹ ಹಾಕಿ ಕೊಳ್ಳಲು ಪಿತ್ತ ಮಾಣ್ಗುಂ.

ಊರ್ಧ್ವಶ್ವಾಸಕ್ಕೆ :—ಶುಂಠಿ, ದ್ರಾಕ್ಷೆಹಣ್ಣು, ಬೆಲ್ಲವತ್ತದ ಬೇರು, ಇವಂ ಅಷ್ಟಾವಶೇಷ ಕಷಾಯವಂ ಕಾಸಿ ಹಿಪ್ಪಲಿ ಪ್ರತಿಪಾಕವಿಕ್ಕಿ ಕುಡಿಯೆ ಊರ್ಧ್ವಶ್ವಾಸ ಮಾಣ್ಗುಂ

ಕ್ರಿಮಿಸಕಿಗೆ :—ತುರಿಯ ದೋಷಕ್ಕೆ ಕರಿಗಿರಿಕರ್ಣಿಕೆಯ ಬೇರಂ ತಂದು ಹಸಿ ಹಾಲಲ್ಲಿ ಕುಟ್ಟಿ ತಂದು ಶೋಧಿಸಿ ರಸವನ್ನು ಉದಯದಲ್ಲಿ ತೆಗೆದುಕೊಳ್ಳಲು ವಿರೇಕಮಕ್ಕುಂ. ಕಂಗೆಟ್ಟರೆ ಮಜ್ಜಿಗೆಅನ್ನ ಉಣ್ಣುವುದು, ನಿಲ್ಲುವುದು. ಒಂದು ದಿನ, ಎರಡು ದಿನ ತೆಗೆದು ಕೊಳ್ಳಲು ವಿರೇಕದಲ್ಲಿ ಸಕಲವೂ ಹೋಗುವುದು. ಏಳು ದಿನ ಆ ರಸವಂ ಕುಡಿಯಲು ಕ್ರಿಮಿಸಕು ಮಾಣ್ಗುಂ. ಹಾಲಲ್ಲಿ ಕುದಿಸಿ ಬಂಜೆಯಾಗಿರುವಾಗಲೇ ಕೇದಗೆ ಗೆಡ್ಡೆ ೨ ತೂಕ,

ಹಾಲಲ್ಲಿ ಕುದಿಸಿ ಹಿರಿಮದ್ದಿನ ಬೇರು ೨ ತೂಕ, ನೇಗಿಲ ರಸದಲ್ಲಿ ಕುದಿಸಿ ಈಶ್ವರಿ ೧ ತೂಕ, ಇವ ಚೂರ್ಣವಂ ಮಾಡಿ ಉರಿಯದೆ ಕೈಮುಸಕಿಗೆ ಕೊಳೆನೀರಲ್ಲಿ ಕುದಿಸುವುದು, ಸಣ್ಣಾನಾಗಿ ಇದ್ದರೆ.................. ಶ್ಲೇಷ್ಮಜ್ವರಕ್ಕೆ ಜೇನು ಕೂಡ, ಪಿತ್ತಜ್ವರಕ್ಕೆ ತುಪ್ಪದಲ್ಲಿ, ವಾತಜ್ವರಕ್ಕೆ ಹಸಿ ಶುಂಠಿಯ ರಸದಲ್ಲಿ ಕೊಡುವುದು. ಕೈಮುಸಕು ಹರ.

ಕಾಳಕೂಟವಿಷ ಇಕ್ಕಿದರೆ ತಿರುಗುವುದಕ್ಕೆ :—ಬೆಲ್ಲವತ್ತದ ಬೇರು, ತಾವರೆಗೆಡ್ಡೆ, ಎಲವದ ಬೇರು, ಈ ಮೂರನ್ನೂ ಸಮಾನಂಗೊಂಡು ಆಡಿನ ಹಾಲಲ್ಲಿ ಅರೆದು ಮೆಣಸಿನ ಪುಡಿ ಹಾಕಿ ದಿನ ಹತ್ತು ಗುಳಿಗೆಯಂ ಮಾಡಿ ಮೆಣಸಿನ ತೋರ ಗುಳಿಗೆಯನ್ನು ಆಡಿನ ಹಾಲಲ್ಲಿ ಕೊಳ್ಳಲು ಸನ್ನಿ, ಕಾಳಕೂಟವಿಷ ಹರ. ಉದ್ಧಗಾತ್ರ ಗುಳಿಗೆಯನ್ನು ಉದಯದಲ್ಲಿ ವೀಳ್ಯದ ಸಂಗಡ ಹಾಕಿಕೊಳ್ಳಲು ಕೆಮ್ಮು, ಶ್ಲೇಷ್ಮ ಸಹ ಮಾಣ್ಗುಂ. ಸರದಾಳಿಯ ನಿಂಬೇ ಹುಳಿಯಲ್ಲಿ ತುಳಿದು ಓಂಡಿಕೊಂಡು ಒಂದು ಸೊಲ್ಲಿಗೆ ಆಗಲೀ ಸೊಲ್ಲಿಗೆಯ ಅರೆಯೂ ಆಗಲೀ ರಸವಂ ಕುಡಿಯೆ ವಿರೇಕವಮುಕ್ಕು. ವಕ್ಕಿದರೂ ಲೇಸು. ಈ ಮೇರೆಯಲ್ಲಿ ಮೂರುದಿನಂ ಕೊಳ್ಳಲು ಮೋಹಾದಿದೋಷ ಗುಣ.

ಮಧುತಾಕಿ ಬಿದ್ದವರಿಗೆ :—ಕಿರುಸೆಲ್ಲಿಯ ಸಮೂಲವಂ ತಂದು ಎಳನೀರಲ್ಲಿ ಅರೆದು ಎಳನೀರಲ್ಲಿ ಕದಡಿ ಕೊಳ್ಳಲು ಉರಿತ ನಿಲ್ಲುವದು.

ಕೃತ್ರಿಮಕ್ಕೆ :—ಬಿಳಿಯ ಉಪ್ಪಿಯ ಬೇರಂ ತೇದು ಛಾಯಾಶುಷ್ಕವಂ ಮಾಡಿ, ತ್ರಿಕಟುಕ, ತ್ರಿಫಲೆ ಇವು ಎರಡು ಒಂದುಪಾಲು, ಆ ಬೇರಿನ ಪುಡಿ ಒಂದುಪಾಲು ಇವಂ ಕೂಡಿ ಜೇನುತುಪ್ಪದಿ ಕಲಸಿ ತೆಗೆದುಕೊಂಡರೆ ಕೃತ್ರಿಮ ಮಾಣ್ಗುಂ.

ಸೂಳೆಯರು ಒಲುಮೆಗೆ ಮದ್ದನಿಕ್ಕಿದರೆ ತಿರುಗುವುದಕ್ಕೆ :—ಕಹಿತುಂಬೆಯ ರಸವಂ ಮೂರುದಿನ ಕುಡಿಯೆ ವಾಂತಿಯಾಗುವುದು. ಒಲುಮೆ ಮಾಣ್ಗುಂ.

ಸೇರಲಾರದವರ ಮನೆಗೆ ಊಟಕ್ಕೆ ಹೋದರೆ ಕೃತ್ರಿಮವ ಇಕ್ಕಿದ್ದಕ್ಕೆ ನಿದರ್ಶನವ ನೋಡುವದಕ್ಕೆ ಅನ್ನ ತಿರುಗುವದಕ್ಕೆ ತೈಲಔಷಧ :—ಗೋರೋಚನೆ, ಪುತ್ರಜೀವಿಮಣಿ ತಿರುಳು, ನೇರಿಲಬೀಜ, ಇವ ಮೂರನ್ನೂ ಸಮಾನಂಗೊಂಡು ಚೂರ್ಣವಂ ಮಾಡಿ ಉಂಡ ಮೇಲೆ ಮೆದ್ದರೆ ವಾಂತಿಯಾಗುವುದು, ಕೃತ್ರಿಮ ಇಲ್ಲದೇ ಇದ್ದರೆ ದಕ್ಕುವದು.

ಸಂದೇಹವಾದ ಸ್ಥಳಕ್ಕೆ ಭೋಜನಕ್ಕೆ ಹೋದರೆ :—ಹೋಗುವಾಗಲೇ ಕಿರುಕುಸಾಲೆ ಬೇರು ಒಣಗಿಸಿ ಚೂರ್ಣವಂ ಮಾಡಿ ಇರಿಸಿಕೊಂಡು ಊಟಕ್ಕೆ ಹೋಗುವಾಗ ಹಾಲಲ್ಲಿ ಕುಡಿದು ಹೋಗಿ ಭೋಜನವ ಮಾಡಿದರೆ ಅವನ್ನಿಕ್ಕಿದರೆ ವಾಂತಿಯಾಗುವುದು. ಅವನ್ನಿಕ್ಕದೆ ಇದ್ದರೆ ದಕ್ಕುವುದು.

ಕಣ್ಣಿನ ರೋಗಕ್ಕೆ :—ಮುಳ್ಳುಮುತ್ತುಗದ ರಸದಲ್ಲಿ ಹುಲಿಗಿಲ ಬೀಜವಂ ಅರೆದು ಗುಳಿಗೆಯಂ ಮಾಡಿ ಹಚ್ಚಲು ಎಲ್ಲಾ ಚಕ್ಷುರೋಗಂ ಕೆಡುಗುಂ. ಅದಂ ಜೇನುತುಪ್ಪದಿಂದ

ಹಚ್ಚಲು ಅಷ್ಟದೋಷ ಕೆಡುಗುಂ. ಅದಂ ಗರುಗದ ರಸದಿಂದ ಹಚ್ಚಲು ತೀಟಿ ಕೆಡುಗುಂ. ಅದಂ ನೀಲೀರಸದಿಂದ ಹಚ್ಚಲು ತಿಮಿರ ಕೆಡುಗುಂ. ಕುರುಟಿಗೆಯ ಬೇರಂ ಸಿದ್ಧ ದಿನದಲ್ಲಿ ತೆಂದು ಅರೆದು ಮೂಗಿಗೆ ನಸ್ಯಂಮಾಡೆ ತಲೆಯ ರೋಗ, ಮೂಗಿನ ರೋಗ ಮಾಣ್ಗುಂ. ಅದಂ ಲೊಕ್ಕಿಸೊಪ್ಪಿನ ರಸದಿಂದ ಹಚ್ಚಲು ಕಣ್ಣುಬೇನೆ ಮಾಣ್ಗುಂ. ಆ ಬೇರಂ ಹಸುವಿನ ತುಪ್ಪದಿಂದ ಹಚ್ಚಲು ಕಾಚು, ನೀಲಗಣ್ಣು ಮಾಣ್ಗುಂ. ಆ ಬೇರಂ ಜೇನು ತುಪ್ಪದಿಂದ ಹಚ್ಚಲು ಸಿರುಗಣ್ಣು ಮಾಣ್ಗುಂ. ಆ ಬೇರಂ ಕಕ್ಕೆಯ ಎಲೆಯ ರಸದಿಂದ ಹಚ್ಚಲು ಮಂಜುಗಣ್ಣು ಮಾಣ್ಗುಂ. ಆ ಬೇರಂ ಆಡಿನ ಹಾಲಿಂದ ಹಚ್ಚಲು ಕೆಟ್ಟ ದೃಷ್ಟಿ ಬರುವುದು. ಮಂಗರವಳ್ಳಿ, ಕಸ್ತೂರಿ, ಅರಸಿನ, ಇವಂ ನಿಂಬೇಹುಳಿಯಲ್ಲಿ ಅರೆದು ಕುಡುಹುಗುಳ ಮಾಡಿ ಇರಿಸಿಕೊಂಡು ಜೇನುತುಪ್ಪದಿ ಹಚ್ಚಲು ಪರೆಗಣ್ಣು ಮಾಣ್ಗುಂ. ಕನಕಫಲವೆಂದರೆ ಬೇಲದ ಬೀಜ, ರಕ್ತಚಂದನ ಹಗಿನು, ಬೂರು ಹೂವಿನೊಳಗಣ ಕುಸುಮ, ಒಳ್ಳೆಯ ಅರಸಿನ, ಮರದರಿಸಿನ, ಇವಂ ಅಳಲೇನೀರಲ್ಲಿ ಅರೆದು ಗುಳಿಗೆಯಂ ಮಾಡಿ ಆ ಅಳಲೇ ನೀರು ತೆಗೆದು ಹಚ್ಚಲು ಹೋದ ಕಣ್ಣು ಬರುವುದು. ಗುಳ್ಳದ ಹಣ್ಣಿನ ರಸದಲ್ಲಿ ಕಿಂಚಿತ್ತು ಬೆಲ್ಲವ ತೇದು ಹಚ್ಚಲು ಕಣ್ಣು ಬಿಳಿಪು ಮಾಣ್ಗುಂ. ಗುರುಗುಂಜಿಯ ಬೇಳೆಯನ್ನು ಮೊಲೆ ಹಾಲಿಂದ ತೇದು ಹಚ್ಚಲು ಕಣ್ಣುಮಂಜು ಮಾಣ್ಗುಂ. ಕಿರುಕುಸಾಲೆಯ ರಸದಲ್ಲಿ ಸೈಂಧವ ಲವಣಂ ಮಿಶ್ರವ ಮಾಡಿ ಮೊಸರನೀರ ಸಹ ತಾಮ್ರದ ಭರಣಿಯಲ್ಲಿ ಇಳಿಸಿಕೊಂಡು ಹಚ್ಚಲು ದೃಷ್ಟಿ ತಿಳಿಯುವುದು. ಕಣ್ಣುನೀರು ಸುರಿಯುತ್ತಿರುವುದು ನಿಲ್ಲುವುದು.

ನೇತ್ರವಾಯುವಿಗೆ :—ಎಲೆಕಪ್ಪಲಿ, ಪಚ್ಚೆತುತ್ತ, ಪಟಿಕ, ಕಡಲನಾಲಿಗೆ, ಅಳಲೇಕಾಯಿ ಕರಿ, ಕಾರ್ತಿಕೇಯಕರಿ, ಇವು ಎಲ್ಲವೂ ಸಮಭಾಗ, ಸಣ್ಣನಾಗಿ ತಿರುಹಿ ಪುಡಿಮಾಡಿ ಹಸುವಿನ ಬೆಣ್ಣೆ ಸಹ ತಳಿಗೆಯ ಮೇಲೆ ತಾಮ್ರದ ಚಂಬಿನಲ್ಲಿ ಉಜ್ಜಿ ಆಮೇಲೆ ಪಚ್ಚೆಕರ್ಪೂರ ಕೂಡಿ ಕೊಂಡು ಕಣ್ಣಿಗೆ ಹಚ್ಚುವುದು. ಎಲೆಕಪ್ಪುರವನ್ನೂ ತುತ್ತವನ್ನೂ ಶುದ್ಧೈಸಿ ಹಾಕಬೇಕು. ಆಮೇಲೆ ಮಂಡೆಗೆ ತೈಲ—ನಿಂಬೇಹಣ್ಣಿನ ಹುಳಿ, ವಿರಕಣಗಿಲ ರಸ, ನೇರಿಲ, ಚಿಲಕೀರೆಯ ರಸ, ಗರುಗದ ರಸ, ಎಣ್ಣೆಯ ಸಮಭಾಗ ಕೂಡಿಸಿ ಅಟ್ಟು ತಲೆಗೆ ಒತ್ತಿಕೊಳ್ಳುವುದು. ಒಂದು ದಿನ ತಪ್ಪಿಸಿ ಒಂದು ದಿನ ಒತ್ತಿಕೊಳ್ಳುವುದು. ಏಳುದಿನಕ್ಕೆ ನೇತ್ರವ್ಯಾಧಿ ಗುಣ. ಮತ್ತೊಂದು ತೈಲ—ಹೊನಗೊನ್ನೆಯ ರಸ, ಗರುಗದ ರಸ, ಕಿರುಕುಸಾಲೆಯ ರಸ, ಕಾಡಹೊನ್ನ ಎಲೆಯ ರಸ, ಇವ ನಾಲ್ಕನ್ನೂ ಎಣ್ಣೆ ಸಮಭಾಗ, ತ್ರಿಫಲೆ, ಅರಸಿನ, ಹಸಿಅರಸಿನ, ಮರದರಸಿನ, ಕಸ್ತೂರಿ ಅರಸಿನ, ಇದಂ ಚೂರ್ಣವಂ ಮಾಡಿ ಹಾಕಿ ತೈಲಹದದಲ್ಲಿ ಕಾಸಿ ಈ ತೈಲ ಒತ್ತಿ ಕೊಳ್ಳಲು ನೇತ್ರವಾಯು ಗುಣ.

ನೇತ್ರರೋಗದ ಲೇಪ :—ಕರಿ ಆಡಿನ ಹಾಲಲ್ಲಿ ಬೂದಿಯ ಲೇಪಿಸಲು, ಕಾಸಲು ಗುಣ. ಅಮರದ ವಳ್ಳಿಯ ಬೇರು, ಹಿಪ್ಪಲಿ, ಜೇನುತುಪ್ಪದಲ್ಲಿ ತೇದು ಹಚ್ಚಲು ಎರಡು ಘಳಿಗೆ ಇರಿಸಿ ಬಿಸಿನೀರಿಂ ತೊಳೆಯುವುದು. ತಿಮಿರ, ಮಂಜುಗಣ್ಣು ಸಹ ಮಾಣ್ಗುಂ.

ಕಣ್ಣಿನ ಹೂವಿಗೆ :—ತ್ರಿಕಟುಕ, ಹಲಿಗಿಲಿಬೀಜ, ಅರಸಿನ, ಮರದರಸಿನ, ಕಡಲ ನಾಲಗೆ, ಬೆಲ್ಲದ ಬೀಜ, ಬೆಲ್ಲವತ್ತದ ಹಣ್ಣಿನ ತಿರುಳು, ತ್ರಿಫಲೆ, ಇವಂ ಸಮಾನಂಗೊಂಡು

ಗರುಗದ ರಸದಿಂದ ಅತಿಸಣ್ಣನಾಗಿ ಅರೆದು ಕುಡುಹುಗಳ ಮಾಡಿ ಜೇನುತುಪ್ಪದಲ್ಲಿ ತೇದು ಹಚ್ಚಲು ಕಣ್ಣುದೃಷ್ಟಿ ಬರುವುದು. ಗ್ರಹಗಳಿಗೆ ನಿಂಬೇಹಣ್ಣಿನ ರಸದಲ್ಲಿ ಹಚ್ಚುವುದು. ಶುಭ ದಿನದಿಂ ಸುರಹೊನ್ನೆಯ ಬೇರಂ ತಂದು ಚೂರ್ಣವಂ ಮಾಡಿ ಹಸಿಹಾಲಲ್ಲಿ ಹಾಕಿದರೆ ಬೆಣ್ಣೆ ಆಗುವುದು. ಆ ಬೆಣ್ಣೆಯನ್ನು ಏಳುದಿನ ಕಣ್ಣಿಗೆ ಇಕ್ಕಲು ಹೂವುಹೋಗಿ ಕಣ್ಣು ಗುಣ ವಾಗುವುದು.

ಆಜ್ಯೇನ ಬೇಲಂ ಮಧುನಾ ಚ ತೋಯಂ ನಿರೀಹಕಂಡೂತಿಮಿರಂ ಚ ಭೃಂಗೀ ।
ರಾತ್ರ್ಯಾಂಧಕಾರೀ ರಜನೀ ಚ ರೋಮ ಪುನರ್ನವೀ ನೇತ್ರರುಜಾಪಹಾರೀ ॥
ಚಾರುಹರೀತಕಿಬೀಜಸುಬೀಜಂ ಪಿನಸಪಿಪ್ಪಲಿಪಂಚಮರೀಚಂ ।
ಆಮಲಕಾರಸಘೃಷ್ಟಸುಘೃಷ್ಟಂ ದೂರಸುಯೋಜನದೃಷ್ಟಿಸುದೃಷ್ಟಿಃ ॥

ಕಣ್ಣುಹೂವಿಗೆ :—ಅಂಕೋಲೆ ಬೇರು, ಮೊಲೆಹಾಲಿಂದ ತೇದು ಹಚ್ಚಲು ಕಣ್ಣು ಹೂವು ಮಾಣ್ಗುಂ.

ಕಣ್ಣುಬೇನೆಗೆ :—ಅಳಲೇಕಾಯಿ, ಹಿಪ್ಪಲಿ, ಇವಂ ಬಿಸಿನೀರಲ್ಲಿ ಅರೆದು ಕಣ್ಣಿಗೆ ಇಕ್ಕುವುದು, ಕಣ್ಣುಬೇನೆ ಮಾಣ್ಗುಂ.

ಕಣ್ಣುಹುಳು ಬೀಳುವುದಕ್ಕೆ :—ನುಗ್ಗೇಬೇರು, ಈ ಸೊಪ್ಪು, ಹುಣಸೆಯ ಚಿಗುರು, ಈ ಹಳೇಹಣ್ಣು, ಹುಳಿರಸದ ಹುಳುಕು, ಕೊನ್ನೆಬೇರು, ಅಳಲೇಕಾಯಿ, ಇವಂ ಸಮಾನಂ ಗೊಂಡು, ಸರಿ ಅರೆದು ಅರುವೆಯಲ್ಲಿ ಕಟ್ಟಿ ಇಕ್ಕಿ ಕಣ್ಣಿಗೆ ಹಿಂಡಲು ನೂಲತೆರೆಯ ಹಾಗೆ ಕಣ್ಣಲ್ಲಿ ಇದ್ದ ಹುಳುಕು ಬೀಳುವುದು.

ಹುಣ್ಣಿಗೆ :—ಕಹಿಹೀರೆಯ ಸಮೂಲವಂ ತಂದು ಸುಟ್ಟು ಬೂದಿಯ ಮಾಡಿ, ಬೆಲ್ಲ, ಸುಣ್ಣ, ಬೂದಿ, ಈ ಮೂರನ್ನೂ ಕೂಡ ಹಾಕಿ ಕಲಸಿ ಹುಣ್ಣಿನ ಸುತ್ತ ಬರೆದರೆ ಆ ಹುಣ್ಣು ಬೇರು ಸಹ ಕಿತ್ತು ಬೀಳುವುದು. ಕೋಳಿಯ ವಿಷ್ಟೆ, ಹಿಪ್ಪಲಿ, ಸುಣ್ಣ ಇವು ಮೂರನ್ನೂ ಅರೆದು ಬತ್ತಿಗೆ ತೊಡೆದು ಬತ್ತಿ ಇಕ್ಕಲು ನೂತಿ ಮಾಣ್ಗುಂ. ಅರಿದಳ, ಬೇವಿನ ಎಲೆ, ಇವಂ ನವ ಸಾರದಿಂದ ಅರೆದು ಪೂಸಲು ದಶನೂತಿ ಮಾಣ್ಗುಂ.

ದಂತನೂತಿಗೆ :—ಏಲಕ್ಕಿ ಹುಡಿ, ಬಜೆಯ ಪುಡಿ, ಇವಂ ಪಾರಿವಾಣಸೊಪ್ಪಿನ ರಸದಲ್ಲಿ ಬಿದುರ ಕರುಕು ರಸದಿಂದ ಅರೆದು ಲೇಪವ ಹಾಕಿ ಇಕ್ಕಲು ದಂತನೂತಿ ಮಾಣ್ಗುಂ.

ನೂತಿಹುಣ್ಣಿಗೆ:—ಇಂಗುಳದ ಹಣ್ಣಿನ ತಿರುಳ ತೆಗದು ವಾಲುಕದಲ್ಲಿ ತೈಲವ ತೆಗೆದು ನಿತ್ಯವೂ ಅರೆತೂಕವ ತೆಗೆದುಕೊಳ್ಳುವುದು. ಹುಣ್ಣಿಗೆ ಬತ್ತಿಯ ಮಾಡಿ ಹಾಕಲು ಮಾಣ್ಗುಂ. ಎಕ್ಕೆಯ ರಸದಿಂ ಹೊನಗೊನ್ನೆಯ ಬೀಜವ ತೇದು ಬತ್ತಿಗೆ ಕೂಡಿ ಕರುಕಮಾಡಿ ಕೈಯೆಣ್ಣೆ ಯಲ್ಲಿ ಕಲಸಿ ವ್ರಣಕ್ಕೆ ಹಾಕಲು ನೂತಿ, ಗೂದೆ, ಗಂಡಾಮಾಲೆ ಮಾಣ್ಗುಂ. ಮುಂಡುಗಳ್ಳಿಯ ಹಾಲಲ್ಲಿ ಕಹಿಹೀರೆಯ ಬೀಜವ ತೇದು ೩ ದಿನ ಇಕ್ಕಲು ನೂತಿ ಮಾಣ್ಗುಂ.

ದಂತನೂತಿಗೆ, ಹತ್ತಿಬತ್ತಿಗೆ.—ಸಕ್ಕರೆ, ಏಲಕ್ಕಿಪುಡಿ, ಕುರುಟಿಗೆ ಹಾಲು, ಇಷ್ಟನ್ನೂ ಈ ಬತ್ತಿಯಲ್ಲಿ ಒಣಗಿಸಿ ದಂತದ ವ್ರಣಕ್ಕೆ ಇಕ್ಕಿಸಲು ಗುಣವಾಗುವುದು, ದಂತನೂತಿ ಮಾಣ್ಗುಂ. ಹಳುಕು ಆಲದ ಹಾಲನ್ನು ತಂದು ಸಕ್ಕರೆ ಬೆರಸಿ ಬತ್ತಿಗೆ ಹೂಡಿ ಆ ಬತ್ತಿಯನ್ನು ಹೊಗೆಯಿಕ್ಕಲು ಗುಣ. ಬುಗುಡಿಯ ಹಾಲಂ ಬತ್ತಿಗೆ ಹೂಡಿ ಆ ಹುಣ್ಣಿಗಿಕ್ಕಲು ಗುಣ. ಕರ್ನಮೂಲಕ್ಕೆ ಹೂರದಕಾಯಿಯ ಸೊನೆಯನಿಕ್ಕಲು ಇಂಪಾಗುವುದು. ಕಾಚ, ತುತ್ತ ಈ ಎರಡರ ರಸ ಸೊನೆಯಲ್ಲಿ ತೇದು ಬತ್ತಿಗೆ ಹೂಡಿ ವ್ರಣಕ್ಕೆ ಇರಿಸುವುದು. ಕಣ್ಣಿನ ಬಳಿಯಲ್ಲಿ ಇದ್ದ ನೂತಿಗೂ ಇದೇಪ್ರಕಾರದಲ್ಲಿ ಮಾಡುವುದು. ನೊಗದ ಹುಣ್ಣಿಗೆ ಬೂರಗಕಾಯ ಸೊನೆಯಿಕ್ಕಲು ನೊಗದ ಹುಣ್ಣುಗಳು ಮಾಣುವುವು. ಹಲ್ಲುಹುಳುವಿಗೆ ವಿಳಂಗವಂ ಬಿಸಿ ಮಾಡಿ ಪುಡಿ ಮಾಡಿ ಆ ಪುಡಿಯಂ ಕಿವಿಚಿದರೆ ಹಲ್ಲುಗಳ ಕ್ರಿಮಿ ಹರ. ಕಕ್ಕೆಬಗರು, ಓಮ, ಬಜೆ, ಇಷ್ಟನ್ನೂ ಕೂಡಿ ಜಜ್ಜುಗೊಟ್ಟ ಅಣಲೊಳಗೆ ಒತ್ತಿ ಇಡಿಸಿಕೊಂಡರೆ ಬೆಳಗಾಗೆ ಆದ ರೋಗ ಹರವಾಗಿ ಹುಳು ಬರುವುದು.

ಹಲ್ಲುನೋವಿಗೆ :—ಶುಂಠಿ, ಹಿಪ್ಪಲಿ, ಸಾಸುವೆ, ಮೆಣಸು, ಇವಂ ಅರೆದು ನೀರೊಳಗೆ ಹಾಕಿ ಕಾಸಿ ಮುಕ್ಕಳಿಸಲು ನೋವು ಮಾಣ್ಗುಂ.

ಹಲ್ಲುಶೂಲೆಗೆ :—ವಜ್ರದಂತಿ, ಕಾಚ, ಗೇರಹರಳು, ಇವು ೩ ನ್ನೂ ವೀಳ್ಯದಲ್ಲಿ ಹಾಕಿಕೊಳ್ಳಲು ಹಲ್ಲುಶೂಲೆ ಗುಣ.

ಹಲ್ಲಕುರುವಿಗೆ: —ವಜ್ರದಂತಿ, ಹಳೆಯ ಬದನೆಯ ಸೊಪ್ಪು, ಸೈಂಧವಲವಣ, ಇವಂ ತೂಕವ ಮಾಡಿ ಇಕ್ಕಲು ಹಲ್ಲಕುರುವು ಮಾಣ್ಗುಂ.

ದಂತಾರ್ಬುದಕ್ಕೆ :—ಗುಳ್ಳ, ಬದನೆಯ ಬೇರು, ಕಕ್ಕೆತಿಗಡು, ಇವಂ ಎಣ್ಣೆಯಲ್ಲಿ ಅರೆದು ಪೂಸಲು ದಂತಾರ್ಬುದ ಮಾಣ್ಗುಂ.

ಕಿವಿಬೇನೆಗೆ :—ಅಂಬಿಲ, ಸೈಂಧವಲವಣ, ಎಣ್ಣೆಯಲ್ಲಿ ಬಿಸಿಮಾಡಿ ಕಿವಿಗೆ ಹಾಕೆ ಕಿವಿಬೇನೆ ಮಾಣ್ಗುಂ. ಊಷಾ ಒಳಗೆ ಎಸಗದ ಹಣ್ಣನ್ನು ಹಿಂಡಿ ಕಿವಿಚಲು ಗಟ್ಟಿಯಾರುವುದು.

## D 1371 & D 1374

ಹಳೆಯ ಜ್ವರಗಳಿಗೆ ರಸ :—ರಸ ೧, ಗಂಧಕ ೨, ಇಂಗಲೀಕ ೩, ಜೇಪಾಳ ೪ ಇವ ಕೂಡಿ ಜೇಪಾಳದ ಕಷಾಯದಲ್ಲಿ ಎರಡು ಜಾವ ಮರ್ದಿಸಿ ಗುಂಜಾಪ್ರಮಾಣ ಗುಳಿಗೆಯಂ ಮಾಡಿ ನೆಳಲಲ್ಲಿ ಒಣಗಿಸಿ ಒಂದು ಗುಳಿಗೆಯನ್ನು ೧ ತೂಕ ಸಕ್ಕರೆಯಲ್ಲಿ ಕೊಟ್ಟರೆ ಒಂದು ಯಾ ಎರಡು ಬಾರಿ ವಿರೇಚನವಾಗುವುದು. ಆ ಮೇಲೆ ಒಂದು ಬಟ್ಟಲು ಬಿಸಿನೀರು ಕೊಟ್ಟರೆ ವಿರೇಚನವಹುದು. ಹಳೆಯ ಜ್ವರ ಬಿಟ್ಟು ಹೋಗುವುದು. ಇದಕ್ಕೆ ಪಥ್ಯ ಬೆಣ್ಣೆ ಓಗರ, ಮೊಸರ ಕಟ್ಟು ಕೊಡುವುದು. ಇಲ್ಲವೇ ಮೊಸರು ಓಗರ, ಮಜ್ಜಿಗೆ ಓಗರ ಇಕ್ಕುವುದು.

ಶೀತಜ್ವರಕ್ಕೆ :—ಇಲಿಪಾಷಾಣ ೨ ತೂಕ, ತಾಳಕ ಲಾಗ ೩, ಎಲೆಗಪ್ಪಲಿ ಲಾಗ ೧, ಇವ ಕೂಟ ಲೋಳಿಸರದ ರಸದಲ್ಲಿ ಮರ್ದಿಸಿ ಹಣತೆಯಲ್ಲಿ ಸಂಪುಟಿಸಿ ಸಿರುಮಣ್ಣುಗೊಂಡು ಮಳಲ

ಒಳಗೆ ಹೂಳಿ ಮೇಲೆ ಕುಕ್ಕುಟಪುಟವಿಕ್ಕುವುದು. ಅದು ಭಸ್ಮವಕ್ಕು. ಆ ಭಸ್ಮದೊಳಗೆ ನವ ಸಾರ ನಾಲ್ಕು ತೂಕವಂ ಕೂಡಿ ಚೂರ್ಣವ ಮಾಡಿ ಆ ಚೂರ್ಣವಂ ಆಲದ ರಸದಲ್ಲಿ ಗುಂಜಿ ತೂಕವಂ ಕೊಡುವುದು. ಇಲ್ಲದಿದ್ದರೆ ನಾಲ್ಕೆರಳು ಹಸಿಯ ಹಾಲಲ್ಲಿ ಕೊಡುವುದು. ಆ ಮೇಲೆ ಗಂಜಿಯ ಕೊಡುವುದು. ಶೀತಜ್ವರ ಮಾಣುವುದು.

ರಸಶ್ಚ ಗಂಧಕಂ ಚೈವ ಹಿಂಗುಳೋ ಭೃಂಗಕಸ್ಸಮಃ ।
ಜೀರಕಂ ಪಂಚಭಾಗಂ ಚ ಮರ್ದಿತಂ ಸರ್ವಮೇವ ತು ॥
ಜೀರಕಾದಿಕನೀರೇಣ ಗುಂಜಾಮಾತ್ರಂ ವಟೀಕೃತಂ ।
ನಾಲಿಕೇರಜಲೈರ್ದದ್ಯಾಚ್ಛೀತೇ ತಾಪಜ್ವರೇ ತಥಾ ॥

ಟೀಕೆ:—ರಸ ಲಾಗ ೧ ತೂಕ, ಗಂಧಕ ೧ ತೂಕ, ಇಂಗಲೀಕ ೧ ತೂಕ, ಜೀರಿಗೆ ಲಾಗ ೫ ತೂಕ, ಇವ ಜೀರಿಗೆಯಲ್ಲಿ ಅರೆದು ಆ ರಸವ ಹಿಂಡಿಕೊಂಡು ಆ ರಸದಲ್ಲಿ ಚೆನ್ನಾಗಿ ಮರ್ದಿಸಿ ಗುಂಜಿಯ ಪ್ರಮಾಣ ಗುಳಿಗೆಯ ಮಾಡಿ ಕೊಳ್ಳುವುದು.

ಶುದ್ಧಿಗೆ :—ನಾಭಿಗೆ–ಅಶ್ವಗಂಧಿ ; ಕಣಿಗಲಬೇರಿಗೆ–ಅಳಲೇಕಾಯಿ ; ಎಕ್ಕೆಹಾಲಿಗೆ–ಬೆಣ್ಣೆ; ಉಮ್ಮತ್ತದ ಬೀಜದ ಎಣ್ಣೆಗೆ-ಹತ್ತೀಬೀಜ, ಬಿಸಿನೀರು; ಗುರುಗಂಜಿ ಎಣ್ಣೆಗೆ-ಕಿರುಕು ಸಾಲೆಬೇರು ; ಕೋಳಿಕುಟುಮನ ಗೆಡ್ಡೆಗೆ–ಶುಂಠೀರಸ ; ಉಚಿಮಲಿಹುಳುವಿಷಕ್ಕೆ–ನೆಲಾವರೆ ಸಮೂಲ, ನಾಗರಎಣ್ಣೆ ; ಅರೆದು ಕುಡಿವರೆ ಸುಣ್ಣದ ನೀರು ; ಸಕಲವಿಷಕ್ಕೆ–ನೀಲೀಬೇರು, ಕಂಬಳಿ ಸುಟ್ಟ ಕರುಕು, ಬಿಸಿನೀರು.

ರಕ್ತಾತಿಸಾರಕ್ಕೆ :—ಕಾಡುಜೋಳದ ಸಮೂಲವಂ ತಂದು ಕುಟ್ಟಿ ಹೊಸಭಾಜನದಲ್ಲಿ ಹಾಕಿ, ನೀರ ಹೊಯ್ದು ಊರಲಿಟ್ಟು, ಅದರ ಒಳಗೆ ಕಿಟ್ಟವ ಪುಡಿ ಮಾಡಿ ಹಾಕಿ ಅರಸಿನ ಅರ್ಧ, ಎಳ್ಳೆಣ್ಣೆ ಅರ್ಧ, ಕೂಡ ಕಲಸಿ ಆರುದಿನ ಕೊಡುವುದ. ಪಥ್ಯ ಹಾಲು ಓಗರ, ಮೆಣ ಸಿನ ಪುಡಿಯ ಹಾಕುವುದು. ರಕ್ತಾತಿಸಾರ ಮಾಣ್ಗುಂ.

ಹಳೆಯ ಜ್ವರಗಳಿಗೆ:—ರಸಂ, ಗಂಧಕಂ, ಇಂಗಲೀಕಂ, ಜೇಪಾಳ, ಇವ ಕೂಡಿ ಜೇಪಾ ಳದ ಕಷಾಯದಲ್ಲಿ ಎರಡು ಜಾವ ಮರ್ದಿಸಿ ಗುಂಜಿಪ್ರಮಾಣ ಗುಳಿಗೆಯಂ ಮಾಡಿ ನೆಳಲಲ್ಲಿ ಒಣಗಿಸಿ ಒಂದು ಗುಳಿಗೆಯನ್ನು ೧ ತೂಕ ಸಕ್ಕರೆಯಲ್ಲಿ ಕೊಟ್ಟರೆ ಒಂದು ಎರಡು ಬಾರಿ ವಿರೇ ಚನವಹುದು. ಮೇಲೆ ಒಂದು ಬಟ್ಟಲು ಬಿಸಿನೀರು ಕೊಟ್ಟರೆ ವಿರೇಚನವಹುದು. ಹಳೇ ಜ್ವರ ಬಿಟ್ಟುಹೋಗುವುದು. ಇದಕ್ಕೆ ಪಥ್ಯ ಬೆಣ್ಣೆಓಗರ ಕೊಡುವುದು. ಇಲ್ಲವೇ ಮೊಸ ರೋಗರ, ಮಜ್ಜಿಗೆ ಓಗರ.

ಹಳೇಹುಣ್ಣುಗಳಿಗೆ :—ರಸ, ಮೈಲಿತುತ್ತ, ಬಂಗಾಳಪಚ್ಚೆ, ಮೇಣ, ಕಾಚು, ಬಿಳು ಗಾರ, ಕಡಲನಾಲಿಗೆ, ಸೀಸ, ಇಷ್ಟನ್ನೂ ಸಮಭಾಗಂ ಮೆತ್ತಿ, ಹಸುವಿನ ಬೆಣ್ಣೆ, ಚಿಟ್ಟೆವುಡಲದ ಎಣ್ಣೆ, ಸವುಟಿನಲ್ಲಿ ಅಟ್ಟು ತಳಿಗೆಯಮೇಲೆ ಕುಮರಿಸಿ ಬೆಣ್ಣೆ ಹಾಕಿ ಮೇಲೆ ಮತ್ತೊಂದು ಚೆಂಬಿ ನಲ್ಲಿ ಮರ್ದಿಸಿ ಒರೆಗುತ್ತಿ ಹಾಕುವುದು. ಬೇರೆ ರಸವನ್ನೂ, ಸೀಸವನ್ನೂ ಕಬ್ಬಿಣದ ಸೌಟ ನಲ್ಲಿ ಬೇರೆ ಕಾಸುವುದು. ಅವುಡಲದ ಎಣ್ಣೆಯಲ್ಲಿ ತೊಡೆವಾಳ......(ಅಪೂರ್ಣ).

ವಿಷಮಜ್ವರಕ್ಕೆ ಕಷಾಯ :— ಬೇವಿನ ಒಳನಾರು, ಅಮರದ ವಳ್ಳಿ, ಬೋಳ, ಕಹಿಪಡವಲ, ಇವ ಕಷಾಯವ ಮಾಡಿ ಶ್ರೀಗಂಧ, ಬೆಲ್ಲ, ಪ್ರತಿಪಾಕವ ಮಾಡಿ ಕುಡಿಸಲು ಬಹು ದಿನಗಳಿಂದ ಇರುವ ವಿಷಮಜ್ವರ ಮಾಣುವುದು. ತ್ರಿಕಟುಕವ ಬೇವಿನ ಎಲೆಯ ರಸದಲ್ಲಿ ಅರೆದು ನಸ್ಯಂಗೈಯ್ಯೆ ಭೂತವಿಷವು ಮಾಂಬುದು. ಬಕುಳಬೀಜವಂ ಅಕ್ಕಿಯ ಗಚ್ಚಿನಿಂದ ಅರೆದು ನಸ್ಯಗೈಯ್ಯಲು ಸನ್ನಿಪಾತಜ್ವರ ಬಿಟ್ಟುಹೋಗುವುದು. ಇಪ್ಪೆಯಬೇರ ಆಡಿನ ಮೂತ್ರದಿಂದ ಏಳುಬಾರಿ ಭಾವನೆಯ ಕೊಟ್ಟು ಆರಿಸಿ ಸೈಂಧವ, ಬಜೆ, ತ್ರಿಕಟುಕ, ಇದರಿಂದ ನಸ್ಯಮಾಡೆ, ಭೂತ, ಶಾಕಿನಿ, ಡಾಕಿನಿದೋಷ, ಸನ್ನಿಪಾತಜ್ವರಂಗಳು ಬಿಟ್ಟುಹೋಗುವುವು. ಹಲವುಕಾಲದ ಹುಣಸೇಹಣ್ಣು, ಮಾದಲದ ರಸ, ತ್ರಿಕಟುಕಂ, ಸಕ್ಕರೆ, ಇವ ಅರೆದು, ಲೇಹ್ಯವ ಮಾಡಲು ನಾಲಿಗೆ ಹೋಳಾದಂತಹ ಸನ್ನಿಪಾತ ಬಿಟ್ಟುಹೋಗುವುದು.

ಕಾಮಾಲೆಗೆ :— ತಿಗುಡೆ, ತ್ರಿಫಲೆ, ಬೆಲ್ಲ, ಇವ ಅರೆದು ಮೆದ್ದು ಬಿಸಿನೀರ ಕುಡಿದರೆ ವಿರೇಚನವಹುದು. ಇದರಿಂದ ಕಾಮಾಲೆ ಮಾಣ್ಗುಂ. ತ್ರಿಫಲೆ, ತ್ರಿಕಟುಕ, ಕಬ್ಬಿಣದ ಕಿಟ್ಟ, ಚಿತ್ರಮೂಲ, ಇವೆಲ್ಲ ಚೂರ್ಣವ ಮಾಡಿ ಹಳೆಯ ಮಜ್ಜಿಗೆಯಲ್ಲಿ ಅಟ್ಟು ಕುಡಿಯಲು ಕಾಮಾಲೆ ಮಾಣುವುದು. ಕಿರುಕುಸಾಲೆಬೇರ ಮೊಲೆಹಾಲಲ್ಲಿ ಅರೆದು ನಸ್ಯಂಗೈಯ್ಯಲು ಕಾಮಾಲೆ ಮಾಣುವುದು. ಲೋಳಿಸರ, ಅವುಡಲ, ಹೊನಗೊನ್ನೆ, ಇವ ಸಮಗೊಂಡು ಹಂಚಿನಲ್ಲಿ ಹಿಡಿಸಿ ಹಸುವಿನ ತುಪ್ಪದಲ್ಲಿ ಕಾಡಿಗೆ ಹಿಡಿದು ಕರ್ಪೂರವಂ ಬೆರಸಿ ಕಣ್ಣಿಗೆ ಹಚ್ಚಲು ಕಾಮಾಲೆ ಮಾಣ್ಗುಂ. ಕವುಳು, ರಾಜಾನ್ನದ ಅರಳು, ಸಕ್ಕರೆ, ತುಪ್ಪ, ಬೆಲ್ಲವತ್ತ, ಕಟುಕರೋಹಿಣಿ, ಶುಂಠಿ, ಹಿಪ್ಪಲಿ, ಇವ ಚೂರ್ಣವ ಮಾಡಿ ಬೇಲದ ಹಣ್ಣಿನ ರಸದಲ್ಲಿ ಅರೆದು ಗುಳಿಗೆಯ ಮಾಡೆ ಬಿಕ್ಕಳು ಪ್ರೋಕುಂ, ಕಾಮಾಲೆ ಮಾಣುವುದು.

ಬಾಣಂತಿಯ ರೋಗಕ್ಕೆ ಮದ್ದು :— ನುಗ್ಗೆಯ ಬೇರಿನ ರಸ, ಹೆಂದುಂಬೆಯ ರಸ, ಸಬಸಿಗೆ, ಸಾಸುವೆ, ಶುಂಠಿ, ಹರಳುಪ್ಪು, ನಾರುಬೇಳೆಯ ಮುಳ್ಳು, ಕೊಗ್ಗಿಯ ಬೇರು, ಇಷ್ಟನ್ನೂ ಎಕ್ಕೆಯ ಹಾಲಲ್ಲಿ ಅರೆದು ಪೂಸಲು ಸರ್ವಾಂಗವಾತಂ ಮಾಂಬುದು.

ಹಳೇಜ್ವರಗಳಿಗೆ ಔಷಧಿ :— ರಸ ೧, ಗಂಧಕ ೨, ಇಂಗಲೀಕ ೩, ಜೇಪಾಳ ೪, ಇವನ್ನು ಜೇಪಾಳದ ಕಷಾಯದಲ್ಲಿ ಎರಡು ಜಾವ ಮರ್ದಿಸಿ ಗುಂಜಾಪ್ರಮಾಣ ಗುಳಿಗೆಯಂ ಮಾಡಿ ನೆಳಲಲ್ಲಿ ಒಣಗಿಸಿ ಒಂದು ಗುಳಿಗೆಯನ್ನು ಒಂದು ತೂಕ ಸಕ್ಕರೆಯಲ್ಲಿ ಕೊಡಲು ಎರಡು ಮೂರು ಬಾರಿ ವಿರೇಕಮಕ್ಕುಂ.

ರಕ್ತಪ್ರಮೇಹಕ್ಕೆ :— ಪ್ರಮೇಹದ ಕಲ್ಲು ಒಡೆದು ಬೀಳುವುದಕ್ಕೆ-ಹುಣಸೆಯ ಬೇರು, ಕಿರುಕುಸಾಲೆಯ ಬೇರು, ಹಿಟ್ಟುಳಿಕನ ಬೇರು, ಈ ಮೂರ ಮೇಕೆಹಾಲಲ್ಲಿ ಅರೆದು ಲೋಳಿಸರದ ರಸದಲ್ಲಿ ಕೂಡಿಕೊಂಡು ಅದರೊಳಗೆ ಕರ್ಪೂರ, ಶಿಲಾಧಾತು, ೧ ತೂಕವ ಕೂಡಿಕೊಂಡು, ಸಕ್ಕರೆ ಬೆರಸಿ ಕೊಡಲು ಪ್ರಮೇಹದ ಕಲ್ಲು ಬೀಳುವುದು.

ಅಶ್ಮರಿಗೆ :— ಹುರುಳಿಹಿಟ್ಟನ್ನು ಬೆಳಗಾಗುವ ತನಕ ಕಾಸಿ ಬೆಳಗಾಗೆ ಬಸಿದುಕೊಂಡು ಪಡಿಯುಪ್ಪು ಕಟ್ಟು ತೆಗೆದುಕೊಂಡು ಅದರೊಳಗೆ ದಾಗುಡಿಸೊಪ್ಪ ತಂದು ಹುರಿದು ಕರುಕು

ಮಾಡಿ ಒಂದಿಷ್ಟು ಕರುಕನ್ನು ಹುಗುಳಿಕಟ್ಟೆನೊಳಗೆ ಕಲಸಿ ಕೊಟ್ಟರೆ ಅಶ್ಮರಿ ಮಾಣುವುದು. ಬೂರುಗದ ಮೂಡು ಹರಿದ ಬೇರಿನ ತಿಗಡು, ಈಚಲಎಲೆ, ಸುಳಿ, ಕಲ್‌ನಾರು, ಹರಿವಾಣ, ಇವ ಮೊಸರೊಳು ತುಳಿದು ಹಿಂಡಿಕೊಂಡು ಆಕಳ ಮೊಸರು, ಸಕ್ಕರೆಯಲ್ಲಿ ಹಾಕಿ ಕೊಳ್ಳಲು ಅಶ್ಮರಿ ಮಾಂಬುದು.

ಜ್ವರಕ್ಕೆ :—ಬೇಳಲಮರದ ಮೇಲಣ ತಿರುಳ ತೊಗಲ ತಂದು ಮೇಲಣ ಕಪ್ಪು ಹೋಗ ಲುಜ್ಜಿ ಆ ತಿರುಳ ಸಕ್ಕೆಯನ್ನು ಬಿಸಲಿಗೆಯೊಳಗೆ ಹಾಕಿ ಅದ್ದನ ನೀರ ಹೊಯ್ದು ಕಷಾ ಯವ ಕಾಸಿ ಕುಡಿಯಿಸಲು ಜ್ವರ ಬಿಟ್ಟುಹೋಗುವುದು. ಇದು ಮಹಾಬಳ್ಳಿಯ ಕಷಾಯ. ತಪ್ಪದು.

ಮೂಲವ್ಯಾಧಿಯ ಲಕ್ಷಣ :—ವಿಷಮಾಸನದಿಂದ, ಮಲನಿರೋಧದಿಂದಂ, ಮೂತ್ರ ನಿರೋಧದಿಂದಂ, ಮಂದಾಗ್ನಿಯಿಂದ, ಮೇಲೆ ಮೇಲೆ ಭೋಜನವ ಮಾಡುವುದರಿಂದ ಮೂಲ ವ್ಯಾಧಿಯಕ್ಕು. ಅದರ ಪ್ರಕಾರ-ಇರುದೆಸೆ, ಬಿಸಿಯ ರಕ್ತ ಅಪಾನಕ್ಕಿಳಿದು ಬಂಧವಾಗಿ ಸಂಗ್ರ ಹಿಸಿ ಅಂತರ್ವಳಿಯ, ಬಹಿರ್ವಳಿಯಂ ಎಂದು ಒಂದೆರಡು ಪ್ರಕಾರಮಕ್ಕು. ಅದು ರಕ್ತ ಒಡೆ ಯದೆ ಗುದದೊಳು ಗಂಟಾಗಿಯಿಕ್ಕುಂ. ಅಂತರ್ವಳಿಯು ಉಪವಾಸದಿಂದಂ, ಕಠಿನಾಸನದಿಂದಂ ಮಲ ಶುಷ್ಕವಾಗಿ ಪೊಕ್ಕು ರಕ್ತ ಒಡೆಯದೇ ಮೊಳೆಗಳು ತೋರ್ಕು. ಗೂದೆ ಹೊರಪಟ್ಟು ಬಹಿರ್ವಳಿಯುಮಕ್ಕು. ಅದರ ಲಕ್ಷಣವಂ ಪೇಳ್ವೆನು-ಅರೋಚಕ; ವಿಷಮವಾಗಿ ಚೆನ್ನಾಗಿ ಜೇನೆಗೈವದು; ಕರುಳು ಅರಚುವದು; ಪುಳಿದೇಗು ಅಡಿಗಡಿಗೆ ಬಕ್ಕುಂ; ಛರ್ದಿಯೆತ್ತು ವುದು; ಮಲ ಮಂಜಟಿಯಂತೆ ಪೋಗುವುದು; ವಿಷ್ಟಸ್ತಂಭ ಮಾಡುತಿರ್ಕುಂ; ಎದೆ ನೋಯು ವುದು; ಮೈಯ್ಯ ಬಣ್ಣ ಕೆಡುವುದು; ವಿಸೂಚಿಯಕ್ಕುಂ; ಕಾಲುಗಳು ನೋಯುವುವು; ಮೈತೀನಿ ತಿಂಬುದು; ಈ ಲಕ್ಷಣವಾದರೆ ಮೂಲವ್ಯಾಧಿಯೆಂದು ಅರಿಯುವುದು. ಹಿಕ್ಕೆ ಹಿಕ್ಕೆಯಾಗಿ ಮಲಪೋಪುದು; ವಿಷ್ಟಸ್ತಂಭ ಮಾಡುತಿರ್ಕುಂ; ಮೈ ವಿವರ್ಣಮಕ್ಕು; ಮಾಂಸ ದಂತೆ ಪೋಪುದು; ಕಲ್ಲ ಮೊಳೆ ತೋರ್ಕುಂ; ಸರ್ವಗುದಶೂಲೆಯುಕ್ಕುಂ. ಇದು ವಾತ ಮೂಲವ್ಯಾಧಿಯ ಲಕ್ಷಣ. ಉರಿವುದು; ಮೊಳೆ ಕೆಂಪಾಗುಂ; ಪಿರಿದಾಗಿ ಮಲ ಪೋಪುದು; ಇದು ಪೈತ್ಯಮೂಲವ್ಯಾಧಿಲಕ್ಷಣ. ಇನ್ನು ಶ್ಲೇಷ್ಮ ಮೂಲವ್ಯಾಧಿಯ ಲಕ್ಷಣ-ಮೈ ಬಿಳಿದಕ್ಕುಂ; ಮೊಳೆ ಬಿಳಿದಕ್ಕುಂ; ಗುದ ತೀನಿ ತಿಂಬುದು; ಆಮ ಬೆರಸಿ ಬೀಳುವುದು; ಅತಿಜಾಡ್ಯವಪ್ಪುದು; ಇದು ಶ್ಲೇಷ್ಮಮೂಲವ್ಯಾಧಿಯ ಲಕ್ಷಣ. ಒಂದೆರಡು ಮೂರು ಮೊಳೆಯಂತರ್ವಳಿಯ ಮಕ್ಕುಂ; ಹೊರಗೆ ಒಳಗೆ ಯಾವಾಗಲೂ ಜೇನೆ ಗೈವುದು; ಗೂದೆ ಪೊರವಡುತಿಪ್ಪುದು; ಇದು ಸನ್ನಿಪಾತಲಕ್ಷಣಂ. ಇನ್ನು ಚಿಕಿತ್ಸೆಯಂ ಪೇಳ್ವೆನು :—

ಅರಸಿನದ ಚೂರ್ಣವಂ ಕಳ್ಳಿಯ ಹಾಲಲ್ಲಿ ಕಲಸಿ ಗುದದಲ್ಲಿ ಪೂಸಲು ಅವುಮೂಲ ವ್ಯಾಧಿ ಕೆಡುಗುಂ. ಅರಸಿನ, ಗುಂಜಿ, ನರಮೂತ್ರದಲ್ಲಿ ಅರೆದು ದೇವದಾರುಕಳ್ಳಿಯ ರಸ ದಲ್ಲಿ ಅರೆದು ಪೂಸಲು ಮೂಲವ್ಯಾಧಿ ಹರ. ತುಪ್ಪ, ಸೈಂಧವ, ಕೆಂಬಿರ್ಕೆ, ಇವ ಅರೆದು ಪೂಸಲು ಮೂಲವ್ಯಾಧಿ ಹರ. ತ್ರಿಕಟುಕ, ಸೈಂಧವ, ಎಕ್ಕೆಯ ಹಾಲಲ್ಲಿ ಅರೆದು ಪೂಸಲು

ಮೂಲವ್ಯಾಧಿ ಹರ. ದಂತಿ, ನಾಗುಲಿಕ, ಸಂದಳಿಗೆ, ಚಿತ್ರಮೂಲ, ತ್ರಿಕಟುಕ, ಸೈಂಧವ, ಎಕ್ಕೆಯ ಹಾಲಲ್ಲಿ ಅರೆದು ಪೂಸಲು ಮೂಲವ್ಯಾಧಿ ಹರ. ಅರಸಿನ, ಗುಂಜಿ, ಹಿಪ್ಪಲಿ, ನರ ಮೂತ್ರದಲ್ಲಿ ಅರೆದು ಪೂಸಲು ಮೂಲವ್ಯಾಧಿ ಹರ. ದೇವದಾರಿಯ ರಸದಲ್ಲಾದರೂ ಅರೆದು ಪೂಸಲು ಮೂಲವ್ಯಾಧಿ ಹರ. ತುಪ್ಪ, ಸೈಂಧವ, ಕಾಡಹೀರೆ, ಲಕ್ಕಿ, ಈ ವಸ್ತ್ರಿಕ ಮಾಡುವುದು. ಕಟ್ಟಲಾದರೆ ಕಟ್ಟುವುದು. ಮೂಲವ್ಯಾಧಿ ಹರ. ತುಪ್ಪವ ತೊಡೆಯುವುದು. ಬೋಳ ಕರಗ ಬೆಚ್ಚಗೆ ಮಾಡಿ ಕಟ್ಟಲು ಮೂಲವ್ಯಾಧಿ ಹರ. ಅಳಲೇಕಾಯ ಮೆದ್ದು ಗೋಮೂತ್ರವ ಕುಡಿದರೆ ಅರುಚಿಹರ. ಹಿಪ್ಪಲಿಯನು ತುಪ್ಪದಲ್ಲಿ ಹುರಿದು ಚೂರ್ಣವ ಮಾಡಿ ದಂತಿಯಾಗಲೀ, ತಿಗಡೆಯಾಗಲೀ ಕಲಸಿ ಮೆಲ್ಲಲು, ಅರುಚಿಹರ. ಸೈಂಧವ, ಓಮ, ಚಿತ್ರಮೂಲ, ಶುಂಠಿ, ಇಂಗು, ಇವ ಅರೆದು ಕುಡಿಯಲು ಅರುಚಿ ನಾಶನವಕ್ಕು. ಇದರಿಂದ ಮೂಲವ್ಯಾಧಿ ಹರ. ಚಿತ್ರಮೂಲ, ಕೊಡಸಿಗ, ಇವ ಸಮಾನಂಗೊಂಡು ಸೈಂಧವ ಮಿಶ್ರವ ಮಾಡಿ ಕುಡಿಯಲು ಮೂಲವ್ಯಾಧಿ ಹರ. ಅತ್ತಿಯ ತಿಗಡು, ಕೊಡಸಿಗನ ತಿಗಡು, ಲೋಧ್ರ, ನೈದಿಲಗೆಡ್ಡೆ, ಎಳ್ಳು, ಇವ ಚೂರ್ಣವ ಮಾಡಿ ಎಣ್ಣೆಯಲ್ಲಿ ಅಟ್ಟು ಸೈಂಧವ ಮಿಶ್ರವ ಮಾಡಿ ತುಪ್ಪದಲ್ಲಿ ಕೊಳ್ಳಲು ಅತಿಸಾರ, ಸಂಗ್ರಹಣಿ, ಮೂಲವ್ಯಾಧಿ, ಮುಂತಾದ ವ್ಯಾಧಿ ಹರ. ಕಾರಸಿಯ ಗಡ್ಡೆಯ ಅರೆದು ಗುದದಲ್ಲಿ ಪೂಸಲು ಮೂಲವ್ಯಾಧಿ ಹರ. ಕಹಿಹೀರೆಯ ಬೀಜವ ಅರೆದು ನೊಳೆಗಾಗಲೀ ಗುದದಲ್ಲಾಗಲೀ ಪೂಸಲು ಮೂಲವ್ಯಾಧಿ ಹರ.

ಕಾಮಾಲೆಗೆ :—ಒಂದು ಹಿಡಿಕೆಯಲ್ಲಿ ಉಜ್ಜಿದ ಬೇವಿನ ಕಾಯಿ ತಂದು ಎಮ್ಮೆಯ ಮೊಸರ ನೀರಲ್ಲಿ ಅಟ್ಟು ಒಂದು ಸೆರೆ ಹಿಂಡಿಕೊಂಡು ಅದರೊಳಗೆ ಅಡಕೆಯಷ್ಟು ಬೆಲ್ಲವಾಗಲೀ ಸಕ್ಕರೆಯಾಗಲೀ ಕಲಸಿ ಖರವಿಷ್ಟೆಯ ರಸವನ್ನು ೧ ಮಡಿ ತುಂಬಿ ಹಿಂಡಿ ಅದರೊಳಗೆ ಕಲಸಿ ಕುಡಿಯಿಸುವುದು. ಹೀಗೆ ಮೂರು ದಿನ ಕುಡಿಸಲು ಕಾಮಾಲೆ ಪಾಂಡು ಮಾಣುವುದು. ಮಧುರಾಹಾರ.

ರಕ್ತಪಿತ್ತಕ್ಕೆ :—ಇಪ್ಪೆಯ ಹೂವು, ಯಷ್ಟಿಮಧುಕ, ಆಡುಸೋಗೆ, ಬೇವು, ಆಸಡಿ, ಇವ ಸಮಾನಂಗೊಂಡು ತುಪ್ಪದಲ್ಲಟ್ಟು ಮೆಲ್ಲಲು ರಕ್ತಪಿತ್ತ, ಪಾಂಡುರೋಗ, ಅಶ್ಮರಿ, ಇವು ಎಲ್ಲಕ್ಕೂ ಲೇಸು.

ಮೂಗಿನ ರಕ್ತಕ್ಕೆ :—ದಾಳಿಂಬದ ಹೊಸ ಹೂ, ಗರಿಕೆಯ ಬೇರು, ಯಷ್ಟಿಮಧುಕ, ಮದ್ದಿನ ಬೀಜ, ಸಕ್ಕರೆಯನಿಕ್ಕಿ ಅಕ್ಕಿಗಚ್ಚಿನಲ್ಲಿ ಕೂಡಿ ಮೂಗಿನಲ್ಲಿ ನಸ್ಯವ ಮಾಡಿದರೆ ಮೂಗಿನ ರಕ್ತ ಮಾಣುವುದು. ........................ ಕಿರುಕುಸಾಲೆಯ ಬೇರು, ಯಷ್ಟಿಮಧುಕ, ಮೇಕೆಯ ಹಸಿಹಾಲಲ್ಲಿ ಕೂಡಿ ನಸ್ಯವ ಮಾಡಿದರೆ ಮೂಗಿನ ರಕ್ತ ಮಾಣುವುದು. ಹಚ್ಚನ ಎಸರು, ಅಳಲೇಕಾಯಿರಸ, ಬೇವಿನಎಣ್ಣೆ, ಸಮಾನವಾಗಿ ಅಟ್ಟು ಮರ್ದನವ ಮಾಡಲು ಎನಿತಪ್ಪ ಮೂಗಿನ ರಕ್ತ ಮಾಣುವುದು.

ಯೋನಿರಕ್ತಕ್ಕೆ :—ಉತ್ತರಣೆಯ ಬೇರು, ಹಿಪ್ಪಲಿ, ಸಕ್ಕರೆ, ಅಕ್ಕಿಗಚ್ಚಿನಲ್ಲಿ ಅರೆದು ಕುಡಿಯಲು ಯೋನಿರಕ್ತ ಮಾಣುವುದು.

ರಕ್ತಪ್ರಕೋಪಕ್ಕೆ :—ಪಥ್ಯ ರಾಜಾನ್ನ. ಹೆಸರು, ತೊಗರಿ ಇಷ್ಟು ಪಥ್ಯ.

ಹೆನ್ನೆತ್ತರಿಗೆ :—ಮಜ್ಜಿಗೆಯನ್ನು ಒಂದು ಮಡಿಕೆಯ ಒಳಗೆ ಹೊಯ್ದು, ಆ ಮಡಿಕೆಯ ಕಂಠಕ್ಕೆ ಹಂದರ ಕಟ್ಟಿಗೆಯ ಕಟ್ಟನಿಕ್ಕಿ ಅದರ ಮೇಲೆ ಅವರೆಯ ಚಿಗುರು ಒಂದು ಹಿಡಿಯನಿರಿಸಿ, ತೊಟ್ಟಿಯ ಕೊನರು, ಉಗನಿಕೊನರು, ಅದರ ಮೇಲೆ ಇಕ್ಕಿ ಇಡ್ಡಲಿಯ ಹಾಗೆ ಆವಿಸಿ ಮಜ್ಜಿಗೆ ದಿಂಡನು ಅನುಪಾನ ಕೂಡ ಅರೆದು ತೊಂಡೆಕಾಯಷ್ಟು ಗುಳಿಗೆಯ ಮಾಡಿ ಒಳ್ಳೆಯ ಎಣ್ಣೆಯೊಳಗೆ ಹಾಕಿ ಇರಿಸಿಕೊಂಡು ಉದಯದಲ್ಲಿ ಐದು, ಬಯಿಗೆಯಲ್ಲಿ ನಾಲ್ಕು ನುಂಗುವುದು. ಪಥ್ಯ .............. ಮುರದಾರಶೃಂಗಿ ೩ ತೂಕ, ಪಾಷಾಣ ೧೨ ತೂಕ, ನವಸಾರ ೫ ತೂಕ, ಬಿಳುಗಾರ ೨ ತೂಕ, ಪಾದರಸ ೩ ತೂಕ, ಇವನ್ನು ನಿಂಬೇಹುಳಿಯಲ್ಲಿ ಅರೆದು ಗಟ್ಟಿಮಾಡಿ ಮಡಕೆಯ ನಡುವೆ ಇರಿಸಿ ತಾಮ್ರ ೨೪ ತೂಕ ಬಟ್ಟಲ ಮಾಡಿ ಬೆಳ್ಳಿ ನಾಲ್ಕು ತೂಕ ಬಟ್ಟಲ ಮಾಡಿ ............ಬಿಲವಂ ಮಾಡಿ ಮುಚ್ಚಿ ಸಿರುಮಣ್ಣುಗೊಂಡು ಆ ಮೇಲೆ ತಾಮ್ರದ ಬಟ್ಟಲ ಮೇಲೆ ಮಳಲ ಹುಯಿದು ಮೂರು ಜಾವ ಅಟ್ಟು ಬೆಳ್ಳಿಯ ಬಟ್ಟಲ ಕೆಳಕ್ಕೆ ತೆಗೆದು ತಾಮ್ರದ ಬಟ್ಟಲನ್ನೂ ಆ ಕಲಶವನ್ನೂ ಕೊಡೆ ಮುಡು ಶೊ...... ...... ಕರಗುವುದು. ಅದು ಕಳಕುದಾಳಿಸಿದ ತಾಮ್ರವನ್ನು ವರಾಹ ತೂಕಕ್ಕೆ ಹಣ ತೂಕ ಬೆಳ್ಳಿ, ಕಳಂಕು, ಹಣ ತೂಕ ಪುಳ್ಳಂಪುಳಪೆ, ಆದಿತ್ಯಭಕ್ತ, ............ ಬಿಳಿಯ ಕೊಮ್ಮೆಯ ರಸದಲ್ಲಿ ಎರೆಯುವುದು. ಹಣ ೨೧ಕ್ಕೆ ತಾಮ್ರವನ್ನು ಹೆಣ್ಣುತುಂಬೆಯ ರಸದಲ್ಲಿ ಏಳು ಬಾರಿ ಕಾಸಿ ಕಾಸಿ ಅದ್ದಿದಾಗ ತಾಮ್ರವನ್ನು ಎಕ್ಕದ ಹಾಲಲ್ಲಿ ೧೦೦ ಬಾರಿ ತಾಳಿಸಿದಲ್ಲಿ ಕರಗುವುದು.

## D 1372 & R 1373

ಚಾತುರ್ಥಿಕಜ್ವರಕ್ಕೆ :—ಪಾಷಾಣ ಹಣ ೧ ತೂಕ, ಕೋಷ್ಠ ಹಣ ೧ ತೂಕ, ಪಚ್ಚೆ ಕರ್ಪೂರ ಹಣ ೨ ತೂಕ, ಇವಿಷ್ಟನ್ನೂ ಕರಿಮದಕಣಿಕೆಯ ರಸದಲ್ಲಿ ಮರ್ದಿಸಿ ಹಾಗ ತೂಕ ಗುಳಿಗೆಯಂ ಮಾಡಿ ಮದಕಣಿಕೆಯ ರಸದಲ್ಲಿ ಕೊಡುವುದು. ಪಥ್ಯ ಹಾಲೋಗರ, ತುಪ್ಪವೋಗರ.

ಕಣ್ಣುರೋಗಕ್ಕೆ :—.........ಯನ್ನು ಬೆಕ್ಕಿನ ವಿಷ್ಟೆಯಲ್ಲಿ, ಪಾರಿವಾಣದ ವಿಷ್ಟೆಯಲ್ಲಿ ಮರ್ದಿಸಿ ಹತ್ತು ಮಡಿ ಟಂಕಣವ ಕೂಡಿ ಒಂದು ಕೋನೆಯೊಳಗಿಕ್ಕಿ ಮೃದುಪುಟವಿಕ್ಕಿ ನೊಸರ ಕಲಸಿ ಒಂದು ಮೃದುಪುಟವಿಕ್ಕಿ ಜೇನುತುಪ್ಪವ ಕಲಸಿ ಒಂದು ಮೃದುಪುಟವಿಕ್ಕಿ ಕಲಸೆ ಶುದ್ಧವಹುದು. ಒಂದು ಬಿಸಲಿಗೆಯಲ್ಲಿ ಒಂದು ಪಡಿ ಹಾಲನ್ನು ಹಿಂಡುವುದು. ಗಂಧಕ ಚೂರ್ಣವನ್ನು ಅರುವೆಯ ಮೇಲೆ ಹರಡಿ ಆ ಮೃಣ್ಮಯಕ್ಕೆ ಒಂದು ಬಿಸಲಿಗೆಯ ಮುಚ್ಚಿಗೆಯಾಗಲೀ ಹಿಂಡಿಯಾಗಲೀ ಅರೆದು ಮಡಕೆಯ ಅಂಚು ಬಳಸಿ ಮೆತ್ತಿ ಗೇಣುದ್ದ ಗುಳಿಯಂ ತೋಡಿ ಕೆಳಗಣ ಮಡಕೆಯ ತಳದಲ್ಲಿ ಇರಿಸಿ ಅದರ ಅಂಚು ಪರ್ಯಂತರ ಮಣ್ಣನ್ನು ತುಂಬಿ ಹತ್ತು ಬೆರಣಿಯಲ್ಲಿ ಮೇಲಣ ಮಡಕೆಯನ್ನು ಪುಟವಿಡೆ ಗಂಧಕರೇಣು ಹಾಲಲ್ಲಿ ಬೀಳುವುದು. ಅದು ಗಂಧಕ ಶುದ್ಧಿ. ಆ ಶುದ್ಧ ಗಂಧಕ, ಶುದ್ಧ ಕಳಕುಗಳನ್ನು ಚೆನ್ನಾಗಿ ಪುಡಿ ಮಾಡಿ ಅದರ ಹತ್ತು ಮಡಿ ಬಿಳುಗಾರದ ಪುಡಿ ನಿಂಬೇಹಣ್ಣಿನ ರಸದಲ್ಲಿ ತೊಳೆದು ಮರಳಿ ಅಂಬಿಲದಲ್ಲಿ ತೊಳೆದು ಅರುವೆಯಲ್ಲಿ ಪೊಟ್ಟಣವ ಕಟ್ಟಿ ಒಂದು ದಿನ ಅಟ್ಟು ಮತ್ತಂ ಕುಂಬಳಕಾಯ ರಸದಲ್ಲಿ ಒಂದು ದಿನ ಅಟ್ಟು ಅನಂತರದಲ್ಲಿ ನಾಭಿಯನ್ನು ಸಣ್ಣಗೆ ಕತ್ತರಿಸಿ ಗೋಮೂತ್ರದಲ್ಲಿ ಡೋಲಾಯಂತ್ರದಲ್ಲಿ

ಒಂದು ದಿನವಿರಿಸಿ ಕಲಸಿ ತೊಳೆದು ಬಿಸಿಲಿನಲ್ಲಿ ಒಣಗಿಸಿ ಇರಿಸಲು ನಾಭಿ ಶುದ್ಧವಹುದು. ಪಾಷಾಣವನ್ನು ಗಜಮೂತ್ರದಲ್ಲಿ ತೊಳೆದು ಡೋಲಾಯಂತ್ರದಲ್ಲಿ ೩ ದಿನ ದೇವಾಗ್ನಿಯಲ್ಲಿ ಅಡಲು ............... ಲೋಳಿಸರದ ರಸದಲ್ಲಿ ಭಾವನೆ ಮಾಡಿ ಪಾಷಾಣ ...... ...ಶುದ್ಧ ಸಿರುಮಣ್ಣುಗೊಂಡು ಕುಕ್ಕುಟಪುಟವನಿಕ್ಕಲು ಶುದ್ಧವಹುದು. ................ ಆರು ಪಡಿ ಕಿರುಕುಸಾಲೆಯ ರಸದಲ್ಲಿ ಒಂದು ಜಾವ ಡೋಲಾಯಂತ್ರದಲ್ಲಿ ಇರಿಸಿ ಶುದ್ಧ ಬಿಳುಗಾರದ ಹರಳನ್ನು ಗೋಕ್ಷೀರದಲ್ಲಿ ಒಂದು ಜಾವ ಪರ್ಯಂತರ ನೆನೆಯಿಕ್ಕಿ ಶುದ್ಧ ಜಾಪಾಳವನ್ನು ನೀರಲ್ಲಿ ರಾತ್ರಿಯಲ್ಲಿ ನೆನೆಯಿಕ್ಕಿ ಬೆಳಗ್ಗೆ .................. ವಿಷಾಂಕುರವ ತೆಗೆದು ರಾತ್ರಿಯಲ್ಲಿ ಗೋವಿನ ಸಗಣಿಯಲ್ಲಿ .................. ಗೋಕ್ಷೀರದಲ್ಲಿ ಒಂದು ಜಾವ ಅಟ್ಟು ಮತ್ತೆ ಲೋಳಿಸರದ ಮಟ್ಟೆ ಮೆತ್ತಿ ಕೆಂಡವ ತಂದು ಮೇಲಿಕ್ಕಿ ಲೋಳಿಸರದ ಮಟ್ಟೆಯನ್ನು ತೆಗೆದು ಸಂಗಡ ತಳಮಧ್ಯದ ಜಾಪಾಳವ ತೆಗೆದು ಹಿಪ್ಪಲಿ, ಮೆಣಸು, ತಾರೇಕಾಯಿ, ಶಂಖ, ನಾಭಿ, ಇವನ್ನು ಕೊಮ್ಮೆಯ ರಸದಲ್ಲಿ ಮರ್ದಿಸಿ ಮತ್ತೆ ಆಡಿನ ಮೂತ್ರದಲ್ಲಿ ಮರ್ದಿಸಿ .......... ಜೇನುತುಪ್ಪ, ಕಾಮಾಲೆಗೆ ಹಸುವಿನ ತುಪ್ಪ, ಕಜ್ಜಿಗೆ ...................... ಕಣ್ಣುಕುಟಿಗೆ ಮೊಲೆಹಾಲು, ಪಟಲಕಣ್ಣಿಗೆ ನೆಲ್ಲಿಕಾಯಿಯ ರಸದಲ್ಲಿ ಕೊಡುವುದು. ಅಮಳಸರ, ಗಂಧಕ, ರಸ, ಇವು ಸಮಾನ ತೂಕ ಮರ್ದಿಸಿ ಉದ್ದಿನ ಪ್ರಮಾಣ ಗುಳಿಗೆಯನ್ನು ಮಾಡಿಕೊಂಡು ಗುಳಿಗೆಗಳನ್ನು ಜೀರಿಗೆ, ಸಕ್ಕರೆಯಲ್ಲಿ ಕೊಡುವುದು. ಪಥ್ಯ ಹಾಲೋಗರ.

ವಿರೇಕಕ್ಕೆ :—ನುಗ್ಗೆಯ ಸೊಪ್ಪು, ಹರುವೆಸೊಪ್ಪು, ತೊಗರೀಬೇಳೆ, ಸೋರೆಯ ಸೊಪ್ಪು, ಚೀಕಟಿಕೆ, ತ್ರಿಫಲೆ, ಇವು ಪ್ರತ್ಯೇಕವು ಒಂದೊಂದು ತೂಕ, ಬಿಳುಗಾರ ಒಂದು ತೂಕ, ಇಂಗಲೀಕ ಒಂದು ತೂಕ, ಇವೆಲ್ಲವೂ ಒಂದು ಭಾಗ, ಶುದ್ಧ ಜಾಪಾಳ ಒಂದು ಭಾಗ, ಇವೆಲ್ಲವನ್ನು ತಿಗಡೆಯ ಕಷಾಯದಲ್ಲಿ ಅರೆದು ಕಡಲೆಯ ಗಾತ್ರ ಗುಳಿಗೆಗಳಂ ಮಾಡಿ ಒಂದು ಗುಳಿಗೆಯನ್ನು ತುಪ್ಪದಲ್ಲಾಗಲೀ, ಬೆಲ್ಲದಲ್ಲಾಗಲೀ ಕೊಡುವುದು. ಆ ಮೇಲೆ ಬಿಸಿನೀರನ್ನು ಕುಡಿಯುವುದು. ವಿರೇಕಮಕ್ಕು. ಪಥ್ಯ ಮಜ್ಜಿಗೆ ಓಗರ.

ವಾಂತಿಗೆ :—ರಸ ೧ ತೂಕ, ಅಮಳಸರ ಗಂಧಕ ಒಂದು ತೂಕ, ಮಣಿಸಿಲೆ ೧ ತೂಕ, ಇವನ್ನು ಪಾರಿವಾಣದ ಎಲೆಯಲ್ಲಿ ಮರ್ದಿಸಿ ಉದ್ದಿನ ಪ್ರಮಾಣ ಗುಳಿಗೆಯ ಮಾಡಿ ಮೆಣಸಿನ ಪುಡಿಯೊಳಗೆ ಆ ಗುಳಿಗೆಯ ಪುಡಿ ಮಾಡಿ ತೆಗೆದುಕೊಳ್ಳುವುದು. ಆದರ ಮೇಲೆ ಬಿಸಿನೀರನ್ನು ಸೇವಿಸಿದರೆ ವಾಂತಿಯಕ್ಕುಂ. ನಿಲ್ಲಬೇಕಾದರೆ ನೆಲ್ಲಹರಳನ್ನು ಮೆಲ್ಲುವುದು. ಕಲ್ಲುಪ್ಪನ್ನು ಒಂದು ಬಿಸಲಿಗೆಯಲ್ಲಿ ತುಂಬಿ ಅದಕ್ಕೆ ಎಕ್ಕದ ಹಾಲೆರೆದು ಮೂರು ಭಾವನೆ ಕೊಟ್ಟು ಇರಿಸಿಕೊಂಡು ಅದನ್ನು ಚೂರ್ಣ ಮಾಡಿ ಎರಡು ತೂಕವನ್ನು ಹಸುವಿನ ಹಸಿಹಾಲಲ್ಲಿ ಕೊಳ್ಳುವುದು.

ಜ್ವರಕ್ಕೆ ದಶಕೂಟದ ಕಷಾಯ :—ನೆಲಗುಳ್ಳ, ಹೆಗ್ಗುಳ್ಳ, ಚಿತ್ರಮೂಲ, ನೆಗ್ಗಿಲು, ನರುವಲು, ಕುರುಚಿ, ಕಳ್ಳಂಗಡಲೆ, ಬೆಲ್ಲವತ್ತ, ವಿಷ್ಣುಕ್ರಾಂತಿ, ಅಲಸಂಧಿ, ಇವನ್ನು ಕಷಾಯ ಕಾಸಿ ಕೊಡುವುದು.

ಪಂಚಸಾದಕ್ಕೆ :— ಹಾಲು, ಜೇನುತುಪ್ಪ, ತುಪ್ಪ, ಹಿಪ್ಪಲಿ, ಸಕ್ಕರೆ, ಇಷ್ಟನ್ನೂ ಕೂಡಿ ಇಟ್ಟು ಲೇಹ್ಯಂ ಮಾಡಿ ಕೊಡುವುದು. ಮಂಗರವಳ್ಳಿಯನ್ನು ತಂದು ಚೆನ್ನಾಗಿ ಕತ್ತರಿಸಿ, ಆಡಿಸಿ ಪ್ರತಿಪಾಕವಿಕ್ಕಿ ಅದಕ್ಕೆ ಇಂಗು, ಜೀರಿಗೆ, ತುಪ್ಪ ಇಷ್ಟನ್ನೂ ಬಿಟ್ಟು ಆಡಿಸಿ ಅದನ್ನು ಸೆಂಡಿಗೆ ಮಾಡಿ ಇಕ್ಕಿಕೊಂಡು ಇರಬಹುದು.

ಪೀನಸವ್ಯಾಧಿಗೆ :— ಕರಿಯ ಜೀರಿಗೆ, ಬಿಳಿಯ ಜೀರಿಗೆ, ಸಜ್ಜರಸ, ಈ ಮೂರನ್ನೂ ಪುಡಿ ಮಾಡಿ ಒಳ್ಳೆಣ್ಣೆ, ಕಹಿ ಎಣ್ಣೆ, ತುಪ್ಪ ಇವುಗಳಲ್ಲಿ ಅಟ್ಟು ನಸ್ಯವಂ ಮಾಡಿ ಕೊಡಲು ಪೀನಸವ್ಯಾಧಿ ಮಾಣುವುದು.

ಗಂಡಮಾಲೆ, ಶಿರಮಾಲೆಗೆ ಔಷಧಿ :—ಪಚ್ಚೆತುತ್ತ, ಜಾಪಾಳ, ಇಂಗು, ಈ ಮೂರನ್ನು ಸಮಾನವಾಗಿ ಕೊಂಡು ಎಕ್ಕೆಯ ಹಾಲಲ್ಲಿ ಮರ್ದಿಸಿ, ಕಳ್ಳಿಹಾಲನ್ನು ಪಾವಡೆಗೆ ಆ ಎರಡು ಎಕ್ಕೆಯೆಲೆಯ ಹಾಕಿ ಕಟ್ಟುವುದು. ಆ ಕಟ್ಟನ್ನು ಏಳು ದಿನ ಪರ್ಯಂತರ ಬಿಚ್ಚಬಾರದು., ಗಂಟು ಕರಗದಿದ್ದರೆ ಸೂಡು ಹಾಕುವುದು. ಹುರುದಕ್ಕಿಗೂಡನ್ನು ಇಡಿದು ವಸ್ತ್ರಗಾಳಿತವನ್ನು ಮಾಡಿಕೊಂಡು ತುಪ್ಪದಲ್ಲಿ ಕಾಸಿ ಹಾಕುವುದು. ಬತ್ತಿಯನ್ನು ಸಪ್ಪೇತುಪ್ಪದಲ್ಲಿ ಅದ್ದಿ ಹಾಕುವುದು. ಆ ಬತ್ತಿಯ ಮೇಲೆ ಇಷ್ಟು ಹುಡಿಯನ್ನು ತಳಿಯುವುದು.

ಇನ್ನೊಂದು ಕ್ರಮ :—ಶಿರಮಾಲೆಗೆ, ಬೆನ್ನುಹುಣ್ಣಿಗೆ, ಲೊಕ್ಕಿಯ ಹುಣ್ಣಿಗೆ, ದಂತ ಬೇನೆಗೆ—ಪಚ್ಚೆತುತ್ತ, ಜಾಪಾಳ, ಹಿರಿಬಜೆ, ನಿರ್ವಿಷವತ್ಸನಾಭಿ, ಹೊಟ್ಟೆಬೇನೆಗೆ ಹಸುರು ಬನ್ನಿಸೊಪ್ಪನ್ನು ತಂದು ಅರೆದು ಮೂರು ಗುಳಿಗೆಯಂ ಮಾಡಿ ಹಸುವಿನ ಹಾಲಲ್ಲಿ ಗಟ್ಟಿ ಮೊಸರಲ್ಲಿ ಕಳ ಮೇಲಕ್ಕೆ ಇಕ್ಕಿ ನುಂಗುವುದು. ಪಥ್ಯ ಸಿಹಿಮೊಸರು, ಓಗರ. ಪುಣ ಗನ್ನು ಹಸುವಿನ ಬೆಣ್ಣೆಯಲ್ಲಿ ನುಂಗುವದು. ನಿಂಬೆಯ ಸೊಪ್ಪು, ಹರಳೆಯ ಸೊಪ್ಪು, ಗೊಳಗೊಂಡೆ ಸೊಪ್ಪು, ಸೊಗದೆ, ಕನಿಸೊಪ್ಪು, ಲೊಕ್ಕಿಯ ಸೊಪ್ಪು, ವಿಷಹರಿಯ ಸೊಪ್ಪು, ಬೋನಗಾರೆ, ಇವೆಲ್ಲವನ್ನೂ ಅರೆದು ರಸಗಳನ್ನು ಕುಡಿಸುವದು. ಪಥ್ಯ ಹಾಲೋಗರ. ಈ ಸೊಪ್ಪಿನ ಹಿಂಡಿಯನ್ನು ಹೊರಗಡೆಗೆ ಹಾಕಿ ಕಟ್ಟುವುದು.

ಹೊಟ್ಟೆಬೇನೆಗೆ :— ಕೊತ್ತಂಬರಿ ಬೀಜದ ಹಿಟ್ಟು, ತುಳಸಿ, ಇವುಗಳನ್ನು ಬೆಣ್ಣೆಯಲ್ಲಿ ಹಾಕಿ ಮೆಲ್ಲುವುದು. ಪಥ್ಯ ಮೆಣಸಿನ ಉದಕ, ಓಗರ.

ಹೊಟ್ಟೆಬೇನೆಗೆ :— ಮತ್ತಿಯಕ್ಕಿಗೂಡು, ನೆರಳಕ್ಕಿಗೂಡು, ಮೆಂತೆ, ಇವು ಮೂರು ಸಮಾನಂಗೊಂಡು ಅರೆದು ಹಸುವಿನ ಹಾಲಲ್ಲಿ ಅಟ್ಟು ಮೊಸರೊಳಗೆ ಸಜ್ಜರಸ ಪುಡಿಯನ್ನು ಹಾಕಿಕೊಂಡು ನುಂಗುವುದು, ಇದಕ್ಕೆ ಪಥ್ಯ ಮೊಸರು ಓಗರ.

ಕುಷ್ಠಕ್ಕೆ :—ಅಬರೆಯಂ ಅವುಡಲದ ಎಣ್ಣೆಯಲ್ಲಿ ಒಂದು ದಿನ ನೆನೆಯಿಸಿ ದೀವಿಗೆ ಯನ್ನು ಹೊತ್ತಿಸಿ ತಣುಗೆಯಲ್ಲಿ ಹಿಡಿಯಲು ತೈಲವು ಬರುವದು. ಆ ತೈಲದ............ ರಸವನ್ನಿಕ್ಕಿ ಮರ್ದಿಸುವುದು. ಈ ೧ ಹಣ ತೂಕವನ್ನು ಗುಂಜಿಯ ಚೂರ್ಣವಂ ೩ ವರಹ ತೂಕವನಿಕ್ಕಿ ಬಿಸಿನೀರಿಂ ಕೊಡಲು ೩ ತಿಂಗಳಿಗೆ ೧೮ ತೆರದ ಕುಷ್ಠ ಹರ. ರಸ, ಗಂಧಕ, ಅಭ್ರಕ

ಲೋಹ, ಇವಂ ಸಮಾನಂಗೊಂಡು ನಿರೋಧಭಸ್ಮವಂ ಮಾಡಿ, ಲೋಳಿಸರದ ರಸದಲ್ಲಿ ೪ ಜಾವ ಮರ್ದಿಸಿ ಅವುಡಲದ ಎಲೆಯಲ್ಲಿ ಕಟ್ಟಿ ನೆಲದೊಳಗೆ ೧ ದಿನ ಹೂಳಿ ಇಂಸಿ ತೆಗೆದು ಮರ್ದಿಸಿ ಎರಡು ವರಹ ತೂಕವನ್ನು ತ್ರಿಕಟುಕ, ಜೇನುತುಪ್ಪದಲ್ಲಿ ಕೊಡಲು ಇಪ್ಪತ್ತು ಪ್ರಕಾರ ಪ್ರಮೇಹ ಹರ. ತ್ರಿಕಟುಕದಲ್ಲಿ ವಾತಪಿತ್ತಜ್ವರ ಹರ. ಮತ್ತಾವ ರೋಗಂಗಳಿಗೆ ಅದರೊಳಗೆ ಹೇಳಿದ ಗ್ರಂಥಅನುಪಾನಂಗಳುಂಟು. ಆದರಲ್ಲಿ ಕೊಡಲು ಆ ರೋಗ ಹರ. ಪಾಂಡು, ಕಾಮಾಲೆ, ಐದು ಗುಲ್ಮ, ಗ್ರಹಣೀಶೂಲೆ, ವಾತ ಹರ. ಚಿತ್ರಮೂಲ............ ಕಹಿಪಡವಲ, ತ್ರಿಫಲೆ, ಇವ ಮರ್ದಿಸಿ ಬಾಗುಂಜಿಯ ಬೀಜವ ಪುಡಿ ಮಾಡಿ ಅಷ್ಟಶೇಷ ಕಷಾಯದಲ್ಲಿ ಎರಡು ತಿಂಗಳು ಕೊಡಲು ಕುಷ್ಠ ಹರ. ಪಥ್ಯ ಮೊಸರು ಓಗರ, ಕಣಕ, ಹಾಲು, ತುಪ್ಪ, ಸಕ್ಕರೆ ಪಥ್ಯ.

ಸಮಸ್ತಜ್ವರಗಳಿಗೆ :—ಹಿಪ್ಪಲಿ, ಹಿಡಿಹಿಡಿಕೆ, ನುಗ್ಗೆ, ಬಸಲೆ, ತೊಂಡೆ, ಹಾಗಲ, ಕೊಡಸಿಗೆ, ಮಿಂಟೆ, ಕಕ್ಕೆ, ಚಿಟ್ಟೆಅವುಡಲ, ಹಿಕ್ಕಾಡಲ್ಲಿಕೆ, ಇವುಗಳ ಬೇರುಗಳು ಪ್ರತ್ಯೇಕ ೫ ತೂಕದ ಲೆಖ್ಖದಲ್ಲಿ ಕೊಂಬುದು. ಬಸಲೆಸೊಪ್ಪು, ತೊಂಡೆಸೊಪ್ಪು, ಕುಂಟಳದ ಸೊಪ್ಪು, ಚಿತ್ರಮೂಲದ ಸೊಪ್ಪು, ಕಿರುಗಡಸಿಗೆ ಸೊಪ್ಪು, ಬಿಳೀಸೊಂಡೆಯ ಸೊಪ್ಪು, ಲೊಕ್ಕಿಯ ಸೊಪ್ಪು, ಅಳಲೇಕಾಯಿ, ತಾರೇಕಾಯಿ, ಮಂಗುರವಳ್ಳಿ, ಅಗುಳುಶುಂಠಿ, ಇವು ಪ್ರತ್ಯೇಕ ಗ ೧ ತೂಕ, ನಿಯತಸಮೂಲ ೧ ತೂಕ, ತ್ರಿಕಟುಕ ೧೫ ತೂಕ, ಕಲ್ಲುಪ್ಪು ೧೦ ತೂಕ, ಸೈಂಧವ ೧೦ ತೂಕ, ಬೋಳಕರಗದ ಸಮೂಲ ಗ ೧೧ ವರಹ ತೂಕ, ಉತ್ತರಣಿ ಸಮೂಲ ಗ ೧೧ ತೂಕ, ಗಡಿಗೆಗಳಲ್ಲಿ ೮ ಗಡಿಗೆ ನೀರು ಹೊಯ್ದು ಒಂದು ಗಡಿಗೆಯ ನೀರ ಕಾಸಿ ಆ ಕಷಾಯದಲ್ಲಿ ಗಂಜಿಯ ಕಾಸಿ ಕೊಂಬುದು. ಕೊಳವಳಿಕೆಸೊಪ್ಪಿನ ಮೇಲೋಗರ. ಸಕಲ ಜ್ವರಂಗಳು ಮಾಣುವುವು. ಇದು ಗಂಜಿ.

ಆಮ್ಲಪಿತ್ತಕ್ಕೆ :—ಅಜಮೋದ, ಓಮ, ಹಿಪ್ಪಲೀಮೂಲ, ಲವಂಗಚೆಕ್ಕೆ, ಏಲಕ್ಕಿ ಪತ್ರ, ತಾಳಕ, ನಾಗಕೇಸರ, ಶುಂಠಿ, ಮೆಣಸು, ಚಿತ್ರಮೂಲ, ಲಾಮಂಚ, ಕೊತ್ತಂಬರಿ, ಜೀರಿಗೆ, ಸೌವರ್ಚಲವಣ, ಅಮ್ಲವೇತಸ, ಧಾತಕೀಕುಸುಮ, ಹಿಪ್ಪಲಿ, ಬೆಲ್ಲವತ್ತದ ಹಣ್ಣು, ದಾಳಿಂಬದ ಸಾರ, ಇವು ಪ್ರತ್ಯೇಕ ಭಾಗ ೩, ಸಕ್ಕರೆ ೬ ಭಾಗ, ಬೇಲದ ರಸ ಚೂರ್ಣ ೯೮ ಭಾಗ ಇವನ್ನು ಕೂಡಿಸಿ ಪ್ರತಿದಿನದಲ್ಲೂ ನಾಲ್ಕು ತೂಕವ ಕೊಡಲು ಆಮ್ಲಪಿತ್ತ ಹರ.

ಕಣ್ಣುರೋಗಕ್ಕೆ :—ನೀಲತುತ್ತ, ಸಮುದ್ರಫೇನ, ಶಂಖ, ಮೆಣಸು, ಶುಂಠಿ, ಹಿಪ್ಪಲಿ, ಅರಸಿನ, ನೆಲ್ಲಿಯಚಟ್ಟು, ಬೇವಿನ ಬೀಜ, ಹುಲಿಗಿಲಬೀಜ, ಬೆಲ್ಲದ ಬೀಜ, ಲೋಧ್ರ, ಕರ್ಪೂರ, ಶಿಲಾಧಾತು, ರಸಾಂಜನ, ನೀಲಾಂಜನ, ಸೈಂಧವ, ಕರ್ಪೂರ ಇವಂ ಸಮಾನಂಗೊಂಡು ಚೂರ್ಣಂ ಮಾಡಿ ಲಕ್ಷ್ಮೀರಸದಲ್ಲಿ ಭಾವನೆ, ಗರುಗದ ರಸದಲ್ಲಿ ಭಾವನೆ, ಆಡಿನ ಮೂತ್ರದಲ್ಲೂ ಭಾವನೆ, ಮೂರು ಜಾವ ಮರ್ದಿಸಿ ಗಣಿಜಿಲೆಯ ರಸದಲ್ಲಿ ಭಾವನೆ, ಗಾಂಧಾರಿಯ ರಸದಲ್ಲಿ ಭಾವನೆ, ಆಡಿನ ಮೂತ್ರದಲ್ಲೂ ಭಾವನೆ, ಮೂರು ಜಾವ ಮರ್ದಿಸಿ ತಾಮ್ರದ ಬಟ್ಟಲ ಮೇಲೆ ಇಟ್ಟು ಗೇರುಹರಳ ಹೊಗೆಯಂ ಕೊಟ್ಟು ಕರ್ಪೂರವನಿಕ್ಕಿ ಗುಳಿಗೆಯಂ

ಮಾಡಿ ನಿಂಬೇಹುಳಿಯಲ್ಲಾಗಲೀ, ಜೇನುತುಪ್ಪದಲ್ಲಾಗಲೀ ನೀರಲ್ಲಾಗಲೀ ತೇದು ಕಣ್ಣಿಗಿಕ್ಕಲು ಸರ್ವಕಣ್ಣುರೋಗಕ್ಕೂ ಗ್ರಹ ಉಚ್ಚಾಟನಕ್ಕೂ ನೂರು ಗುಣವಂ ಕೊಡುವದು. ಗಂಧಕರಸ ೩, ಸೈಂಧವ ೭, ತಾಮ್ರ ೭, ಇವಂ ನಿಂಬೇಹುಳಿಯಲ್ಲಿ ಮರ್ದಿಸಿ ಕಣ್ಣಿಗೆ ಇಕ್ಕಲು ಸರ್ವ ಕಣ್ಣುರೋಗಗಳು ಹರ. ಜಾಪಾಳ, ಹಿಪ್ಪಲಿ, ಅಳಲೆ, ಇವಂ ಸಮಾನಂಗೊಂಡು ಅದರ ಸಮ ತಾಮ್ರಚೂರ್ಣವಂ ಮಾಡಿ ತಾಂಬೂಲದಲ್ಲಿ ಕೊಟ್ಟರೆ ವಮನವಹುದು .........ಕೊಂಡರೆ ವಿರೇಕವಹುದು.

ಜ್ವರಕ್ಕೆ :—ರಸ, ಗಂಧಕ, ತಾಳಕ, ಇಂಗಲೀಕ, ತ್ರಿಫಲ, ಮಾಕ್ಷಿಕ, ಹಿರಾವಳಿ, ತಾಮ್ರಭಸ್ಮ, ಮಣಿಶಿಲೆ, ಟಂಕಣ, ಇವಂ ಸಮಾನಂಗೊಂಡು ಹಾಗಲದ ರಸದಲ್ಲಿ ಒಂದು ದಿನ ಮರ್ದಿಸಿ ಕಲ್ಕವನ್ನು ನೈ ಉಂಡ ಮಡಿಕೆಯೊಳಗಿರಿಸಿ ಅದರ ಮೇಲೆ ತಾಮ್ರದ ಬಟ್ಟಲನ್ನು ಕವುಚಿ ಸಂಧಿಲೇಪವಂ ಮಾಡಿ ಮೇಲೆ ಮರಳನ್ನು ಹೊಯ್ದು ಆ ತಾಮ್ರದ ಬಟ್ಟಲ ಮೇಲೆ ೩ .................ದೇಹದಲ್ಲಿ ಶೀತಳವಾದಾಗ ಇಳುಹಿ ತೆಗೆದು ಅದರ ಕೂಡೆ ನವಸಾರ, ಇಲಿ ಪಾಷಾಣ, ಮಂಡೂಕ, ಕಪ್ಪಲಿಯಂ ಕೂಡಿ ನುಗ್ಗೆಯ ಬೇರಿನ ರಸದಿಂದ ಮರ್ದಿಸಿ ಮೆಣಸಿನ ತೋರ ಗುಳಿಗೆಯಂ ಮಾಡಿ ಆಲದ ರಸದಲ್ಲಿ ಕೊಡಲು ಶೀತಜ್ವರ, ಚಾತುರ್ಥಿಕ, ವಿಷಮ ಜ್ವರ ಹರ. ಪಥ್ಯ ಹಾಲೋಗರ.

ಗುಲ್ಮಶೂಲೆಗೆ :—ಶೋಧಿಸಿದ ಸುಣ್ಣ ಅಡಿಕೆಯಷ್ಟಂ ಬಾಳೆಯ ಹಣ್ಣಿನೊಳಗೆ ಇಟ್ಟು ನುಂಗುವುದು. ೩ ಗುಳಿಗೆಯಂ ೩ ಅಡಿಕೆಯಷ್ಟಂ ಬಾಳೆಯ ಹಣ್ಣಿನೊಳಗೆ ನುಂಗುವುದು. ಈ ಮರ್ಯಾದೆಯಲ್ಲಿ ೩ ದಿನ, ೫ ದಿನ, ೭ ದಿನ ನುಂಗಲು ಗುಲ್ಮಶೂಲೆ ಮಾಣ್ಗುಂ.

ವಿರೇಕಕ್ಕೆ :—ಜೇಪಾಳ ೧ ಭಾಗ, ದಂತಿ ೧ಭಾಗ, ಮುತ್ತಗದ ಬೀಜ ೧ ಭಾಗ, ತ್ರಿಕಟುಕ ೧ ಭಾಗ, ಅಳಲೇಕಾಯಿ ೧ ಭಾಗ, ತಿಗಡೆ ೩ ಭಾಗ, ಇಷ್ಟನ್ನೂ ಚೂರ್ಣವ ಮಾಡಿ ಆ ಚೂರ್ಣದ ಸಮ ಬೆಲ್ಲವನ್ನು ಹಾಕಿ ಕೊಂಬುದು. ಬಿಸಿನೀರಂ ಕೊಂಬುದು. ವಿರೇಕವಹುದು. ಬಿಸಿನೀರ ಶೌಚ. ಪಥ್ಯ ಹಾಲೋಗರ. ತ್ರಿಫಲೆ ೩, ಕರ್ಪಕಿ ೧, ತುತ್ತ ೧, ಕರ್ಪೂರ, ಶಿಲಾಧಾತು ೧, ಮುಸ್ತೆ೧, ತಾಳಕ ೧, ಶುಂಠಿ ೧, ಮೆಣಸು ೧, ಹಿಪ್ಪಲಿ ೧, ಇಷ್ಟನ್ನು ಬೇರೆ ಬೇರೆ ಚೂರ್ಣವಂ ಮಾಡಿ ಗಟ್ಟಿಪಾವಡೆಯಲ್ಲಿ ವಸ್ತ್ರಗಾಳಿತವ ಮಾಡಿ ಇರಿಸುವುದು.

ಮೃದುಕೋಷ್ಠಕ್ಕೆ :—೧ ತೂಕ ಕೋಷ್ಠಗ ೨ ತೂಕ ಜೇನುತುಪ್ಪದಲ್ಲಾಗಲೀ ಎಳನೀರಲ್ಲಾಗಲೀ ಕೊಡುವುದು. ಬಿಸಿನೀರಲ್ಲಿ ಶೌಚ. ತಣ್ಣೀರಿಗೆ ನಿರ್ಲವಣ, ಪಥ್ಯಕ್ಕೆ ಏನು ಬೇಡಿದರೂ ಕೊಡುವುದು. ಎಸಗದ ಸಮೂಲವಂ ಫಲವಾಗಿದ್ದಾಗ ತಂದು ಚೂರ್ಣವಂ ಮಾಡಿ ಜೇನುತುಪ್ಪದಲ್ಲಿ.........ತೂಕವಂ ಕೊಂಬುದು. ಜೇನುತುಪ್ಪವಂ ಒಲ್ಲದವರಿಗೆ ಆಕಳ ತುಪ್ಪದಲ್ಲಿ ಕೊಡುವದು. ಈ ಪ್ರಕಾರದಲ್ಲಿ ೪೮ ದಿನಗಳು ಕೊಂಬುದು. ಕುಷ್ಠ ಹರ. ಲೇಪನಕ್ಕೆ ಯವಕ್ಷಾರ, ಮುತ್ತಗದ ಬೀಜವನ್ನು ನಿಂಬೆಯ ಹುಳಿಯಲ್ಲಿ ಅರೆದು ಪೂಸುವುದು. ಹುಣ್ಣು ವೆಗ್ಗಳವಾದರೆ ಗೇರತೈಲ, ಹಾಲುಗುನ್ನಿಯ ಹಾಲು, ಎಕ್ಕೆಯ ಹಾಲು, ಇವಂ ಪೂಸುವದು. ಅಲ್ಲಂ ಮೇಲೆ ಗಂಗುಂಗೆಯ ಚೂರ್ಣ, .........ಗೂಡಿನ ಚೂರ್ಣ

ತಿಳಲೇಕಾಯ ಚೂರ್ಣವಂ ಜೇನುತುಪ್ಪವನ್ನು ಹುಣ್ಣಿಗೆ ಪೂಸಿ.......ಇವಂ ಮರ್ದಿಸಿ ಕುಷ್ಠವನ್ನು ಬೆರಣಿಯಲ್ಲಿ ಬೆರೆಸಿ ೩ ದಿನ ಪೂಸಲು ಕೋಷ್ಠ ಮಾಣುವುದು.

. ಅಂಡವಾತಕ್ಕೆ :—ಬಿಳಿಯ ಹಿಡಿಹಿಡಿಕೆ, ಮೇಲುಮುನಿದನ ಹಂಬು ಸಮೂಲ, ಬೆಲ್ಲ ಗಣಿಕೆ, ಕುಪ್ಪಸಗಣಿಕೆ, ಸುರಸುರಿಕೆ, ಇವುಗಳ ರಸವಂ ತೆಗೆದುಕೊಂಡು ಎಳ್ಳೆಣ್ಣೆ ಸಹ ೩ ದಿನಂ ಕೊಂಬುದು. ಅಂಡವಾತ ಹರ. ಹುರುಳಿಯ ಸಮೂಲವಂ ತಂದು, ಬೆಣತಿಗೆಅಕ್ಕಿ ಯಲ್ಲಿ ಹಿಟ್ಟಾಗಿ ತೊಳಸಿ ತುಪ್ಪದಲ್ಲಿ ಹೆಂಗಸಿಗೆ 'ಕೊಡುವುದು. ಕಾಲನ್ನು ಗೋಡೆಗೆ ಒರಗಿಸಿಕೊಂಡು ಮಲಗುವುದು. ಈ ಮರ್ಯಾದೆಯಲ್ಲಿ ೩ ದಿನ ಕೊಂಬುದು. ಹಕ್ಕಿಕಾರ, ಸೊಗದೆ, ಸಿಲದೆ, ನಾಯಿನಾರ, ಇವಂ ಆಡಿನ ಹಾಲಲ್ಲಿ ಕೊಡಿಸುವುದು. ಆ ವ್ಯಾಧಿ ಮಾಣ್ಗುಂ.

ಕಣ್ಣುಹೂವಿಗೆ :—ಉತ್ತಮವಾದ ಬಿಳಿಯ ಶಂಖವಂ ಸಮನಾಗಿ ಕೂಡಿ ಕಿರುಗೋಳಿಯ ರಸದಿಂದ ಮರ್ದಿಸಿ ಆ ರಸದಿಂ ಕಣ್ಣಿಗೆ ಇಕ್ಕಲು ಕಣ್ಣುಹೂವು, ಮೊಳೆ, ಕರಗುವುವು. ರಕ್ತಸಿರೆ ಹರಡಿದರೆ ಎಸಗದ ಸೊಪ್ಪಿನ ರಸದಿಂ ಜೀರಿಗೆ, ಸಾರಂಗದ ಕೊಂಬು, ಅರೆದು ಪಾವಡೆಯೊಳಗಿಕ್ಕಿ ಕಣ್ಣಿಗೆ ಹಿಂಡಲು ಸೆರೆ ಹರ.

ನೀರುದೋಷಕ್ಕೆ :—ನೆಲಾವರೆಯ ಸಮೂಲ, ನೆಲಗುಳ್ಳದ ಸಮೂಲ, ಲೊಕ್ಕಿಯ ಸೊಪ್ಪು, ತನಿಯ ಸೊಪ್ಪು, ಮುಳ್ಳುಕೋನಿಯ ಸೊಪ್ಪು, ಕೊಮ್ಮೆಯ ಬೇರು, ಆಂಜಿಗೆ, ಓಮ, ಶುಂಠಿ, ಈಶ್ವರಿ, ಬೇನಿಸೊಪ್ಪು, ಆ ಬೇರು, ಇವಂ ಚೂರ್ಣವಂ ಮಾಡಿ ಊಟವಾದ ಮೇಲೆ ರಾತ್ರಿಯಲ್ಲಿ ಕೊಂಬುದು. ಮಲಶುದ್ಧಿಯಹುದು. ನೀರುದೋಷ ಕೆಡುಗುಂ.

ಮುಷ್ಟಿಶೂಲೆಗೆ :—ಬೆಲ್ಲಗಣಿಕೆಸೊಪ್ಪು ಅರೆದು ಆ ರೋಗಿಯ ಮೂತ್ರದಲ್ಲಿ ಕಲಸಿ ಬಿಸಿಮಾಡಿ ಇಕ್ಕಿ ಕಚ್ಚೆಯಲ್ಲಿ ಕಟ್ಟಲು ಮೂತ್ರಗೈವಾಗ ಆ ಕಟ್ಟಿದ ಔಷಧಿಯೊಳಗೆ ಮೂತ್ರಂಗೈವುದು. ಉದಯದಲ್ಲಿ ಕಟ್ಟಿ ಮರು ಉದಯಕ್ಕೆ ಬಿಚ್ಚಲು ತನ್ನ ಸ್ಥಾನಕ್ಕೆ ಬರುವುದು. ಆ ಬೆಲ್ಲಗಣಿಕೆಯ ಆ ರೋಗಿಯ ಮೂತ್ರವಂ ಮುಟ್ಟಿಸಿ ತೆಗೆದುಕೊಂಡು ಬಂದು ಹಿಂದಕ್ಕೆ ಬೆನ್ನಕಡೆಗೆ ಹಾಕಲು ಅಸ್ತಮಾನಕ್ಕೆ ತನ್ನ ಸ್ಥಳಕ್ಕೆ ಬರುವುದು.

ಮಂಡೆಶೂಲೆಗ :—ಹುಳಿಎಣ್ಣೆಗೆ ಕಹಿಸೋರೆಯನ್ನು ತಂದು ಅರೆದು ಸಾಮುಕ್ಕಿಯನ್ನು ಹಾಕಿ ಬೇಯಿಸಿ ಮಂಡೆಗೆ ಹಾಕಿ ಕಟ್ಟಿ ಅಸ್ತಮಾನದಲ್ಲಿ ಕೈವಿಾರದ ಬಿಸಿ ಉದಕದಲ್ಲಿ ತೊಳೆಯುವುದು. ಆ ಅಸ್ತಮಾನದಲ್ಲೇ ಹತ್ತಿಯ ಹರಳಂ ತಂದು ಹಸುವಿನ ಮಜ್ಜಿಗೆಯಲ್ಲಿ ಕಲಸಿ ನೆನೆಯಲಿರಿಸಿ ಉದಯಕ್ಕೆ ಹಿಂಡಿಕೊಂಡು ಆ ರಸವುಂ ಮಂಡೆಗೆ ಒತ್ತಿ ಕಟ್ಟಿ ಅಸ್ತಮಾನದಲ್ಲಿ ತೊಳೆಯಲು ಹುಳಿ ಎಣ್ಣೆ ಎಂದಿಗೂ ಆಗದು.

ಪ್ರಮೇಹಕ್ಕೆ :—ಅಂಗುರದ ಬೇರಂ ಕುಯಿದು ಉದಕದಲ್ಲಿ ನೆನೆಯಿಟ್ಟು ಉದಯದಲ್ಲಿ ಆ ಉದಕವಂ ಹಿಂಡಿಕೊಂಡು ಬೆಲ್ಲ ಸಹಿತವಾಗಿ ಹತ್ತು ದಿವಸಗಳು ಕೊಂಬುದು. ಪ್ರಮೇಹ ಹರ. ಸುರುಸುರುಕೆಯಂ, ಎಳನೀರಂ ಹತ್ತು ದಿವಸಗಳು ಕೊಂಬುದು, ಪ್ರಮೇಹ ಹರ.

ವೈಯ್ಯಶೂಲೆಗೆ:—ಎಕ್ಕದ ಸೊಪ್ಪು, ಲೊಕ್ಕಿಯ ಸೊಪ್ಪು, ತನಿಸೊಪ್ಪು, ಅವುಡಲದ ಸೊಪ್ಪು, ಉನ್ಮತ್ತದ ಸೊಪ್ಪು, ಹೊಂಗೆಯ ಸೊಪ್ಪು, ಮೆಣಸಿನ ಸೊಪ್ಪು, ಇವಂ ಸಮಂ

ಬೆರಸಿ ದೊಡ್ಡ ಪಾವಡೆಯ ಹಾಸಿ ಆ ಪಾವಡೆಯ ಮೇಲೆ ಗೇಣುದ್ದ ಸೊಪ್ಪಂ ಇರಿಸಿ ತೆಂಗಿನ ಕಾಯಿಯ ತೋರ ಬಿಳಿಯ ಕಲ್ಲಂ ಕೆಂಡದ ಹಾಗೆ ಕಾಸಿ ಆ ಕಲ್ಲ ಸೊಪ್ಪಿನ ಮೇಲೆ......... ಧೂಪ, ಆಡಿನ ಹಿಕ್ಕೆ, ಬಿಂದಮೇಲಣ ಹುರಿಕೆ, ಬ್ರಹ್ಮದಂಡೆ, ಎಕ್ಕದ ಕಡ್ಡಿ, ಸಾಸುವೆಯ ಕಡ್ಡಿ, ಕೊಮ್ಮೆಯ ಸಮೂಲ, ಕಹಿಸೋರೆ, ಕರಿಮೆಕ್ಕೆ, ಲೊಕ್ಕಿ, ಇಷ್ಟನ್ನೂ ದೊಡ್ಡಿಯ ಹಂಚಿನಲ್ಲಿ ಶಾಕವ ಮುಸುಕಿಕ್ಕಿ ಮಾಡುವುದು. ಬೇನೆ ಬಿಟ್ಟು ಹೋಗುವುದು.

ತೊಡೆವಾಳಿಗೆ :—ಎಕ್ಕದ ಹಾಲನ್ನು ಎಮ್ಮೆಯ ತುಪ್ಪದಲ್ಲಿ ಕಲಸಿ ಆ ತೊಡೆ ವಾಳಿಗೆ ತುಪ್ಪವಂ ತೊಡೆದು ಸೈಂಧವಚೂರ್ಣವಂ ತಳಿದು ಅದರ ಮೇಲೆ ಆ ತುಪ್ಪವ ನಿಟ್ಟು ಕಟ್ಟಲು ತೊಡೆವಾಳಿ ಮಾಣ್ಗುಂ.

ಪಕ್ಕೆಶೂಲೆಗೆ :—ಬೇವಿನಬೇರು, ಕುರುಟಿಗೆಯ ಬೇರು ಸಮವಾಗಿ ಅರೆದು ಆಡಿನ ಹಾಲಿಂದ ಆರು ದಿನ ಕೊಂಬುದು. ಪಕ್ಕೆಶೂಲೆ ಮಾಣ್ಗುಂ. ನೊಗೆವಾಳೆಯ ಗೆಡ್ಡೆಯಂ ತಂದು ನವಣೆಅಕ್ಕಿಯಂ ಕೂಡಿ ಇಡಿದು ಹಿಟ್ಟುಗುಟ್ಟಿ ತುಳಸಿಯ ಸೊಪ್ಪಿನಿಂ ೩ ದಿನ ಕೊಂಬುದು. ಲವಣಾನ್ನವರ್ಜಿತವಾಗಿ ಉಂಬುದು. ಸಂದುಶೂಲೆ ಹರ.

ಮೊಲೆವಿಡಿಗೆ :—ಅಸ್ತಮಾನದಲ್ಲೂ ಉದಯದಲ್ಲೂ ಹೋಗಿ ಕೊಗ್ಗಿಯಂ ತಂದು ಬಹಳಕಾಲ..............ನಲ್ಲಿ ಮೂಡುಮುಖವಾಗಿ ಆ ಔಷಧಿಯನ್ನು ಇಕ್ಕಿ ಹಿಮ್ಮೆಡಗಲು ಮೊಲೆವಿಡಿ ಮಾಣ್ಗುಂ.

ಮೂಷಕವಿಷಕ್ಕೆ :—ಕಿರುನೆಲ್ಲಿ, ಕಿರುಗಡಸಿಗೆ, ಸುರುಸುರುಕೆ, ಇವು ೩ ಸಮಾನಂ ಗೊಂಡು ಅರೆದು ಆಡಿನ ಹಾಲಲ್ಲಿ ಅರೆದು ಕುಡಿದು ಪೂಸುವುದು. ಮೂಷಕವಿಷ ಮಾಣ್ಗುಂ.

ಸರ್ಪವಿಷಕ್ಕೆ :—ಹಿಪ್ಪೆಯ ಬೇರ ಕೊರಡು, ಕಡವದ ಬೇರ ಕೊರಡು, ಈ ೨ ಬೇರ ಕೊರಡನ್ನೂ ಬಡಗಿನಿಂ ತಂದು ನೀರಿಂ ತೇದು ಕುಡಿಯ ಕೊಟ್ಟು ಕಣ್ಣಿಗಿಕ್ಕಿ ಪೂಸುವುದು. ಸರ್ಪವಿಷ ಹರ.

ಹೆನ್ನೆತ್ತರಿಗೆ :—ತ್ರಿಫಲೆಯ ಕಷಾಯವಂ ಮಾಡಿ ಆ ಕಷಾಯದೊಳು ಅವರೆಯ ಕೊನರು ಒಂದು ಹಿಡಿಯಂ ಹಾಕಿ ಲೇಸಾಗಿಯೇ ಬೇಯಿಸಿ ಅವರೆಯ ಕೆನರನರೆದು ಕಾಳ ಹಸುವಿನ ಹಾಲಲ್ಲಿ ಸಕ್ಕರೆ ಸಹಿತ ಕೊಂಬುದು. ಹೆನ್ನೆತ್ತರು ಮಾಣ್ಗುಂ. ಅವರೆಯ ಬೀಜವಂ ಚೂರ್ಣವಂ ಮಾಡಿ ತ್ರಿಫಲೆ ಸಹಿತ ಆಕಳ ಹಾಲಲ್ಲಿ ಕೊಂಬುದು, ಹೆನ್ನೆತ್ತರು ಮಾಣ್ಗುಂ. ಅವರೆಯ ಸೊಪ್ಪಂ ತಂದು ಹಿಂಡಿಯನಿಕ್ಕಿ ಅಟ್ಟು ಎಣ್ಣೆ ಸಹಿತ ಕೊಂಬುದು. ಹೆನ್ನೆತ್ತರ ವ್ಯಾಧಿ ಮಾಣ್ಗುಂ. ನೊಗವಾಳೆ, ನೇರಲೆ, ಚಿತ್ರಮೂಲದ ಬೇರು, ಹಿಪ್ಪಲಿ, ಶುಂಠಿ, ಸೈಂಧವ, ಇವು ಸಮಾನಂಗೊಂಡು ಚೂರ್ಣವ ಮಾಡಿ ಎಣ್ಣೆ, ತುಪ್ಪದಲ್ಲಿ ಕಲಸಿ ಗುಳಿಗೆ ಯಾಗಿ ಕೊಡುವದು, ಹೆನ್ನೆತ್ತರ ವ್ಯಾಧಿ ಹರ.

ಪ್ರಮೇಹಕ್ಕೆ :—ಬಹಿಃ ಔಷಧ. ಹಿರೀಚಲಹೂವು, ನೊಗವಾಳೆಯ ಗೆಡ್ಡೆಯಂ ನಿಂಬೇಹುಳಿಯಲ್ಲಿ ಅರೆದು ಭಗಂದರಕ್ಕೆ ಪೂಸುವದು. ಹಲಸಿನ ಮೇಲಿನ ಹುರುಪೆ, ಸಮುದ್ರ

ಘಾಳ, ಗಂಡರಿಸಿನ, ಹಿರಿಯ ಮದ್ದಿನ ಬೇರು, ಇಪ್ಪಿಯ ಬೀಜ ಇವಂ ಅರೆದು ಪೂಸುವದು. ಅವರೆಯ ಬೀಜ ಎರಡು ಬಳ್ಳ, ಬೊಬ್ಬುಳಿ, ಇದೊಂದು ಕಷಾಯ. ಅರಿಸಿನ ಭಾಗ ೭, ಮರದರಿಸನ ಭಾಗ ೭, ಕಯಿರದ ಬಿತ್ತ ಭಾಗ ೮, ಅವರೆಯ ಬೀಜ ಭಾಗ ೮, ಇವಂ ಚೂರ್ಣವಂ ಮಾಡಿ ಎಣ್ಣೆಯಲ್ಲಿ ಕಲಸಿ ಗುಳಿಗೆಯಂ ಮಾಡಿ ತೆಗೆದುಕೊಳ್ಳುತ್ತಾ ಬರುವದು. ಎಲ್ಲಾ ಪ್ರಮೇಹಂಗಳೂ ಮಾಣುವುವು. ಅವರೆಯ ಎಳೆಯ ಕಾಯಿ, ತಾರೆಯ ಎಳೆಯ ಕಾಯಿ, ಹೆದ್ದುರುಚಿಯ ಬೀಜ, ಮರದರಿಸಿನ, ಇವಂ ಚೂರ್ಣವ ಮಾಡಿ ಎತ್ತಿನ ಮೂತ್ರದಲ್ಲಿ ನೆನೆ ಇಕ್ಕಿ ಅರೆದ ಕಲ್ಕುವನ್ನೂ ಲೇಹ್ಯಂ ಮಾಡೆ ಎಲ್ಲಾ ಪ್ರಮೇಹಂಗಳು ತೀರುವುವು. ಪ್ರಮೇಹಕ್ಕೆ–ಎಲೆಹುರಿಯಬೇರು ಹಳೇನೀರಿಂ ಕುಡಿಯೆ ಪ್ರಮೇಹಂ ತೀರ್ಗುಂ. ಕಲ್ಲು ಒಡೆದು ಬೀಳ್ಗುಂ. ಇಂಗು, ಸೈಂಧವ, ಬಿಸಿನೀರಿಂ ಕುಡಿಯೆ ಕಲ್ಲು ಒಡೆದು ಬೀಳ್ಗುಂ. ಒಗರು ಮಣ್ಣು ನೀರಿಂದ ಕದಡಿ ಸಕ್ಕರೆಯಲ್ಲಿ ಕುಡಿಯಲು ಕಲ್ಲು ಬೀಳ್ಗುಂ. ಬಡಗ ಹರಿದ ಹೊರದ ಬೇರಂ ಹಾಲಲ್ಲಿ ಸಕ್ಕರೆಯಿಂ ಕುಡಿಯೆ ಕಲ್ಲೊಡೆದು ಬೀಳ್ಗುಂ.

ಪಿತ್ತದಿಂ ದೇಹನಷ್ಟಕ್ಕೆ :—ಅಷ್ಟಮಧುಕ, ಶ್ರೀಗಂಧ, ಎಳೆಯ ನೆಲ್ಲಿಯ ಕಾಯಿ, ದ್ರಾಕ್ಷೆಯ ಹಣ್ಣು, ಏಲಕ್ಕಿ, ಹಿಪ್ಪೆಯ ಹೂವು, ಕರ್ಪೂರ, ಶಿಲಾಧಾತು, ದಾಳಿಂಬದ ಬೀಜ, ಇಂತಿವಂ ಸಮಾನಂಗೊಂಡು ಚೂರ್ಣವಂ ಮಾಡಿ ತುಪ್ಪದಿಂ ಗುಳಿಗೆಯಂ ಮಾಡಿ ಕೊಂಬುದು. ಊರ್ಧ್ವಪಿತ್ತ ಕೆಡುಗುಂ. ಪಥ್ಯ ಕರಿಯ ಹೆಸರ ಕಟ್ಟು, ಹೊನಗೊನ್ನೆಯ ಸೊಪ್ಪು, ಒಂದೆಲಗನ ಸೊಪ್ಪು, ಹಸುವಿನ ಹಾಲು, ೭ ದಿವಸಗಳು ಕೊಂಬುದು. ರಕ್ತಪಿತ್ತಕ್ಕೆ–ನೆಲ್ಲಿಚೆಟ್ಟು, ಅರ್ಧ ಪಲಂ, ಜಲಗೊಟ್ಟೆ ೪ ತೂಕ, ಅಷ್ಟಮಧುಕ ೨ ತೂಕ, ಇವಂ ಹಾಲಲ್ಲರೆದು ಪಂಚದಾರೆ, ಸಕ್ಕರೆಯಲ್ಲಿ ಹಸುವಿನ ಹಾಲಂ ೭ ದಿನ ಕೊಂಬುದು. ಹಸುವಿನ ಹಾಲು ತುಪ್ಪದಿಂ ಅಟ್ಟು ಗುಳಿಗೆಯಂ ಮಾಡಿ ಕೊಂಬುದು. ಲೊಕ್ಕಿ, ಚಿತ್ರಮೂಲ, ಗಣಜಿಲಬೇರು, ಕೊಗ್ಗಿಯ ಬೇರು, ನೆಲಾವರೆ, ಅಗಳುಶುಂಠಿ, ಸೈಂಧವಲವಣ, ಅಳಲೇಕಾಯಿ, ಓಮ, ಸಮುದ್ರಲವಣ, ಇಂಗು, ಇವ ನೀರಲ್ಲರೆದು ಎರಡು ಬಳ್ಳದಲ್ಲಿ ಕದಡಿ ಒಂದು ಬಳ್ಳವಾಗಿ ಕಾಸಿ ಕರಿಬೇವಿನೆಲೆ, ಸಾಸುವೆಯಂ ಒಗ್ಗರಿಸಿ ಊಟದಲ್ಲಿ ಕೊಳ್ಳಲು ದೀಪನವಹುದು.

ಅರೆದಲೆಬೇನೆಗೆ :—ಬಿಳಿಯ ಗಿರಿಕರ್ಣಿಕೆಯ ಬೀಜ, ಹಣ್ಣುಮೆಣಸು, ಗರುಗದ ರಸದಿಂ ನಸ್ಯಮಾಡೆ ಅರೆದಲೆಬೇನೆ ತೀರ್ಗುಂ.

ಉರಿಮೂತ್ರಕ್ಕೆ :—ಎಕ್ಕದ ಹಾಲಂ ನಾಲ್ಕು ಮೂರು ಹನಿಯಂ ಸುಣ್ಣದಿಂ ಮರ್ದಿಸಿ ಆ ಸುಣ್ಣಮಂ ಎಲೆಗೆ ತೊಡೆದು ಮಡಿಸಿಕೊಂಡು ವೀಳ್ಯವನ್ನು ಹಾಕಿಕೊಳ್ಳಲು ಉರಿಮೂತ್ರ ಮಾಣ್ಗುಂ.

ಗುಲ್ಮಕ್ಕೆ :—ಕಹಿಸೋರೇಕಾಯ ತೊಟ್ಟಂ ಕೊಯ್ದು ಕಲ್ಲುಪ್ಪಂ ಒಣಗಿದ ಕಾಯಲ್ಲೂ ಹಸಿಯಲ್ಲೂ ಅರೆದು ತುಂಬಿ ಆ ಕಾಯಿಯ ಬಾಯಲ್ಲಿ ಗೂಟವಂ ಇಟ್ಟು ಹತ್ತು ಭಾಗ ಹುಣಸೆಯ ತಿಗುಡು, ಒಂದು ಭಾಗ ತಪಸದ ತಿಗಡು ಕುಳಿಯಲ್ಲಿ ಹಾಕಿ, ಕಹಿಸೋರೇಕಾಯಂ ಇಡಿಸಿ, ಆ ಕಾಯ ಮೇಲೆ ಬೆಂಕಿಯನಿಕ್ಕಿ ಸುಟ್ಟು ಆರಿಸಿದ ಬೂದಿಯಂ ಹೊಸ

ಮಡಕೆಯಲ್ಲಿ ಇರಿಸುವುದು. ರೋಗಿಗೆ ಆ ಔಷಧಿಯಂ ಮೂರು ಬೆರಳಿಂ ಎತ್ತಿಕೊಂಡು ಬಿಸಿ ನೀರಿಂ ಕಾಲು ಮಂಡಲ, ಒಂದು ಮಂಡಲಂ ಕೊಡೆ ಗುಲ್ಮ ಮಾಣ್ಗುಂ.

ಸನ್ನಿಪಾತಕ್ಕೆ :—ದೇವದಾರಿನ ಕೊರಡು, ಕೆಂಪಿನ ಕಣಿಗಿಲೆಯ ಕೊರಡು, ಮೆಣಸಿಗೆಯ ಕೊರಡು, ಹುಣಸೆಯ ತಿಗಡು, ತೆಂಗಿನಕಾಯ ಓಟೆ, ಇಂತಿವಂ ಒಣಗಿಸಿ ಹರವಿಯಲ್ಲಿ ತುಂಬಿ ಗಜಪುಟವಿಟ್ಟು ತೈಲವಂ ತೆಗೆದುಕೊಂಡು ಆ ತೈಲದೊಳಗೆ ತಗಚೆಯ ಬೀಜ, ಬಾಗುಂಜಿಯ ಬೀಜ, ಬಜೆ, ಕೋಷ್ಟ, ಕಹಿಸೋರೆಯ ಬೀಜ, ಇವಂ ಸಮಾನಂಗೊಂಡು ಚೂರ್ಣವಂ ಮಾಡಿ ಆ ತೈಲದಿ ಪ್ರತಿಪಾಕವಿಕ್ಕಿ ಆ ತೈಲವಂ ಸರ್ವಾಂಗಕ್ಕೆ ಒತ್ತಿಸಿಕೊಂಬುದು. ಸನ್ನಿಪಾತ ಹರ.

ವೀರ್ಯವರ್ಧನಕ್ಕೆ :—ಬೆಳುಗಾರ, ಕರ್ಪೂರ, ಹಿಪ್ಪಲಿ, ರಸ, ಇವಂ ಸಮಾನಂಗೊಂಡು ಕಿರುಕರಂಜಿಯ ಹಾಲಲ್ಲಿ ಉಂಡೆಯ ಮಾಡಿ ಆ ಗುಳಿಗೆಯಂ ಜೇನುತುಪ್ಪದಿ ತೇದು ಲೇಪಂ ಮಾಡುವುದು.

ಸನ್ನಿಪಾತಕ್ಕೆ :—ಹುಲಿಗಿಲ ಬೀಜ, ತ್ರಿಕಟುಕ, ಅರಿಸಿನ ಇವಂ ಸಮಾನಂಗೊಂಡು ಮಾದಲದ ಹಣ್ಣಿನ ರಸದಲ್ಲಿ ಅರೆದು ಕಣ್ಣಿಗೆ ಹಚ್ಚುವುದು. ಎದ್ದು ಕುಳ್ಳುವುದು. ಒಳಕ್ಕೆ ಕೊಡುವ ಔಷಧ—ಆಡುಸೋಗೆ, ಕುಂಬಳದ ಹಸಿಯ ದಂಟು, ಎಕ್ಕದ ಬೇರು, ಇವಂ ಕಷಾಯಂ ಮಾಡಿ ತ್ರಿಕಟುಕ ಪ್ರತಿಪಾಕವಿಕ್ಕಿ ಕೊಂಬುದು.

ವೀರ್ಯವರ್ಧನಕ್ಕೆ :—ಓಡುಬಿಟ್ಟಂಥಾ ತೆಂಗಿನಹಣ್ಣುಕಾಯನ್ನು ಬೆರಳು ಹೋಗುವಷ್ಟು ಛಿದ್ರವಂ ಮಾಡಿ ಮಂಗುರುವಳ್ಳಿಯ ಹಣ್ಣನೊಣಗಿಸಿ ಒಂದು ಸೆರೆಯಂ ಆ ಕಾಯಲ್ಲಿ ತುಂಬಿ ಆ ಕಾಯಿಯ ಬಾಯಂ ಮುಚ್ಚಿ ಒಂದು ಬೆಸಲಿಗೆಯಲ್ಲಿ ಇಕ್ಕೊಳಗ ಹಾಲಂ ಬಿಟ್ಟು ತೆಂಗಿನಕಾಯಂ ಹಾಲಲ್ಲಟ್ಟು ಹಾಲು ಇಂಗುವ ತನಕ ಬೇಯಿಸಿ ಬೆಂದ ಹಣ್ಣಂ ಆರಿಸಿ ಹಣ್ಣಿನೊಳಗಣ ಬೀಜವಂ ೮ ಭಾಗಂ ಮಾಡಿ ಅಸ್ತಮಾನಕ್ಕೆ ಗಳಿಗೆ ಇರುವಾಗ ಒಂದು ತೆಂಗಿನಕಾಯ ಹೋಳು, ಒಂದುಭಾಗ ಬೀಜವ ಕೊಳ್ಳುತ್ತಾ ಬರುವುದು. ವೀರ್ಯವರ್ಧನಂ. ದಾಳಿಂಬದ ಬೀಜದ ಬೇಳೆಯ ಪಾಯಸವಂ ಮಾಡಿ ಅದೇ ಆಹಾರವಾಗಿ ಕೊಂಬುದು, ವೀರ್ಯವರ್ಧನ. ನೀರ ತೃಷೆಗೆ ಮಜ್ಜಿಗೆಯಂ ಕಾಸಿ ಕುಡಿಸುವುದು.

ವಾತಜ್ವರಕ್ಕೆ :—ಜೀರಿಗೆ, ಶುಂಠಿ, ಮೆಣಸು, ಲಕ್ಕಿ, ಬೇವಿನ ಬೀಜ, ಕಡ್ಡಿ, ಕೊತ್ತಂಬರಿ, ಇವಂ ಸಮಾನಂಗೊಂಡು ನೀರಲ್ಲಿ ಕದಡಿಕೊಂಬುದು. ವಾತಕ್ಕೆ ಆಡಿನ ಹಾಲು, ಎಣ್ಣೆ, ಲಕ್ಕಿಯ ರಸ, ತನಿಯ ಸೊಪ್ಪಿನ ರಸ, ಹುಣಸೆಯ ರಸ, ಎಕ್ಕದ ಹಾಲು, ಇಷ್ಟನ್ನೂ ಎಣ್ಣೆ ಉಳಿಯಲಟ್ಟು ಕೊಳ್ಳೆ ವಾತಜ್ವರ ಮಾಣುವುದು.

ಶೂಲೆಗೆ :—ತ್ರಿಕಟುಕ, ಸೈಂಧವ, ಗದುಗಿನ ಸೈಂಥವ, ಆಮಲಕ ರಸ, ಅಷ್ಟಮಧುಕ, ಶಂಖವಂ, ಸಮುದ್ರಫೇನ, ಎಂಬಿವಂ ಚೂರ್ಣಂ ಮಾಡಿ ಮಧುಯುಕ್ತಂ ಜೇನುತುಪ್ಪದೊಳು ನೇತ್ರಾಂಜನಂ, ಅಂಜನವಂ ಮಾಡಿ ಕಣ್ಣೊಳಗೆ ಹಚ್ಚಲು, ಮೂರು

ಹೊತ್ತು ಆ ನಯನದೊಳಗೆ ಇಕ್ಕಲು ಅದರಿಂದ ಕೀವು, ನೀರು ಸುರಿಯುವದು ಎಂಬಿವೆಲ್ಲವಂ ಪರಿಹರಿಸುಂ ಕೆಡಿಸುಗುಂ.

ವಾತಜ್ವರಕ್ಕೆ :—ಮುಟ್ಟಿದರೆ ಮುರುಟಿ ೬ ತೂಕ, ಒಂದಲೆ ಹೊನ್ನೆ ಗ ೬ ತೂಕ, ಲಾಮಂಚ ಗ ೬ ತೂಕ, ಅವುಡಲದ ಬೇರು ಗ ೬ ತೂಕ, ಶುಂಠಿ ಗ ೬ ತೂಕ, ಇವೆಲ್ಲವಂ ಸಮಾನಂಗೊಂಡು ಎಣ್ಣೆ ಮಾನ ೧೦ ಗೂಡಿ ಆ ಔಷಧಿಯ ರಸಮಂ ಕೂಡಿ ಉರಿಯಾದ ದೇಹದ ವಾತರೋಗಿಗೆ ಕೊಡಿಸುವುದು. ಪೂಸುವುದು. ವಾತಜ್ವರ ಹರ. ಲೊಕ್ಕಿ, ತನಿ, ಮುಂಗುರವಳ್ಳಿ, ಲೋಳಿಸರ, ಅವುಡಲಿಕೆ, ಇವಂ ಒಪ್ಪಲವಾಗಲೀ ಇಪ್ಪಲವಾಗಲೀ ಕೊಂಡು ಅರಿಸಿ ಗ ೫ ತೂಕ ಎಣ್ಣೆ ಕಾಸಿ ಇಳುಹುವುದು. ವಾತಾಧಿಕಂಗೆ ಒಳಗೆ ಕುಡಿಸುವುದು, ಹೊರಗೆ ಪೂಸುವುದು. ಅಜಾಮೋದ, ಸೈಂಧವ, ಅಳಲೇಕಾಯಿ, ಶುಂಠಿ, ಹಿಪ್ಪಲಿ, ಇವಂ ಸಮಾನಂಗೊಂಡು ೨ ಹಣ ತೂಕವಂ ಊಟದ ಮೇಲೆ ಕೊಂಬುದು. ದೀಪನವಹುದು. ........., ಕರಿಬೇವು, ಅಳಲೇಕಾಯಿ, ಶುಂಠಿ, ಇವಂ ಬಿಸಿಮಾಡಿ ೧೨ ವರಹ ತೂಕವಂ ಅಷ್ಟಕಷಾಯವಂ ಮಾಡಿ ಕೊಡಿಸುವುದು.

ಕೈಮುಸಕಿಗೆ:—ಅವರೇಬೇರಂ ಹಸುವಿನ ತುಪ್ಪದಿ ಮೆಲ್ಲುವುದು. ಹಾಗ ೧ ನೀಲಿಯ ಬೇರಂ ಅರೆದು ಬೆಲ್ಲ ಸಹಿತ ಕುಡಿಸುವುದು. ಕೈಮುಸಕು ಹರ.

ಮುಖರೋಗಕ್ಕೆ :—ಬಿಳಿಯ ಉಗನಿಯ ಬೇರಂ ಮೊಲೆಹಾಲಲ್ಲಿ ನಸ್ಯಂ ಮಾಡೆ ಮುಖರೋಗ ಮಾಣ್ಗುಂ. ಪುಷ್ಯನಕ್ಷತ್ರದಲ್ಲಿ ಅವರೇಬೇರಂ ತಂದು ನಸ್ಯಂ ಮಾಡಲು ತಿಂಗಳಿಗೆ ಕೆಮ್ಮು, ಅತಿಶಯಮೊಳೆ, ಮುಖರೋಗ ಮಾಣ್ಗುಂ.

ಹೊಟ್ಟೆಗೆಡ್ಡೆಗೆ :—ತ್ರಿಕಟುಕ, ಹಾಗಲದ ಸೊಪ್ಪು, ಇವಂ ಎಣ್ಣೆಯೊಳು ಕುಡಿಯೆ ಗೆಡ್ಡೆ ಮಾಣುವುದು.

ಜ್ವರಕ್ಕೆ :—ಕಾಡುಬಂಬೆಬೇರಂ ಹಸಿಯ ಹಾಲಿಂ ಕುಡಿಯಲು ಜ್ವರ ಹರ. ಅಳಲೇಕಾಯಿ, ಲೋಳಿಸರದ ತಿಗುಡು, ಸಹ ಕಷಾಯವ ಮಾಡಿ ಕುಡಿಯೆ ಜ್ವರ ಹರ. ಒಳಜ್ವರಕ್ಕೆ—ಶುಂಠಿ, ಸಕ್ಕರೆಯಂ ಹಸಿಯ ಹಾಲಿಂ ಕುಡಿಯೆ ಜ್ವರ ಹರ.

ಹೆರುವ ಬೇನೆಗೆ :—ಉತ್ತರಣಿಯ ಸೊಪ್ಪಂ ತಂದು ಇಳಿಯ ತೊಡೆಯಲು ಕೂಸುಂ ಮಾಸುಂ ಬೀಳುವುದು. ಕರುಳು ಬೀಳದ ಹಾಗೆ ಸರ್ರನೆ ಏರ ತೊಡೆಯುವುದು. ಎಕ್ಕದ ಹಾಲಂ ತಂದು ಪಾರಿವಾಣದ ಎಲೆಯ ತೊಟ್ಟಿನ ಕಡೆಯ ತುದಿಯಲ್ಲಿ ಹಾಲಗೂಡಿ ಯೋನಿಗೇರಿಸಲು ಗರ್ಭ ಬೀಳ್ಗುಂ. ಗರ್ಭಬಳಲಿಕೆ, ಎಲುವಸಂಧಿಯಂ ತಂದು ಕುಡಿಯ ಕೊಡಲು ಗರ್ಭಶೂಲೆ ಮಾಣ್ಗುಂ.

ಕಣ್ಣುದೃಷ್ಟಿ ಕೆಟ್ಟರೆ—ಅಂಕೋಲೆಯ ಬೇರು, ಇಟ್ಟೆಯ ಬೀಜ, ಈ ೨ ತಂದು ತೇದು ಕಣ್ಣಿಗಿಕ್ಕಲು ಛಳುಕು ತೀರ್ಗುಂ.

ಸಂಜೆಗಣ್ಣಿಗೆ :—ಅರಿಸಿನ, ಅವುಡಲದ ಗೊಟ್ಟೆಯ ತಿರುಳು, ಈ ಎರಡಂ ನಿಂಬೆಯ ಹುಳಿಯಲ್ಲಾಗಲೀ ನೀರಲ್ಲಾಗಲೀ, ತೇದು ಕಣ್ಣಿಗೆ ಮೂರು ದಿನಗಳು ಹಚ್ಚುವುದು. ಸಂಜೆ ಗಣ್ಣು ಹರ.

ಪಕ್ಕೆಶೂಲೆಗೆ :—ಕಿರುಗುರುಟಿಗೆಯ ಬೇರು, ಬೇವಿನ ಬಡಗಣ ಬೇರಂ ತಂದು ಈ ಎರಡಂ ಕಾಳಾಡಿನ ಹಾಲಲ್ಲರೆದು ಮೂರು ದಿನಗಳು ಕುಡಿಯೆ ಪಕ್ಕೆಶೂಲೆ ಹರ.

ಮೂತ್ರ ರೋಗಕ್ಕೆ :—........., ನರುವಂಜಿ, ಕಳ್ಳಂಗಡಲೆ, ಇವಂ ಅರೆದು ಬಹಿಗೆ ಪೂಸಿ ಇಳಿಯ ತೊಡೆಯುವುದು. ಬಹುಮೂತ್ರ ಮಾಣುವುದು.........ಬಸಲೆ, ಸುಗಂಧಿ, ಇವುಗಳ ಬೇರುಗಳಂ ತುಪ್ಪದಿ ಅರೆದು ಕುಡಿಯೆ ಏಳುದಿನಕ್ಕೆ ಬಹುಮೂತ್ರ ಹರ. ಚಿಕ್ಕೆವತ್ತದ ಬೀಜವಂ ಹಸಿಯ ಹಾಲಿಂ ಕುಡಿಯೆ ಮೂತ್ರಕೃಛ್ರ ಹರ. ಜಾಪಾಳ, ಅಮರದ ವಳ್ಳಿ, ಕೋಷ್ಠ, ಎರಡರಿಸಿನ, ದೇವದಾರು, ಅವರೆಯ ಪಂಚಾಂಗ, ಹಾಲೆಯ ರಸ, ಇವಂ ಚೂರ್ಣವಂ ಮಾಡಿ ಸರಿಮಾಡಿ ಜೇನುತುಪ್ಪದಿ ಸೇವಿಸೆ ಮೂತ್ರಕೃಛ್ರ ತೀರ್ಗುಂ. ಅತ್ತಿಯ ಪಳಮುಂ ಸಕ್ಕರೆಯಿಂ ಕೊಳ್ಳಲು ಪ್ರಮೇಹ ತೀರ್ಗುಂ. ಎಲಚಿಯನ್ನೂ ಹುಲುಕಿ ಯನ್ನೂ ಆಡಿನ ಹಾಲಿಂ ಕೊಂಬುದು. ಕೆಂಪಿಗೆ - ನೆಲ್ಲಿಯ ರಸವಂ ಜೇನುತುಪ್ಪದಿ ಕೊಂಬುದು. ಹಿಂಡಿಯನ್ನು ಜೇನುತುಪ್ಪದಿ ಕೊಂಬುದು. ಹಿಂಡಿಯನ್ನೂ, ಎಣ್ಣೆಯನ್ನೂ, ಜೋಳದೋಗರವನ್ನೂ ನೀರಳೆಯನ್ನೂ ಕೊಂಬುದು. ಕೊವಳಿಕೆಯ ಬೀಜ, ಅವರೇಬೇಳೆಯ ಕೊನರು, ಇವಂ ಸಣ್ಣವಾಗಿ ಅರೆದು ಎಣ್ಣೆಯಲ್ಲಿ ಮುದ್ದೆಯನ್ನು ಮಾಡಿ ಹೂಳಿರಿಸುವದು. ರೋಗಿಯು ಕೊಳ್ಳುವಾಗ ಗುಂಜಿಯ ತೋರ ಗುಳಿಗೆಯಂ ಮಾಡಿ ಜೇನುತುಪ್ಪ ಸಹಿತ ಕೊಳ್ಳುವುದು.

ಪಿತ್ತದಿಂ ಹುಟ್ಟಿದಂತಹ ಬಹುಮೂತ್ರಕ್ಕೆ ಕಷಾಯ :—ಲೋಧ್ರ, ಮತ್ತಿಯ ತಿಗಡು, ಲಾಮಂಚ, ಶ್ರೀಗಂಧ, ಈ ಔಷಧಂಗಳ ಸಮವಾಗಿ ಗ ೧೨ ತೂಕವನ್ನು ಹದಿನಾರು ಸಲ ನೀರಿನೊಳಗೆ ಹಾಕಿ ಕಾಸಿ ಇಪ್ಪಲಂ ಉದಕವನಿಳುಹಿಕೊಂಡು ಆರಿಸಿ ಒಂದು ತೂಕ ಜೇನುತುಪ್ಪ ಪ್ರತಿಪಾಕವನ್ನು ಹಾಕಿ ಕೊಡುವುದು. ಬೇವಿನ ತಿಗಡು, ಕಹಿ ಪಡವಲ ಬೀಜ, ನೆಲ್ಲಿಯ ಚಟ್ಟು, ಅಮರದ ಬಳ್ಳಿ, ಇಷ್ಟು ಔಷಧಿಗಳನ್ನೂ ಹಿಂದೆ ಹೇಳಿದ ಮರ್ಯಾದೆಯಲ್ಲಿ ಕಷಾಯವಂ ಮಾಡಿ ಕೊಂಬುದು. ಸಿರಿಸದ ಮರದ ತಿಗಡು, ನಾಗಕೇಸರ, ಇವುಗಳ ಕಷಾ ಯವಂ ಮಾಡಿ ಕೊಡುವುದು. ಸಾಲೆಬೇರು, ಹಾಲಿವಾಣದ ತಿಗಡು, ತಾವರೆಯ ಹೂವು, ನೈದಿಲಗೆಡ್ಡೆ, ಈ ಔಷಧಿಗಳಿಂದ ಕಷಾಯವಂ ಮಾಡಿ ಹಿಂದೆ ಹೇಳಿದ ಮರ್ಯಾದೆಯಲ್ಲಿ ಕೊಡುವುದು. ಇದೆಲ್ಲ ಕದಡಿದ ಹಾಗೆ ಹೋಗುವ ಮೂತ್ರಕ್ಕೆ ಕಷಾಯವಂ ಮಾಡಿ ಕೊಡು ವುದು. ಹೊನ್ನೆಯ ಮರದ ಚೆಕ್ಕೆ, ಭುಜಪತ್ರೆ, ಮತ್ತಿಯ ತಿಗುಡು, ತಪಸಿಯ ತಿಗುಡು, ಬಿಳಿಯ ಬೆಲ್ಲವತ್ತ, ಸೆಕ್ಕೆಯ ತಿಗುಡು, ಕರಿಯ ..... ...... ಇಬ್ಬಿಡದ ಮರದ ತಿಗುಡು. ಮೇಷಶೃಂಗಿಯ ಮರದ ತಿಗುಡು, ಕೆಂಬಲಿಯ ತಿಗಡೆ, ಕಾಯ ಮತ್ತಿಯ ತಿಗುಡೆ, ಬಿಳಿಯ ಮುತ್ತಗದ ತಿಗುಡು, ಅಗಿಲು ತೇಗದ ಬೇರು, ಸಾಲಮರದ ತಿಗುಡು, ............ ...ಮರದ ತಿಗಡೆ, ಅಡಕೆಯ ಮರದ ಬೇರ ತಿಗುಡು, ಬಿಳಿಯ ಮತ್ತಿಯ ತಿಗಡು, 'ಇಷ್ಟು

ಔಷಧಿ ಸಮನಾಗಿ ಕೂಡಿ, ಗ ೧೨ ತೂಕವನ್ನು ೧೪ ಸಲ ನೀರೊಳಗೆ ಹಾಕಿ ಇಪ್ಪಲವಾಗಿ ಕಾಸಿ ಆರಿಸಿ ಗ ೧ ತೂಕ ಜೇನುತುಪ್ಪವನ್ನು ಹಾಕಿ ಕೊಡುವುದು.

ನೀಲವರ್ಣವಾಗಿ ಹೋದ ಬಹುಮೂತ್ರಕ್ಕೆ :—ಆಲದ ತಿಗುಡು, ಅರಳಿಯ ತಿಗಡು, ಅತ್ತಿಯ ತಿಗುಡು, ಬಿಳಿಯ ಲೋಧ್ರ, ಕರಿಯ ಲೋಧ್ರ, ನೇರಿಲ ತಿಗುಡು, ಬಿಳಿಯ ಮತ್ತಿ ತಿಗಡು, ಬಸುರಿಯ ತಿಗಡು, ಕೋರೆಯ ತಿಗುಡು, ಹುಣಸೆಯ ತಿಗಡು, ಬೆಂಡೆಯ ಬೇರು, ಮುತ್ತುಗದ ತಿಗಡು, ನಂದಿಯ ಮರದ ತಿಗಡು, ಯೇರದ ಮರದ ತಿಗಡು, ತಪಸದ ತಿಗಡು, ತುಂಬುರದ ತಿಗಡು, ಅಷ್ಟಮಧುಕ, ಹಿಪ್ಪೆಯ ತಿಗಡು, ಇಷ್ಟು ಔಷಧಿಗಳಿಂದ ಹಿಂದೆ ಹೇಳಿದ ಹಾಗೆ ಕಷಾಯವಂ ಮಾಡಿ ಕೊಡುವುದು.

ಹಳದೀ ಬಣ್ಣದ ಹಾಗೆ ಹೋದ ಮೂತ್ರಕ್ಕೆ :—ಇದನ್ನು ಹರಿದ್ರಮೇಹವೆಂಬುವರು. ಇದಕ್ಕೆ ಕಕ್ಕೆಯ ಬೇರಿನ ಕಷಾಯವನ್ನು ಮಾಡಿ ಗ ೧ ತೂಕವನ್ನೂ ಜೇನುತುಪ್ಪವನ್ನೂ ಹಾಕಿ ಕೊಡುವುದು. ರಕ್ತವರ್ಣವಾಗಿ ಹೋಗುವ ಮೂತ್ರವನ್ನು ಮಂಜಿಷ್ಟೆ ಎಂಬುವರು. ಅದಕ್ಕೆ ಮಂಜಿಷ್ಟ, ಶ್ರೀಗಂಧ, ಇದರಿಂದ ಹೇಳಿದ ಹಾಗೆ ಕಷಾಯವಂ ಮಾಡಿ ಕೊಡುವುದು. ರಕ್ತವರ್ಣವಾ. ಅಲ್ಲ ರಕ್ತ ತಾನೇ ಮೂತ್ರದಲ್ಲಿ ಹೋದರೆ ಆ ಮೂತ್ರವನ್ನು ರಕ್ತಮೇಹವಂಬುವರು. ಅದಕ್ಕೆ ಅಮರದವಳ್ಳಿ ......... ಜೇರಿನ ತಿಗಡು, ಕೊತ್ತಂಬರಿ, ಚಂದನ, ಇವಂ ಹಿಂದೆ ಹೇಳಿದ ಹಾಗೆ ಕಷಾಯವಂ ಮಾಡಿ ಕೊಡುವುದು.

ಪಿತ್ತದಿಂದ ಹುಟ್ಟಿದ ಮೂರು ಪ್ರಕಾರದ ಬಹುಮೂತ್ರಕ್ಕೆ :—ಬಿಳಿಯ ಲೋಧ್ರ, ಲಾಮಂಚ, ಶ್ರೀಗಂಧ, ಸಾಧಾರಣವಾಗಿ ಕೊಡುವ ಕಷಾಯದಲ್ಲಿ ಮತ್ತಿಯ ತಿಗಡು, ಇಷ್ಟು ಔಷಧಿಗಳಿಂದ ಕಷಾಯವಂ ಮಾಡಿ ಕೊಡುವುದು. ನೆಲ್ಲಿಯ ಚಟ್ಟು, ಅಮರದ ಬಳ್ಳಿ, ಕಹಿಪಡವಲ, ಬೇವಿನ ತಿಗಡು, ಹಿಂದಣ ಹಾಗೆ ಕಷಾಯವಂ ಮಾಡಿ ಕೊಡುವುದು. ಲೋಧ್ರ, ಧಾತಕೀಕುಸುಮ, ಮುಡಿವಾಳ, ಅಗಿಲು, ಹಿಂದಣ ಹಾಗೆ ಕಷಾಯ.

ಪಿತ್ತದಿಂದ ಹುಟ್ಟಿದ ಬಹುಮೂತ್ರಕ್ಕೆ :—ಎಣ್ಣೆಬೇರು ಗ ೩ ತೂಕವನ್ನು ಅರೆದು ಎಣ್ಣೆಯೊಳು ಕೊಡುವುದು. ಸಿಹಿತೊಂಡೆಯ ಬೇರು ಗ ೩ ತೂಕವನ್ನು ಎಮ್ಮೆಮಜ್ಜಿಗೆ ಯಲ್ಲಿ ಕೊಡುವುದು. ಕಲಕಿಯ ತಿಗಡು ಗ ೩ ತೂಕವನ್ನು ಚೂರ್ಣವಂ ಮಾಡಿ ಹಸುವಿನ ಹಾಲಲ್ಲಿ ಕೊಡುವುದು. ತುರುವೆಯ ಎಲೆಯಂ ಗ ೩ ತೂಕವನ್ನು ಎಮ್ಮೆಯ ಮಜ್ಜಿಗೆಯಲ್ಲಿ ಕೊಡುವುದು. ಹುಣಸೆಯ ಬಿತ್ತದ ತಿಗಡು ಗ ೩ ತೂಕವನ್ನು ಹತ್ತಿಯ ಹಾಲಲ್ಲಿ ಕೊಡುವುದು. ಚೆಂಗಣಿಗಲಚಿಕ್ಕೆಯನ್ನು ಅರೆದು ಗ ೩ ತೂಕವನ್ನು ಜೇನುತುಪ್ಪದಲ್ಲಿ ಕೊಡುವುದು. ತಾವರೆ ಬಿತ್ತದ ತಿರುಳು ಗ ೩ ತೂಕವನ್ನು ಅರೆದು ಹಾಲಲ್ಲಿ ಕೊಡುವುದು. ಅತ್ತಿಯ ಬಂದಣಿಕೆಯಂ ಅರೆದು ಗ ೩ ತೂಕವಂ ಮಜ್ಜಿಗೆಯಲ್ಲಿ ಕೊಡುವುದು.

ವಾತದಿಂದ ಹುಟ್ಟಿದಂಥಾ ಬಹುಮೂತ್ರಕ್ಕೆ :—ಮಡುವಾಗಲಗೆಡ್ಡೆ, ಎಲಹುರಿಎಲೆ ಗ ೩ ತೂಕವನ್ನು ಹಾಲಲ್ಲರೆದು ಕೊಡುವುದು. ಸಾಲೆಯ ಬೀಜ ಗ ೩ ತೂಕವನ್ನು ಎಣ್ಣೆಯಲ್ಲರೆದು

ಕುಡಿಯ ಕೊಡುವುದು. ಗಂಧಕ ಗ ೩ ತೂಕವನ್ನು ಎಣ್ಣೆಯಲ್ಲರೆದು ಕೊಡುವುದು. ಶುದ್ಧವಾದ ......... ಅದರ ಕೊನರು, ಬಿಳಿಯ ಗುಂಜಿ, ಇವು ಸಮಾನವಾಗಿ ಗ ೩ ತೂಕವನ್ನು ಮಜ್ಜಿಗೆಯಲ್ಲರೆದು ಜೇನುತುಪ್ಪ ಗ ೧ ತೂಕ ಮಜ್ಜಿಗೆಯಲ್ಲರೆದು ಕುಡಿಯ ಕೊಡುವುದು. ಕೃಷ್ಣಾಭ್ರಕಸಿಂದೂರವನ್ನು ಜೇನುತುಪ್ಪ ಸಹಿತ ಸಿಹಿಮಜ್ಜಿಗೆಯಲ್ಲಿ ಕದಡಿ ಕೊಡುವುದು. ನೆಲ್ಲಿಕಾಯ ರಸದಲ್ಲಿ ಭಾವನೆಯಂ ಮಾಡಿ ಲೋಹಚೂರ್ಣವನ್ನು ನೆಲ್ಲಿಯ ರಸದಲ್ಲಿ ಕದಡಿ ಗ ೧ ತೂಕ ಜೇನುತುಪ್ಪ ಸಹಿತ ಕೊಡುವುದು. ಟಂಕಣಾದಿಯಲ್ಲಿ ಹೇಳಿದ ಹಾಗೆ ಇಡಿಸಿದ ಕಟ್ಟಿದ ಚೂರ್ಣವನ್ನು ನೆಲ್ಲಿಕಾಯ ರಸದಲ್ಲಿ ಕಲಸಿ ಗ ೧ ತೂಕ ಜೇನುತುಪ್ಪ ಸಹ ಕೊಂಬುದು. ಕರಿಬೇವಿನ ಪಂಚಾಂಗವನ್ನು ಜೇನುತುಪ್ಪ ಗ ೧ ಮಜ್ಜಿಗೆಯಲ್ಲರೆದು ಕದಡಿ ಕೊಡುವುದು. ಹಸಿಯ ನೆಲ್ಲಿಯ ಕಾಯಿ ಗ ೨ ತೂಕವನ್ನು ಅರೆದು ಗ ೫ ತೂಕ ಚಂದ್ರವ ಹಾಕಿ ಕೊಡುವುದು. ಮಜ್ಜಿಗೆಯಲ್ಲಿ ಕದಡಿ ಗ ೧ ತೂಕ ಜೇನುತುಪ್ಪ ಸಹ ಕೊಡುವುದು. ತವರದಲ್ಲಿ ಮಾಡಿದ ಸಿಂದೂರ ಗ ೧ ತೂಕವನ್ನು ಜೇನುತುಪ್ಪದಲ್ಲಿ ಕಲಸಿ ಗುಳಿಗೆಯಾಗಿ ಕೊಂಬುದು.

ಮೂತ್ರ ಬಹಳವಾಗಿ ಹೋಗುವುದಕ್ಕೆ ಚಿಕಿತ್ಸೆ :—ಅಳಲೇಕಾಯ ಚೂರ್ಣ ಗ ೩ ತೂಕವನ್ನು ಜೇನುತುಪ್ಪದಲ್ಲಿ ಕೊಡುವುದು. ಶುದ್ಧವಾದ ಕಿಟ್ಟದ ಚೂರ್ಣವನ್ನು ಗ ೩ ತೂಕವನ್ನು ಮಜ್ಜಿಗೆಯಲ್ಲಿ ಕೊಡುವುದು. ನಿರ್ದಿಷ್ಟ ಚೂರ್ಣವನ್ನು ಜೇನುತುಪ್ಪದಲ್ಲಿ ಕೊಡುವುದು.

ಆ ನಿರ್ದಿಷ್ಟ ಚೂರ್ಣವಂ ಮಾಡುವ ಪ್ರಕಾರ :—ಹಿಂದೆ ಟಂಕಣಾದಿಯಲ್ಲಿ ಹೇಳಿದ ಹಾಗೆ ಲೋಹಚೂರ್ಣವಂ ಶುದ್ಧವ ಮಾಡಿ ಆ ಲೋಹಚೂರ್ಣ, ತ್ರಿಕಟುಕ, ಚಿತ್ರಮೂಲ, ವಿಳಂಗ ಸಾರ, ತ್ರಿಫಲೆ, ಮುಸ್ತೆ, ಇವಂ ಒಂದೆರಡು ತೂಕ ಮರ್ಯಾದೆಯಲ್ಲಿ ಕೂಡಿ ಚೂರ್ಣ ಮಾಡಿ ಈ ಚೂರ್ಣಕ್ಕೆ ಸರಿಯಾಗಿ ಶುದ್ಧವಾದ ಲೋಹಚೂರ್ಣವಂ ಕೂಡಿ ಅದರಲ್ಲಿ ಎರಡು ತೂಕವನ್ನು ಜೇನುತುಪ್ಪದಲ್ಲಿ ಕಲಸಿ ಗುಳಿಗೆಯಾಗಿ ಕೊಡುವುದು. ಗುರುಗುಂಜಿಯ ಬೇರು, ಒಂದು ತೂಕವನರೆದು ಹಸುವಿನ ಹಾಲಲ್ಲಿ ಕದಡಿ ಕೊಡುವುದು. ಅವರೆಯ ಬೇರಿನ ತಿಗಡು ಗ ೧॥ ತೂಕ, ಎಳ್ಳು ಹಿಂಡಿ ಗ ೧॥ ತೂಕ, ಈ ಎರಡು ಔಷಧಿಯನ್ನು ಅರೆದು ಜೇನುತುಪ್ಪದಲ್ಲಿ ಕಲಸಿ ಗುಳಿಗೆಯಾಗಿ ಕೊಂಬುದು. ಹಿಂಡಿ ೩ ತೂಕವನ್ನು ಚೂರ್ಣಂ ಮಾಡಿ ಎಣ್ಣೆಯಲ್ಲಿ ಕಲಸಿ ಲೇಹ್ಯವಾಗಿ ಕೊಂಬುದು. ಕೊಡಸಿಗನ ಬೇರ ತಿಗಡು ೧ ಪಲವನ್ನು ೧೬ ಪಲ ನೀರಿನೊಳಗೆ ಕಾಸಿ ಲೇಹ್ಯಪಾಕದಲ್ಲಿ ಇಳುಹಿ ಹುಣಸೆಯ ಬೀಜದ ತಿಗಡು ಮೂರು ತೂಕವನ್ನು ಚೂರ್ಣವಂ ಮಾಡಿ ಹಾಕಿ ಕೊಡುವುದು. ಬಿಳಿಯ ಗುರುಗುಂಜಿಯ ಬೇರು ಗ ೧ ತೂಕವನ್ನು ಮಜ್ಜಿಗೆಯೊಳಗೆ ಅರೆದು ಜೇನುತುಪ್ಪದಲ್ಲಿ ಕಲಸಿ ಗುಳಿಗೆಯಾಗಿ ಕೊಂಬುದು. ಅರಿಸಿನದ ಚೂರ್ಣ ಗ ೧ ತೂಕ, ಅವರೇಬೀಜದ ಚೂರ್ಣ ಗ ೪ ತೂಕ, ಇದನ್ನು ಜೇನುತುಪ್ಪದಲ್ಲಿ ಕಲಸಿ ಗುಳಿಗೆಯಾಗಿ ನುಂಗಿಸುವುದು. ಹಸಿಯರಿಸಿನದ ರಸ, ನೆಲ್ಲಿಯ ರಸ, ಇವು ಸರಿಯಾಗಿ ೧ ಪಲದೊಳಗೆ ಬೆರಸಿ..............ಗ ೩ ತೂಕವಂ ಪುಡಿ ಮಾಡಿ ಕದಡಿ ಕೊಡುವುದು. ಕಿರುನೆಲ್ಲಿಯ ರಸದಲ್ಲಿ ಗ ೩ ತೂಕ, ಹಸಿಅರಿಸಿನ

ವನ್ನು ಅರೆದು ಕೊಡುವುದು. ಗಂಧಕ ಗ ೩ ತೂಕವನ್ನು ಬೆಲ್ಲದಲ್ಲಿ ಕಲಸಿ ಕೊಡುವುದು. ಒಣಗಿದ ಆಡಿನ ಹಿಕ್ಕೆಯ ಚೂರ್ಣ ಗ ೩ ತೂಕವನ್ನು ಜೇನುತುಪ್ಪದಲ್ಲಿ ಕಲಸಿ ಕೊಡುವುದು. ಮೂರು ತೂಕ ತುರುವೆಯ ಬೇರನ್ನು ತ್ರಿಫಲೆಯ ಕಷಾಯದಲ್ಲಿ ಅರೆದು ಆ ಕಷಾಯದಲ್ಲಿ ಕೊಡುವುದು. ತ್ರಿಫಲೆ ಗ ೩ ತೂಕವನ್ನು ಜೇನುತುಪ್ಪದಲ್ಲಿ ಕಲಸಿ ಕೊಡುವುದು. ಹಿಂದೆ ಕ್ಷಯ ರೋಗದಲ್ಲಿ ಹೇಳಿದ ಹಾಗೆ ಶೋಧಿಸಿದ ಕಲ್ಕ ಗ ೩ ತೂಕವನ್ನು ನೆಲ್ಲಿಯಕಾಯ ರಸದಲ್ಲಿ ಅರೆದು ಕೊಡುವುದು. ಮೇಲೋಗರವ ಮಾಡುವ ಸೀಗೆಬೇರು ೧೨ ನ್ನು ಕಷಾಯವಂ ಮಾಡಿ ಕೊಂಬುದು. ಚೇಳುಬಾಲವೆಂಬ ಗಿಡದ ಬೇರು ಗ ೧೨ ತೂಕವನ್ನು ಅರೆದು ರಸವನ್ನು ಕಷಾಯವನಿಕ್ಕಿ ಸರಿಯಾಗಿ ಕೂಡಿಕೊಂಡು ಒಂದು ಹಸಿ ಎಣ್ಣೆ ಸಹಿತ ಕೊಂಬುದು. ಅರಗು, ಹತ್ತಿಯ ಚೂರ್ಣ, ಇವು ಸಮವಾಗಿ ಗ ೩ ತೂಕವನ್ನು ಜೇನುತುಪ್ಪ, ಮಜ್ಜಿಗೆ ಸಹ ಕೂಡಿ ಕದಡಿ ಕೊಡುವುದು. ಎಲವದ ಅಗಿಲು ಗ ೩ ತೂಕವನ್ನು ಮಜ್ಜಿಗೆಯಲ್ಲಿ ಕೊಡುವುದು. ಜೇನುತುಪ್ಪ ಸಹಿತವಾಗಿ ಕೊಡುವುದು. ಬಿದಿರೆಲೆಯನ್ನು ನೆರಳಲ್ಲಿ ಒಣಗಿಸಿ ಚೂರ್ಣವಂ ಮಾಡಿ ಗ ೩ ತೂಕ ಚೂರ್ಣವನ್ನು ಮೊಸರ ನೀರಲ್ಲಿ ಕದಡಿ ಕೊಡುವುದು. ನೆಗ್ಗಿಲ ಗನ್ನೆಯ ನೆರಳಲ್ಲಿ ಒಣಗಿಸಿ ಚೂರ್ಣಂ ಮಾಡಿ ಮೊಸರ ನೀರಲ್ಲಿ ಜೇನುತುಪ್ಪ ಸಹಿತವಾಗಿ ಕೊಡುವುದು. ಬಹುಮೂತ್ರಕ್ಕೆ ನಾಳಕೇರಗುಳಿಗೆಯಂ ಕೊಡುವುದು.

ವಿರೇಚಕಕ್ಕೆ :—ಮೆಕ್ಕೆಯ ಕಾಯಂ ತಂದು ಕ್ಯೊದು ಆ ರಸವುಂ ಹಿಂಡಿಕೊಂಡು ಚೆನ್ನಾಗಿ ಮಂದವಾಗುವ ಹಾಗೆ ಕಾಯಿಸಿ ಅದನ್ನು ತೆಗೆದು ಬೇರೊಂದು ಗಡಿಗೆಗೆ ಹೊಯ್ದು ಇರಿಸಿಕೊಂಡು ಇದನ್ನು ಚಿಕ್ಕ ಮಕ್ಕಳಿಗೆ ಹೆಸರುಗಾತ್ರವನ್ನು ಮೊಲೆಹಾಲಲ್ಲಿ ಬೆಲ್ಲ ಬೆರಸಿ ಕೊಡುವುದು. ದೊಡ್ಡವರಿಗೆ ಅವರೆಯ ಗಾತ್ರವನ್ನು ಬೆಲ್ಲ, ಬಿಸಿನೀರಲ್ಲಿ ಕೊಡುವುದು. ಒಂದೆರಡು ವೇಳೆ ವಿರೇಚನವಾಗುವದು. ನಿಲ್ಲಬೇಕಾದರೆ ಪಥ್ಯ ಮಜ್ಜಿಗೆ ಓಗರ, ಹೆಸರುದಕ.

ಕೆಮ್ಮು, ಉಬ್ಬಸಕ್ಕೆ :—ನೆಲಾವರೇಬೇರು, ನೆಲಗುಳ್ಳದ ಬೇರು, ಕಿರುಕುಸಾಲೆಬೇರು, ಹಣ್ಣಿಬೇರು, ಗುಡಿಚೆಯ ಬೇರು, ಹೆಬ್ಬುಲಿ, ಕಿರುಹುಲಿಬೇರು, ವಿಷಮೂಲಿಕೆಯ ಗೆಣಸು, ಬೆಲ್ಲಗಣಿಕೆಯ ತಿಗುಡು, ಮೆಣಸಿಗೆಯ ಬೇರು, ಇಷ್ಟನ್ನೂ ಚೆನ್ನಾಗಿ ಜಜ್ಜಿ ಜೇನುತುಪ್ಪದಲ್ಲಿಡುವುದು. ಅದನ್ನು ಉದಯಕಾಲದಲ್ಲಿ ಮೆಲ್ಲುವುದು. ಕೆಮ್ಮಲು, ಉಬ್ಬಸ, ಮಾಣುವುವು. ಪಥ್ಯ ಹಾಲೋಗರ.

ಚಾತುರ್ಥಿಕಜ್ವರಕ್ಕೆ ಔಷಧಿ :—ತುತ್ತ ಹಣ ೧ ತೂಕ, ಇಲಿಪಾಷಾಣ ೧ ಹಣ ತೂಕ, ಪಚ್ಚೆ ಕರ್ಪೂರ ೧ ಹಣ ತೂಕ, ಇಷ್ಟನ್ನೂ ಕರಿಯ ಉಮ್ಮತ್ತದ ರಸದಲ್ಲಿ ಮರ್ದಿಸಿ ಗುಂಜಿಯ ಪ್ರಮಾಣ ಗುಳಿಗೆಯಂ ಮಾಡಿ ಉಮ್ಮತ್ತರಸದಲ್ಲಿ ಕೊಡುವುದು. ಹಾಲೋಗರ ಪಥ್ಯ. ಪಾದರಸ ಗ ೧ ತೂಕ, ಇಲಿಪಾಷಾಣ, ಗ ೧ ತೂಕ, ನವಸಾರ ಗ ೧ ತೂಕ, ಸೂಜಿಕಲ್ಲು ಗ ೧ ತೂಕ, ತಾಳಕ ಗ ೧ ತೂಕ, ಬೋಳ ಗ ೧ ತೂಕ, ಮಣಿಶಿಲೆ ಗ ೧ ತೂಕ, ಬೆಳಗಾರ ಗ ೧ ತೂಕ, ಇಷ್ಟನ್ನೂ ಉಮ್ಮತ್ತದ ರಸದಲ್ಲಿ ಒಂದು ಜಾವ ಮರ್ದಿಸಿ

ಗುಂಜಿಯ ಪ್ರಮಾಣ ಗುಳಿಗೆಯಂ ಮಾಡಿ ಸಕ್ಕರೆಯಲ್ಲಿ ಕೊಡುವದು. ಪಥ್ಯ ಹಾಲೋಗರ. ಬೆಲ್ಲವತ್ತ್ರದ ಬೇರಿನ ಕಡ್ಡಿ, ಶುಂಠಿ, ಮೆಣಸು, ಹಿಪ್ಪಲಿ, ಅಳಲೇಕಾಯಿ, ಹೊಂಗೆಯ ಬೀಜ, ಬೇವಿನ ಬೀಜ, ಅರಿಸಿನ, ಮರದರಿಸಿನ, ಇಷ್ಟನ್ನೂ ಸಮನಾಗಿ ತೂಗಿಕೊಂಡು ಹೋತನ ಮೂತ್ರದಲ್ಲಿ ಅರೆದು ಕುಡುಹ ಮಾಡಿ ಅಂಜನಮಕ್ಕುಂ. ನಿಂಬೇಹುಳಿಯಲ್ಲಿ ಅಂಜನವ ನಿಕ್ಕುವದು. ಅಜೀರ್ಣಕ್ಕೆ ಬಿಸಿನೀರಲ್ಲಿ ತೇದು ಕುಡಿಯ ಕೊಡುವುದು. ಗ್ರಹಶಂಕೆಗೆ ನುಗ್ಗೇಸೊಪ್ಪಿನ ರಸದಲ್ಲಿ ತೇದು ಇಕ್ಕುವುದು. ಸನ್ನಿಪಾತ, ಅರ್ಧಪಬೇನೆಗೆ, ಎಕ್ಕದಬೇರಿನ ರಸದಲ್ಲಿ ನಸ್ಯವ ಮಾಡುವುದು. ಮಂಡೆನೋವಿಗೆ ನಿಂಬೇಹುಳಿಯಲ್ಲಿ ಅಂಜನವನಿಕ್ಕುವದು.

ಕಣ್ಣುಕಪ್ಪಿಗೆ :—ಕಪ್ಪರಿ, ಕಡಲನಾಲಿಗೆ, ಪಚ್ಚೆತುತ್ತ್ರ, ಹಿಪ್ಪಲಿ, ಸೈಂಧವ, ಗೇರಕಡ್ಡಿ, ಇಷ್ಟನ್ನೂ ಹುರಿದು ವಸ್ತ್ರಗಾಳಿತವಂ ಮಾಡಿ ಕಣಿಗೆಯಲ್ಲಿ ಹಾಕಿ ಬೆಣ್ಣೆಯಲ್ಲಿ ಮರ್ದಿಸಿ ಬರೀಗಣ್ಣಿಗೆ ಪಚ್ಚೆಕರ್ಪೂರವಂ ಬೆರಸಿ ಇಕ್ಕುವದು. ನೋವಿನ ಕಣ್ಣಿಗೆ ಹಾಗೆಯೇ ಇಕ್ಕುವದು.

ಕೆಮ್ಮಿಗೆ:—ತಾಳೀಸಪತ್ರೆ ೧ ತೊಲ, ಕರ್ಕಾಟಕಶೃಂಗಿ, ಇವ ಶುದ್ಧ ಮಾಡಿ ಇರಿಸುವುದು. ಸೀಸವ ಶುದ್ಧಮಾಡಿ ಇರಿಸುವುದು. ಅದನ್ನು ಪಟಕ ಮಾಡುವುದು. ಅದನ್ನು ಜೇನು ತುಪ್ಪದಲ್ಲಿ ಕಲಸಿ ಲೇಹ್ಯವಂ ಮಾಡುವುದು. ಜಂಬ್ವಾದಿ ಗುಳಿಗೆ, ಕಾಂತಾದಿವಟಕ, ಹರಿದ್ರಾ ವಟಕ, ಶ್ವೇತಗುಂಜಾದಿವಟಕ, ಅಯೋಮೋಳಕಾದಿವಟಕ, ಶುದ್ಧರಸವಟಕ, ಇವನ್ನು ಕೊಳ್ಳುವುದು.

ಪ್ರಮೇಹಕ್ಕೆ :—ಮೇಹಾರಿಯ ಚೂರ್ಣ, ಸೀಸಾದಿ ಚೂರ್ಣ, ವರಾಹಾದಿ ಚೂರ್ಣ, ಆಯಸಾದಿ ಚೂರ್ಣ, ಬಾಳೇಹೂವಿನ ಚೂರ್ಣ, ಅಭ್ರಕಾದಿ ಚೂರ್ಣ, ವಾಲ್ಮೀಕೋದನ ಚೂರ್ಣ, ಮುಸ್ತ್ರಕಿಯ ಚೂರ್ಣ, ಇವನ್ನು ಕೊಳ್ಳುವುದು.

ಬಹುಮೂತ್ರವಾಗಿ ಇರುವಂಥವರುಗಳಿಗೆ ಕೊಡುವ ಪಥ್ಯವರ್ಗಂಗಳ ಕ್ರಮವು :—ಇಗಳ ನಾಡಿನಲ್ಲಿ ಅರವತ್ತು ದಿನಕ್ಕೆ ಬೆಳಪ ನೆಲ್ಲೋಗರ, ಕಡ್ಡೀನೆಲ್ಲೋಗರ, ಜೋಳದ ಓಗರ. ಹಾರಕದ ಓಗರ, ನವಣೆಯೋಗರ, ಬರಗಿನೋಗರ, ಸಾವೆಯೋಗರ, ಗೋಧಿಯೋಗರ, ಬಿದುರಕ್ಕಿಯೋಗರ, ಅಂತೂ ಇಷ್ಟರೊಳಗಿರುವಂಥಾ ಓಗರವನುಣ್ಣುತ್ತ ಬರುವುದು. ಆ ರೋಗದವರಿಗೆ ಸಿಹಿಯಾದ ದ್ರವ್ಯಂಗಳು ಬೇಕಾದರೆ ಬೆಲ್ಲ, ಸಕ್ಕರೆಯ ಪ್ರತಿಯಾಗಿ ಜೇನು ತುಪ್ಪವಂ ಕೊಡುತ್ತ ಬರುವುದು. ತುಪ್ಪಕ್ಕೆ ಪ್ರತಿಯಾಗಿ ಎಳ್ಳೆಣ್ಣೆಯನ್ನೂ, ಬೆಣ್ಣೆಯನ್ನೂ ಕೊಡುತ್ತ ಬರುವುದು. ಅವರಿಗೆ ಕೊಡುವಂಥಾ ಮೇಲೋಗರಗಳು—ಗಣಜಿಲೆಸೊಪ್ಪು, ಬೆಳೊಡಕಿಲ ಸೊಪ್ಪು, ಮುಷ್ಟಿಯ ಸೊಪ್ಪು, ಮಜ್ಜಿಗೆ, ಹೊನಗೊನ್ನೆ, ಧಸರಿ, ಬೇವಿನ ಹೂವು ಎಲೆ, ಬಸಲೆ, ನೆಲ್ಲಿಯ ಕಾಯಿ, ಕಹಿಯಾಗಿರುವಂಥಾ ಸೊಪ್ಪುಗಳು, ಹಾಲೆಯ ಸೊಪ್ಪು, ಪಡಲ, ಕಹಿ ಪಡಲ, ಕಿರುಗಡಸಿಗೆ, ಪುಳ್ಳಂಬುಣಸೆ, ಕಿರುಕುಸಾಲೆ, ಬಿಳಿಯ ತೊಂಡೆಯ ಸೊಪ್ಪು, ಆ ಕಾಯಿ, ಹೂವು, ಹಾಲು, ಕುಂಬಳದ ಕೊನರು, ಅಗಸೆಯ ಕಾಯಿ ಅದರ ಹೂವು, ಆ ಸೊಪ್ಪು, ಕೆಸುವಿನ ಸೊಪ್ಪು, ನರುವಲ ಸೊಪ್ಪು, ಹೆಬ್ಬಜೆಯ ಕಾಯಿ

ತಗರಿನ ಕೋಡಿನ ಹಾಗೆ ಇರುವ ಮಾತಿಯ ಕಾಯಿ, ಕೊಡಸಿಗೆಕಾಯಿ, ಬಾಳೆಯ ಕಹಿಯ ಕಾಯಿ, ಅತ್ತಿಯ ಎಳೆಯ ಕಾಯಿ, ಹಿಪ್ಪಲಿಯ ಹೂವು, ಇಷ್ಟರೊಳಗೆ ದೊರೆಯುವಂಥಾ ದ್ದನ್ನೇ ಕೊಡುತ್ತಾ ಬರುವುದು. ಇದಕ್ಕೆ ಬಿಡುವಂಥಾ ವಸ್ತುಗಳು—ತುಪ್ಪ, ಹಾಲು ಮೊಸರು, ಎಳನೀರು, ಹುಳಿ ಮೇಲೋಗರ, ಹಗಲಿನ ನಿದ್ರೆ, ಸಾಸುವೆ, ಶುಂಠಿ, ಮಾಂಸಾ ಹಾರಗಳು, ಹುಳಿ, ಸ್ತ್ರೀಸಂಗ, ಅಕ್ಕಿಯಲ್ಲಿ ಮಾಡಿದಂಥಾ ಭಕ್ಷ್ಯಂಗಳು, ಬದನೇಕಾಯಿ, ಹಲ ಸಿನ ಕಾಯಿ, ಸೈಂಧವ, ಇಂಗು, ಎಳ್ಳು, ಬೆಲ್ಲ, ಅಂತು ಇಷ್ಟೂ ವಿರೋಧಪದಾರ್ಥಂಗಳಾದ್ದ ರಿಂದ ಕೊಡಬೇಡಿ.

ಬಹುಮೂತ್ರಕ್ಕೆ ಇನ್ನೊಂದು ಪ್ರಕಾರದ ಸಿದ್ಧಾಮೃತ :—ಅಕ್ಕಿ ಎರಡು ಹಿಡಿ, ಸಬಸಿಗೆ ಒಂದು ಹಿಡಿ, ಇದನ್ನು ಅರೆದು ಬೇರೆ ಇರಿಸಿ, ಚೆನ್ನೆಗ್ಗಿಲು, ಹರಿದರೆ ಹತ್ತಿಸುವ (ಅದನ್ನು ಪರಡೆ ಎನ್ನುವರು) ಈ ಎರಡನ್ನೂ ಕಲ್ಲೊಳಗೆ ಸರಿಯಾಗಿ ಅರೆದು, ಸಬಸಿಗೆಯ ಸಮ ಒಂದು ಬೆಲ್ಲ, ಇಷ್ಟನ್ನೂ ಒಂದಾಗಿ ಕಲಸಿ ಒಲೆಯ ಮೇಲೆ ಶ್ರಾವೆಯನ್ನು ಇರಿಸಿ ಎಳ್ಳೆಣ್ಣೆ ಯನ್ನು ಎರೆದು ಈ ಔಷಧಿಯನ್ನು ಹೋಳಿಗೆಯನ್ನಾಗಿ ಮಾಡಿ ಇರಿಸುವುದು. ಇನ್ನು ಕುಡಿಯುವ ಎಣ್ಣೆಯಲ್ಲಿ ಅವರೇಬಿತ್ತ್ತದ ಚೂರ್ಣ, ಮರುಳೆಣ್ಣೆ ಒಂದು ಬಳ್ಳ, ಇದನ್ನು ಹಾಕಿ ಒಂದುಕ್ಕು ಬರುವ ಹಾಗೆ ಕಾಯಿಸಿ ಇರಿಸುವುದು. ಉದಯಕಾಲದಲ್ಲಿ ಅಟ್ಟು ಇದ್ದ ಹೋಳಿಗೆಯನ್ನು ಮೆದ್ದು ಈ ಎಣ್ಣೆಯಲ್ಲಿ ಒಂದು ಸೊಲ್ಲಿಗೆ ಎಣ್ಣೆಯನ್ನು ಕುಡಿಯುವುದು. ನೆಲ್ಲಬೋನ ಹಿಡಿಯ ಹಾಕಿದ ಅವರೆಯ ಸೊಪ್ಪು, ಮಜ್ಜಿಗೆ ಎಣ್ಣೆಯಲ್ಲಿ ಪಥ್ಯ.

ಬಹುಮೂತ್ರದವರಿಗೆ ಹತ್ತು ಬಗೆ ಅವಸ್ಥೆ ತೋರುವುದು. ಅವರ ಶರೀರ ಧಾತುವಂ ನೋಡಿ ಅವರಿಗೆ ನಡೆಯುವ ಅವಸ್ಥೆಯನ್ನು ಅರಿಯುವ ಪ್ರಕಾರವು :— ಬಹುಮೂತ್ರಕ್ಕೆ ಮೊದಲು ಹುಟ್ಟುವ ಉಪದ್ರವ ಮೂತ್ರಚೀಲವು ಗುದದ ಮೇಢ್ರದ ಮಧ್ಯದಲ್ಲಿ ಇಹುದು, ಆ ಸ್ಥಾನವು ಬಿರಿಯುವ ಹಾಗೆ ಇಹುದು. ಶೂಲೆ ಹುಟ್ಟು ವದು. ಎರಡನೆಯ ಅವಸ್ಥೆಯಲ್ಲಿ ಮೂತ್ರವು ಬಾರದೇ ಕಾಡುವುದು. ಮೂರನೇ ಅವಸ್ಥೆ ಯಲ್ಲಿ ಶರೀರವೆಲ್ಲ ನೋಯುವುದು. ನಾಲ್ಕನೆಯ ಅವಸ್ಥೆಯಲ್ಲಿ ಸನ್ನಿಪಾತಕವು ತೋರುವದು. ಐದನೆಯ ಅವಸ್ಥೆಯಲ್ಲಿ ಶರೀರದಲ್ಲಿ ಇದ್ದಂಥಾ ಸಪ್ತಧಾತುಗಳು ಕ್ಷಯವನ್ನೈದುವುವು. ಆರನೆಯ ಅವಸ್ಥೆಯಲ್ಲಿ ಮರವೆಯಹುದು. ಉದಕದ ತೃಷೆ ಘನವಹುದು. ಏಳನೆಯ ಅವಸ್ಥೆಯಲ್ಲಿ ಎಂಥಾ ವಸ್ತುಗಳೂ ಅರುಚಿಯಹುವು. ಜಾಡ್ಯವಹುದು. ಎಂಟನೆಯ ಅವಸ್ಥೆಯಲ್ಲಿ ಮೈಕೈಯಲ್ಲಿ ಬಹು ಕುರುಗಳು ಹುಟ್ಟುವುವು. ಒಂಭತ್ತನೇ ಅವಸ್ಥೆ ಯಲ್ಲಿ ಅತಿಸಾರ ಹುಟ್ಟುವುದು. ಹತ್ತನೆಯ ಅವಸ್ಥೆಯಲ್ಲಿ ಎಲ್ಲಾ ಕರಣಗಳು ಚೈತನ್ಯ ಕೆಡುವುವು.[1]

---

[1] ಇದರ ನಂತರ ತಾಲಪತ್ರಕೋಶದಲ್ಲಿ ಹೀಗಿದೆ :—

ವೈದ್ಯದ ಪುಸ್ತಕಕ್ಕೆ ಮಂಗಳ ಮಹಾ ಶ್ರೀ ಶ್ರೀ. ವೈದ್ಯದ ಪುಸ್ತಕಕ್ಕೆ ಶುಭಶೋಭನ ಮಸ್ತು, ಆಯುರಾರೋಗ್ಯ ಐಶ್ವರ್ಯಮಸ್ತು.

ವಾತಕ್ಕೆ :—ಕಲ್ಲುಪ್ಪು, ಸಂವತ್ಸರ ಲವಣ, ಸೈಂಧವ ಲವಣ ಎಂಬಿವಂ, ಯವಕ್ಷಾರಂ, ಅಜಾಮೋದ, ಓಮ, ಹಿಪ್ಪಲಿಯುಂ, ಅಳಲೇಕಾಯುಂ, ಶುಂಠಿಯಂ, ಚಿತ್ರಮೂಲವಂ, ಇಂಗುಂ, ವಿಳಂಗಾದಿ, ಬಿಳಲಕ್ಕಿಯುಂ, ಎಂಬಿವಂ ಸಮಾನಂಗಳಾಗಿ ಕೊಡುಗೆ. ಇವುಗಳ ಚೂರ್ಣಂಗಳಂ ಸಮಭಾಗಂ ಕೊಂಡು ತುಪ್ಪ ಬೆರಸುವದಕ್ಕೆ ಮೊದಲು ಐದುತೂಕಗಳೊಳಗೆ ಕಲಸಿ ಕೊಡಲು ಅಜೀರ್ಣವಾತಂಗಳಂ, ಮೂಲವ್ಯಾಧಿಯಂ, ಅದರ ಮೊಳೆಯಂ, ಗುಲ್ಮವಾತಮಂ, ವಾತಗುಲ್ಮಮಂ, ವಿಷೂಚಿಕಾ, ಕಟನೋವಂ, ಕಾಮಾಲೆಯಂ, ಪಾಂಡುರೋಗಮಂ, ಊರ್ಧ್ವಶ್ವಾಸಮಂ, ಕಾಸಕೆಮ್ಮುಂ, ಇವೆಲ್ಲವಂ ಕೆಡಿಸುಗುಂ. ಪ್ರಯೋಗಿಸಲ್ಪಟ್ಟ ಶುಂಠಿ, ಹಿಪ್ಪಲಿ, ಮೆಣಸು, ಓಮ, ಸೈಂಧವ, ಕರಿಯ ಜೀರಿಗೆ, ಬಿಳಿಯ ಜೀರಿಗೆ, ಎಂಬಿವಂ ಸಮಾನಂಗೊಂಡು ಇವುಗಳ ಎಂಟರಲ್ಲೊಂದುಭಾಗ ಇಂಗನ್ನೂ ಮೊದಲು ತುತ್ತಿನಲ್ಲಿ ಉಣ್ಣಲು ತುಪ್ಪದೊಳ್ಕಲಸಿ ಇಟ್ಟ ಚೂರ್ಣವು ಮೇಹಂಗ್ನಿಯನ್ನು ಪ್ರಜ್ವಲಿಸುವಂತೆ ಮಾಡುವುದು. ವಾತಗುಲ್ಮಂಗಳ ಕೆಡಿಸುವುದು.

ಶ್ಲೇಷ್ಮಕ್ಕೆ :—ಚವ್ಯಮಂ, ಅಮರದವಳ್ಳಿಯಂ, ಹುಳಿಯಂ, ಶುಂಠಿ, ಹಿಪ್ಪಲಿ, ಮೆಣಸು, ಹಳೆಯ ಹುಣಸೆಯ ಹಣ್ಣು, ತಾಳೀಸಪತ್ರೆ, ಜೀರಿಗೆಯಂ, ತವಕ್ಷೀರಮಂ, ಚಿತ್ರಮೂಲ, ಎಂಬಿವುಗಳಂ ಸಮಭಾಗಮಾದಮವುಗಳಂ ಚೂರ್ಣವಾಗಿ ಪುಡಿ ಮಾಡಿ ಬೆಲ್ಲದೊಳು ಕಲಸಿದುದಂ, ಏಲಕ್ಕಿ, ಲವಂಗ, ನಾಗಕೇಸರಿ ಎಂಬ ತ್ರಿಸುಗಂಧದೊಳು ಕೂಡಿದುದಂ ಸೇವಿಸಲು ಸ್ವರಂ ಕೆಟ್ಟಿರುವುದಂ, ಪೀನಸ, ನೆಗಡಿ, ಶ್ಲೇಷ್ಮ, ಅರೋಚಕಮಂ ಪರಿಹರಿಸುವುದಕ್ಕೆ ಪೊಗಳಲ್ಪಟ್ಟುದು.

ಅಜೀರ್ಣಕ್ಕೆ :—ಬೆಲ್ಲದೊಡನೆ ಶುಂಠಿಯಂ ಅಥವಾ ಮೇಣು ಬೆಲ್ಲದೊಡನೆ ಹಿಪ್ಪಲಿಯನ್ನು ಮೇಣು, ಬೆಲ್ಲದೊಡನ ಅಳಲೇಕಾಯಂ ಮೂರನೆಯದಿದು, ಇದು ಮಾತ್ರವಲ್ಲದೆ ಬೆಲ್ಲದೊಡನೆ ದಾಳಿಂಬದ ಹಣ್ಣನ್ನಾದರೂ ಮೆಲ್ಲಲು ಆಮದೊಳಂ, ಅಜೀರ್ಣದೊಳಂ, ಮೂಲವ್ಯಾಧಿಗಳೊಳಂ, ಮಲಮೂತ್ರಂಗಳು ಪೋಗದಲ್ಲಿಯುಂ ಎಲ್ಲಾ ಕಾಲದಲ್ಲೂ ಹಿತಮಪ್ಪುದು.

ಕಾಸಕ್ಕೆ :—ಅಳಲೇಕಾಯಿ, ಶುಂಠಿ, ಭದ್ರಮುಸ್ತೆ, ಎಂಬಿವುಗಳ ಚೂರ್ಣವ ಬೆಲ್ಲದೊಡನೆ ಗುಳಿಗೆಗಳಂ ಮಾಡುವುದು, ಕಾಸ ಮಾಣಿಸುಗುಂ. .. ... .....ಒಡನಿದ್ದರೆ ಇದು ಊರ್ಧ್ವಶ್ವಾಸಮಂ ಹೆಚ್ಚಿದುದಲ್ಲಿ ತಪ್ಪಿ ಕಾಸಕೆಮ್ಮನು ಕೆಡಿಸುಗುಂ.

ಜ್ವರಕ್ಕೆ :—ಮಣಿಸಿಲೆ, ಹಿಪ್ಪಲಿ, ಶುಂಠಿ, ಮೆಣಸು, ಎಂಬಿವುಗಳ ಚೂರ್ಣವಾದ ಪುಡಿಯಂ ಬೇಲದ ಹಣ್ಣಿನ ರಸದೊಡನೆ ಕೂಡಿ ಸಮಾನಮಪ್ಪ ನೆಲಅರಳ ಪುಡಿಯನ್ನು ಜೇನುತುಪ್ಪದಲ್ಲಿ ಕಲಸಿ ನೆಕ್ಕಲು ಛಳಿ, ಹೆಚ್ಚಾದ ಜ್ವರದರ್ತಿಯಂ, ಹಲವು ಸೂಲಗಳಂ ಕೆಡಿಸುಗುಂ. ಆಲದ ಬೀಳಲು, ಕೊನರು, ಜೇನುತುಪ್ಪ, ನೈದಿಲಗೆಡ್ಡೆ, ನೆಲಅರಳ ಪುಡಿ, ಎಂಬಿವಂ ಸಮಾನಂಗೊಂಡು ಗುಳಿಗೆಯಂ ಮಾಡುಗೆ. ಸುಸಂಹಿತಾ, ಲವಂಗ, ಏಲಕ್ಕಿ, ಪತ್ರಕ, ನಾಗಕೇಸರ, ಎಂಬೀ ಚಾತುರ್ಜಾತಕದ ಪುಡಿಯಂ ಪ್ರತಿಪಾಕವನಿಕ್ಕುಗೆ. ಆ ಗುಳಿಗೆಯಂ ಬಾಯೊಳಗೆ ಧರಿಸಲ್ಪಟ್ಟದ್ದು ಹೆಚ್ಚಿದ ಸಜ್ವರಂ, ಅಜ್ವರ ಸಹಿತಂ ನೀರಡಿಕೆಯಂ ಕೆಡಿಸುಗುಂ. ಗರಿಕೆಯ

ಹುಲ್ಲಿನ ರಸವು, ದಾಳಿಂಬದ ಹೂವಿನ ರಸವು ಆದರೂ, ಹಲವುಸೂಳು, ಮೂಗು ನೋಯುವುದಕ್ಕೂ, ರಕ್ತಧಾರೆ ನಿಂತು ಸುರಿವುದಕ್ಕೂ ನಸ್ಯಕ್ಕೆ ಮೊಲೆಹಾಲೊಡನೆಯಾದರೂ ಆಲದ ತಿಗಡಿನ ರಸದಿಂದಾದರೂ ನಸ್ಯವಂ ಮಾಡುವುದು. ನಸ್ಯವಂ ಮಾಡಿದ ಬಳಿಕ ಹೆಸರಿನ ಕಟ್ಟು, ತೊಂಡೇಕಾಯಂ ಮೇಲೋಗರವಂ ಮಾಡಿ ಭೋಜನವಂ ಮಾಡುವುದು. ಶೀತೋದಕ ಸ್ನಾನವಂ ಮಾಡುವುದು. ಲವಣ ವರ್ಜಿತವಾಗಿ ಪಥ್ಯವಂ ಕೊಂಬುದು. ಮತ್ತೆ ನೊಣಗಳ ವಿಷ್ಟೆಯನ್ನು ನಸ್ಯವಂ ಗೈಯ್ಯೆ ಬಿಕ್ಕಲು ಬರುವುದನ್ನು ನಿಲ್ಲಿಸುವುದು.

ಕುಷ್ಠಕ್ಕೆ :—

"ಅರ್ಕಕ್ಷೀರಂ ಸ್ನುಹಿಕ್ಷೀರಂ ಶೃಂಗವೇರಂ ಮನಶ್ಶಿಲಂ ।
ಆರ್ದ್ರಕುಷ್ಠಂ ಚ ದದ್ರುಂ ಚ ಲೇಪಮಾತ್ರೇಣ ನಾಶಯೇತ್ ॥"

ಎಕ್ಕದಹಾಲು, ಎಲೆಕಳ್ಳಿಯ ಹಾಲು, ಶುಂಠಿ, ಮಣಿಶಿಲೆ, ಎಂಬಿವನ್ನು ಅಂಬಿಲದಲ್ಲಿ ಅರೆದು ಪೂಸೆ ದದ್ರುಗಳನ್ನೂ ತೊನ್ನನ್ನೂ ಕೆಡಿಸುವುದು. ಹೆದ್ದುರಿಯನ್ನು ಪೂಸಲಾ ಕ್ಷಣವೇ ಕೆಡಿಸುವುದು. ನೆಲ್ಲಿಯ ಕಾಯಿಯ ರಸ, ಸಜ್ಜರಸ, ಎಂಬಿವಂ ಚೆನ್ನಾಗಿ ಅಟ್ಟು ಅಂಬಿಲದ ಹಿಟ್ಟನ್ನು ಅಂಬಿಲದೊಳ್ಕಲಸಿ ಪಟೋದ್ವರ್ತನಂ ಮಾಡಿ ಪೂಸಲು ಮುನ್ನಾದ ಜಬ್ಬುಗಳನ್ನು ಕೆಡಿಸುವುದು. ಮರಳಿ ಮತ್ತೊಂದು ತೆರನಾದ ಜಬ್ಬುಗಳೂ ಆಗವು. ಗರಿಕೆ, ಅಳಲೆಯ ಕಾಯಿ, ಸೈಂಧವ, ತಗಚಿ, ಅಚ್ಚಿಗೆ, ಇವನ್ನು ಅಂಬಿಲದಲ್ಲಾಗಲೀ ಮಜ್ಜಿಗೆಯೊಳಗಾಗಲೀ ಅರೆದು ಮೂರುಬಾರಿ ಪೂಸಿದರೆ ಬಹಳವಾಗಿ ಬಲಿತಿದ್ದ ದದ್ರು ತಿಮಿರಂಗಳೆಲ್ಲವಂ ಕೆಡಿಸುವದು. ಏಲಕ್ಕಿ, ಚಿತ್ರಮೂಲ, ಗರುಗ, ಎಕ್ಕ, ಕೊಡಸಿಗೆಯ ತಿಗಡು, ಇವುಗಳ ಕಷಾಯದೊಳು, ಎಕ್ಕ, ಕಳ್ಳಿಯ ಹಾಲನ್ನರೆದು, ಪಂಚಲವಣಂ ಬೆರಸಿ, ಅದನ್ನು ಆಡು, ಹಸು, ಕತ್ತೆ, ಕುದುರೆ, ಇವುಗಳ ಮೂತ್ರದೊಳು ಹಾಕಿ ಎಣ್ಣೆಯನ್ನರೆದು ತೈಲವನಟ್ಟು ಪೂಸಿದರೆ ರಕ್ತಮಂಡಲ, ಕುಷ್ಠ, ದದ್ರು, ತೊನ್ನು, ಮುಂತಾದ ದುಷ್ಟವ್ರಣಗಳು, ಕರಕು, ಇವೆಲ್ಲವನ್ನೂ ಕೆಡಿಸುಗುಂ. ಸೈಂಧವ, ಗುಗ್ಗುಳ, ಧೂಪ, ರಸಾಂಜನ, ಊರ್ಣನಾಭ, ಎಂಬಿವುಗಳಂ ಸಮಭಾಗಂ ಕೊಂಡು ಸಾಸುವೆಯಂ ಎಣ್ಣೆಯೊಳು ಕೂಡಿದುದರಿಂದ ಚೆನ್ನಾಗಿ ಅಡಲು ಅದರಿಂದ ಕರಕು, ರಸಿಗೆ ಸುರಿವದುಂ, ಹುಳುಗಳಂ, ಒಂದುಬ ರಿ ಅಭ್ಯಂಜನವಂ ಮಾಡಿದುದರಿಂದ ಕೆಡಿಸುಗುಂ. ವಿಸರ್ಪ ಮೊದಲಾದ ಕುಷ್ಠದ ಬಲಮಂ ಕೆಡಿಸುವುದು. ಸಂವತ್ಸರ ಲವಣ, ಶುಂಠಿ, ............ಕುರುಡಿಗೆ, ಅಗರು, ಅರಿಸಿನ, ಮಂಜಷ್ಠಂ, ಅಷ್ಟಮಧುಕ, ಎಂಬಿವಂ ಸಮಾನಂಗೊಂಡು ಅದರಿಂದ ಎಣ್ಣೆಯನಡುಗೆ. ಆರುಮಡಿ ಮಜ್ಜಿಗೆಯಂ ಬೆರಸಿ ಅಟ್ಟು ಆ ಎಣ್ಣೆಯನ್ನು ಪೂಸುವುದರಿಂದ ಶೀತಜ್ವರ, ಮೋಹಜ್ವರ, ಇವುಗಳು ಮಾಣುವುವು. ಶುಂಠಿಯಂ ಸೈಂಧವದುಪ್ಪಿನಲ್ಲಿ ಬಿಸಿನೀರಿಂ ಕುಡಿಸುಗೆ. ಆ ತುಪ್ಪವಂ ಅಮರದವಳ್ಳಿ, ಆಡುಸೋಗೆ, ನೆಲಗುಳ್ಳ, ಇವುಗಳ ಕಷಾಯದಿಂದ ಸಿದ್ಧಂ ಕುಡಿಯಲ್ಪಟ್ಟದ್ದು ಪೂರ್ಣಜ್ವರ, ಹಲವುಕಾಲದ ಜ್ವರ, ಕೆಮ್ಮು, ಶೂಲೆ, ಊರ್ಧ್ವತೃಷೆ, ಮಂದಾಗ್ನಿ, ಗ್ರಹಣಿ, ಸಂಗ್ರಹಣಿ, ಈ ವ್ಯಾಧಿಗಳೊಳು ಹಿತಮಪ್ಪುದು.

ಕಣ್ಣುಬೇನೆಗೆ :—ಸಕ್ಕರೆ, ಕುಂಕುಮ, ಇವೆರಡಂ ತುಪ್ಪದೊಳಟ್ಟು ನಸ್ಯಂಗೈಯ್ಯೆ ವಾತದಿಂ ರಕ್ತದಿಂ ಹುಟ್ಟಿದ ಬೇನೆಯೊಳು ಹುಬ್ಬಿನ, ಹಣೆಯ, ಕಣ್ಣಿನ, ಕಿವಿಯ, ಅರೆದಲೆಯ ಬೇನೆಗೆ, ದಿನ ಹೆಚ್ಚುಕಡಿಮೆ ಹುಟ್ಟಿದ ರೋಗವ್ರಾತಂಗಳಿಗೆ ಒಳ್ಳೆಯದು. ಅಳಲೆಯ ಕಾಯಿ, ತಾರೇಕಾಯಿ, ನೆಲ್ಲಿಯ ಕಾಯಿ, ಎಂಬೀಕಾಯಿಗಳ ನಡುವಿನ ಬೀಜಂಗಳಂ ಕೊಂಡು ಮೂರನ್ನೂ ಒಂದೊಂದು ಭಾಗ ಕ್ರಮದಿಂ ತೂಗಿಕೊಂಡು ಅಷ್ಟಮಧುಕದ ಕಷಾಯದಲ್ಲಿ ಅರೆದು ಬತ್ತಿಯಂ ಮಾಡುವುದು. ಆ ಬತ್ತಿಯಂ ನೆರಳಲ್ಲಿ ಒಣಗಿಸಿ ಆ ಕುಡುಹಂ ನೀರೊಳು ತೇದು ಹಚ್ಚುವುದು. ಕಣ್ಣನೀರು ಹೆಚ್ಚಿದುದುಂ ಕಣ್ಣುಬೇನೆಯುಂ ಮಾಣ್ಗುಂ. ಕಾಷ್ಠ ಮತಿಯಾಗಿ ಮಸಗದುದಂ, ಅಳಲೇಕಾಯಿ, ಸೈಂಧವ, ರಸಾಂಜನ, ಜಜ್ಜುಕಲ್ಲು, ಎಂಬಿವಂ ಸಮಾನಂಗೊಂಡು ತಿಳಿನೀರೊಳು ಸಣ್ಣಗೆ ಅರೆದು ಹೊಂಗಣ ರೆಪ್ಪೆಗೆ ಪೂಸುವುದು. ಕಣ್ಣಲ್ಲಿ ಮೂಡುವ ಎಲ್ಲಾತರದ ಕಣ್ಣುಬೇನೆಗಳಂ ಕೆಡಿಸುಗುಂ. ಈ ಪ್ರಯೋಗವು ಸೈಂಧವದೊಳು ಕೂಡಿದ ಲೋಧ್ರವುಂ ಅವಾಂತರದಲ್ಲಿ ಹಸುವಿನ ತುಪ್ಪದೊಳು ಕಲಸಿದುದಂ ಒಂದೊಂದು ಹನಿಯಾಗಿ ಇರುಳಲ್ಲಿ ಒತ್ತುತಿರ್ಪುದು. ಕಣ್ಣಿಗೆ ಈ ರೀತಿ ಮಾಡುವುದು. ತಿಮಿರಮುಂ, ಅತಿ ಯಾದ ಬೇನೆಯಂ ಕೆಡಿಸುಗುಂ. ಆರ್ಜುನಕೆಂಪಂ, ಸಕ್ಕರೆಯೊಳ್ಕೂಡಿದ ಸಮುದ್ರಫೇನಂ ನೊಲೆಹಾಲೊಳ್ಕಲಸಿ ಹಚ್ಚಲು ಇರುಳುಕಣ್ಣು, ಕಣ್ಣುಕಾಣಬಾರದುದಂ ಕೆಡಿಸುಗುಂ. ಹಸು ವಿನ ಸಗಣಿಯ ರಸದೊಳು ಹಚ್ಚುಗೆ. ಹಿಪ್ಪಲಿರಸಾಂಜನ, ತ್ರಿಕಟುಕದೊಳ್ಕೂಡಿದುದಂ ಆಡಿನ ಹಾಲೋಳ್ಕಲ್ಕವಂ ಮಾಡಿ ಹಚ್ಚುಗೆ, ಕೆಡಿಸುಗುಂ. ಕೊಳೆತು ಬಂದ ಸುರಿವ ಕೀವಂ ಕೆಡಿಸುಗುಂ. ......ಹಿಮಾಕ್ಷಿಕಂ, ಮಧುನಾಚ=ಜೇನುತುಪ್ಪದಿಂ, ಹಚ್ಚಲು ಕಣ್ಣುಹೂವು ಮಾಣುವುದು. ............ರಸಾಂಜನವಂ, ಶ್ರೀಖಂಡಮುಂ, ಸಮುದ್ರಫೇನಮುಂ, ಸಜ್ಜ ರಸಮುಂ, ಸೈಂಧ ವಮುಂ, ಸ್ವರ್ಣಗೈರಿಕಮುಂ, ಮಣಿಶಿಲೆ, ಮೆಣಸು, ಎಂಬಿವಂ ಸಮಾನಂಗೊಂಡು ಆಡಿನ ಹಾಲಲ್ಲರೆದು ಜೇನುತುಪ್ಪದಿ ಕಲ್ಕವಂ ಮಾಡಿ ಇರಿಸಿ ಎರಡು ಹೊತ್ತೂ ಕಣ್ಣಿಗೆ ಹಚ್ಚುಗೆ, ಅಂಧಕಾರ, ಪಟಲಾರ್ಬುದ, ಮೊದಲಾಗಿ ಇವೆಲ್ಲ ಒಳಗಣ ಕೂಟಂಗಳನೆಲ್ಲವಂ ಕೆಡಿಸುಗುಂ. ಭದ್ರಮುಸ್ತೆ, ಲಾಮಂಚ, ಕಬ್ಬಿಣದ ಪುಡಿ, ಯವೆ, ಮೆಣಸು, ಸೈಂಧವಂ, ಜಲಗೋಟಿಯಂ, ಮರದರಿಸಿನಮುಂ, ತುತ್ತಮುಂ, ಶಂಖದಮುರುಡಂ, ಸಮುದ್ರಫೇನಮುಂ, ಜಟಾಮಾಂಸಿಯಂ, ಹಿರಿಯಸುಗಂಧಿ, ನೀಲಾಂಜನ, ಎಂಬಿವಂ ಸಮಾನಂಗೊಂಡು ಪುಡಿಮಾಡಿ ಕಬ್ಬಿಣದ ಭಾಜನದೊಳು ಇರಿಸೆ ಪ್ರಶಸ್ತವೆಂದು ಪೊಗಳಲ್ಪಟ್ಟಿರುವುದು. ತಿಮಿರ, ಆಸನದೊಳ ತಿಮಿ ರಮುಂ, ಕೀಳುಗಣ್ಣ ದೋಷಂಗಳಂ, ಹಕ್ಕುಗಟ್ಟುವ ಕಣ್ಣದೋಷಂಗಳು ಇವು ಮೊದಲಾದ ಲಾದ ಕಣ್ಣುದೋಷಂಗಳಂ ಕೆಡಿಸುಗುಂ. ಅಷ್ಟಮಧುಕಮುಂ, ನೈದಿಲಕೇಸರ, ಸಮುದ್ರ ಫೇನಮುಂ, ಲವಂಗದ ಝುಲ್ಲಿಯಂ, ಕಬ್ಬಿಣಮಂ, ಗೋರೋಚನಮಂ, ಜಟಾಮಾಂಸಿ, ಶ್ರೀಗಂಧ, ಶಂಖನಾಭಿಯಂ, ಕಮಲಪತ್ರಮುಂ, ಜಜ್ಜುಕಲ್ಲಂ, ತಾಳೀಸಪತ್ರಮುಂ, ಪೃಷ್ಠಾಂ ಜನಂ, ಇವಂ ಪುಡಿಮಾಡಿ ಸಮಾನಭಾಗಂಗೊಂಡು ಮಾಡಿದ ಅಂಜನಂ, ಇದು ಪೊಗಳಲ್ಪಟ್ಟ ಔಷಧಿ. ಇದರಿಂ ಪಟಲಕಣ್ಣುಗಳು, ಕ್ರೂರವಾದ ಕಣ್ಣುಬೇನೆಯಾಗಿರುವುದು, ನೀರು ಸುರಿವದು, ನೆತ್ತರೊಳಾದ ಬೇನೆಯು, ಅರಿಬೆಳೆದ ಕಣ್ಣು, ಕಣ್ಣೊಳು ಹುಟ್ಟಿದ ಹೂವು,

ಮೊದಲಾದುವಂ ಕೆಡಿಸುಗುಂ. ಇದಕ್ಕೆ ಕಷಾಯಂ—ಭದ್ರಮುಸ್ತೆಯೊಡಗೂಡಿದ ಅತಿಬಜೆಯಂ, ದೇವದಾರು, ಕೊಡಸಿಗನ ಬೀಜ, ಅಗಳುಶುಂಠಿ, ಕಟುಕರೋಹಿಣಿ, ಎಂಬಿವಂ ಸಮಾನಂಗೊಂಡು ಗೋಮೂತ್ರದೊಳು ಅಟ್ಟು ಜೇನುತುಪ್ಪದಿಂ ಕೂಡಿದುದಂ ಕುಡಿಯಲ್ಪಡುಗಂ.

[1] [ಕುಷ್ಠಂ ದಾರ್ವೀ ಲೊಧ್ರಮಬ್ದಂ ಸಮಙ್ಗಾ
ಪಾಠಾ ತಿಕ್ತಾ ತೇಜನೀ ಪೀತಿಕಾ ಚ ।
ಚೂರ್ಣಂ ಶಸ್ತಂ ಘರ್ಷಣೇ ತದ್ದ್ವಿಜಾನಾಂ
ರಕ್ತಸ್ರಾವಂ ಹನ್ತಿ ಕಂಡೂರುಜಂ ಚ ॥

ಕುಷ್ಠಂ=ಕೋಷ್ಟಮಂ, ದಾರ್ವೀ=ಮರದರಿಸಿನಮಂ, ಲೋಧ್ರಂ=ಲೋಧ್ರಮಂ, ಅಬ್ದಂ=ಭದ್ರಮುಸ್ತೆ, ಸಮಂಗಾ=ಮುಟ್ಟಿದರೆ ಮುನಿವಂ, ಪಾಠಾ=ಅಗುಳುಶುಂಠಿ, ತಿಕ್ತಾ=ಕಟುಕರೋಹಿಣಿ, ತೇಜನೀ=ಅರಿಸಿನ, ಪೀತಿಕಾ ಚ=ಸ್ವರ್ಣದರಿಯಂ, ಎಂಬಿವುಗಳಂ, ಚೂರ್ಣಂ=ಚೂರ್ಣದಂತೆ ಪುಡಿಮಾಡೆ, ಶಸ್ತಂ=ಪ್ರಶಸ್ತವೆಂದು ಹೇಳಲ್ಪಟ್ಟಿರುವುದು. ಘರ್ಷಣೇ=ಒರಸುವುದು, ದ್ವಿಜಾನಾಂ=ಹಲ್ಲುಗಳ, ರಕ್ತಸ್ರಾವಂ=ನೆತ್ತರು ಸುರಿಯುವದು, ಕಂಡೂರುಜಂ=ಬೇನೆಯಂ, ಹಂತಿ=ಕೆಡಿಸುಗುಂ.

[2] ಖಾರೀಂ=ಅಂಬಿಲವಂ, ಶುಕ್ತಿ=ಮುತ್ತಿನಚಿಪ್ಪಿನ ಪುಡಿಯಂ, ಆರ್ದ್ರಕಂ=ಶುಂಠಿಯ ಸಮಂ, ಮಾತುಲುಂಗಂ=ಮಾದಲದ ಪುಡಿಯಂ, ಮಾಷಾರಸ್ಯೈಃ=ಉದ್ದುರಸ, ಎಂಬಿವುಗಳಿಂದ ಗುಗ್ಗುಳಮಂ, ಸೈಂಧವಮಂ, ಎಂಬಿವುಗಳಿಂದ ಪಚನಂ ಕೃತ್ವಾ=ಅಟ್ಟುಟ, ಅದಂ ಮತ್ತೆ, ತೈಲಂ=ಎಣ್ಣೆಯಂ, ಕಟುಕ, ಸಾಸುವೆಯ ಚೂರ್ಣಮಂ, ನಿಶಾ ಚ=ರಾತ್ರಿಯೊಳು, ಅರೆವುದು. ಕರ್ಣರುಜಪ್ರಶಾಂತ್ಯೈ=ಕಿವಿಯ ಬೇನೆಗಳನ್ನು ಉಪಶಮನ ಮಾಡುವುದಕ್ಕೆ ಕರಣಮಾದೀತು.

[3] ಆಡುಸೋಗೆ, ನಿಂಬ=ಬೇವು, ಪಟೋಲೀ=ಕಹಿಪಡವಲ, ಪರ್ಪಟ=ಪರ್ಪಾಷ್ಟಕಮಂ, ಫಲಂ=ತ್ರಿಫಲೆಯಂ, ಶ್ರೀವೇಷ್ಟಿತಮಂ, ಚವ್ಯಮಂ, ದಾರ್ವೀ=ಮರದರಿ

1 ಈ ಶ್ಲೋಕವು ಮೂಲಕೋಶದಲ್ಲಿ ಇಲ್ಲ. ಯೋಗರತ್ನಾಕರ, ಭಾಗ ೨, ಪುಟ ೫೨೪ ರಿಂದ ಉದ್ಧೃತವಾಗಿದೆ.

2 ವ್ಯಾಖ್ಯಾನದ ಆಧಾರದಿಂದ ಶ್ಲೋಕವು ಹೀಗಿರಬಹುದೆಂದು ಊಹಿಸಲ್ಪಟ್ಟಿದೆ:—
ಖಾರೀಂ ಚ ಶುಕ್ತ್ಯಾರ್ದ್ರಕಮಾತುಲುಂಗಂ
ಮಾಷಾರಸ್ಯೆ ರ್ಗುಗ್ಗುಳ ಸೈಂಧವಂ ಚ ।
ಪಕ್ತ್ವಾ ಚ ತೈಲಂ ಕಟುಸರ್ಷಪಾಣಾಂ
ಚೂರ್ಣಂ ನಿಶಾ ಕರ್ಣರುಜಪ್ರಶಾಂತ್ಯೈ ॥

3 ವ್ಯಾಖ್ಯಾನಕ್ಕನುಗುಣವಾಗಿ ಕೆಳಗಿನ ಶ್ಲೋಕವು ಊಹಿಸಲ್ಪಟ್ಟಿದೆ :—
ಸಿಂಹೀನಿಂಬಪಟೋಲಿಪರ್ಪಟಫಲಂ ವೇಷ್ಟಶ್ಚವಿದಾರ್ವಿಕ—
ಪ್ಯಬ್ದಂ ತಿಕ್ತಮುಶೀರಯಾಸತ್ರ್ಯೈಪಣತ್ರಾಯನ್ತಿಕಾಚಂದನೈಃ ।
ಸರ್ಪಿಃ ಸಾಧಿತಮೂರ್ಧ್ವಜೇಷು ವಿಕೃತಿಷ್ವಕ್ಷ್ಣಂ ಚ ಶೂಲಾದಿಷು
ಕುಷ್ಠೇ ಚ ಜ್ವರವಿದ್ರಧೌ ವ್ರಣರುಜೇ ಶುಕ್ಲೇಷು ಚೈವೇಷ್ಯತೇ ॥

ಸಿನಮಂ, ಅಬ್ದಂ = ಭದ್ರಮುಸ್ತೆ, ತಿಕ್ತ = ಕಟುಕರೋಹಿಣಿ, ಉಶೀರ = ಲಾಮಂಚ, ಯಾಸ = ಬಳ್ಳಿದುರುಚೆಯಂ, ತ್ರಿಕಟುಕಮಂ, ತ್ರಾಯಂತಿ = ತ್ರಾಯಂತಿಯ ಚೂರ್ಣಕಮಂ, ಚಂದನೈಃ = ಎರಡು ಚಂದನಮಂ, ಎಂಬಿವುಗಳಿಂದಂ, ಸರ್ಪಿಃ = ತುಪ್ಪವಂ, ಅಟ್ಟಿದ್ದು, ಅದು ಮತ್ತೆ ಊರ್ಧ್ವಜ = ಕೊರಳಿಂದ ಮೇಲಪ್ಪ ವಿಕೃತಿ, ಪಿತ್ತಂಗಳುಂ, ಮಾಣುವುವು. ಅಕ್ಷಿ = ಕಣ್ಣು, ಎಂಬಿವುಗಳ, ಶೂಲಾದಿಷು = ಶೂಲೆ ವೊದಲಾಗಿ ಉಳ್ಳವಗಳೊಳುಂ, ಕುಷ್ಠ = ಕುಷ್ಠಮಂ, ಜ್ವರಮಂ, ವಿದ್ರಧಿಯಂ, ವ್ರಣರುಜಂ = ಹುಣ್ಣುಬೇನೆಗಳು, ಶುಕ್ಲೇಷು ಚೈವ = ಮೂರು ಪ್ರಕಾರ ಶ್ವೇತಕುಷ್ಠಂಗಳಿಗೆ, ಇಷ್ಯತೇ = ಹೇಳಲ್ಪಟ್ಟಿದೆ.

[1] [ದಾರ್ವೀಪರ್ಪಟನಿಂಬವತ್ಸಕಕಣಾದುಸ್ಪರ್ಶಯಷ್ಟಿವೃಷಾ
ತ್ರಾಯನ್ತೀತ್ರಿಫಲಾಪಟೋಲಿಕಟುಕಾಭೂನಿಂಬರಕ್ತಾಂಬುದೈಃ ।
ಕಲ್ಕೀಕೃತ್ಯ ತಥೈಷು ಸಾಧಿತಮಿದಂ ಸರ್ಪಿಃ ಪ್ರಶಸ್ತಂ ದೃಶಾಂ
ರಕ್ತಾದಿಪ್ರಭವೇಷು ಚೈವ ತಿಮಿರೇಷ್ವೂರ್ಧ್ವೇಷು ಚ ವ್ಯಾಧಿಷು ॥]

ದಾರ್ವೀ = ಮರದರಿಸಿನ, ಪರ್ಪಾಟಕಮುಂ, ನಿಂಬ = ಬೇವುಂ, ವತ್ಸಕಾ = ಕೊಡಸಿಗೆಯ ಬೀಜವಂ, ಕಣಾ = ಹಿಪ್ಪಲಿ, ದುಸ್ಪರ್ಶ = ಬಳ್ಳಿದುರುಚೆ, ಯಷ್ಟಿ = ಅಷ್ಟಮಧುಕ, ವೃಷಾ = ಆಡುಸೋಗೆಯಂ, ತ್ರಾಯಂತೀ = ದರಸಿಯಂ, ತ್ರಿಫಲೆ, ಪಟೋಲಿ = ಕಹಿಪಡವಲ, ಕಟುಕಾ = ಕಟುಕರೋಹಿಣಿ, ಭೂನಿಂಬ = ನೆಲಬೇವು, ರಕ್ತ = ರಕ್ತಚಂದನಂ, ಅಂಬುದ = ಭದ್ರಮುಸ್ತೆ, ಏಷು = ಇವುಗಳ ಕಲ್ಕವಂ ಕಷಾಯವಂ ಇಂತಿವುಗಳಿಂದ ಸಾಧಿತಂ = ಅಡಲ್ಪಟ್ಟದ್ದು, ಇದಂ = ಈ ವಿಧವಾದ, ಸರ್ಪಿಃ = ತುಪ್ಪವು, ಪ್ರಶಸ್ತಂ = ಪ್ರಖ್ಯಾತವಾದುದು. ದೃಶಾಂ = ಕಣ್ಣುಗಳಿಗೆ, ರಕ್ತಾದಿ = ರಕ್ತ ಎಂಬಿವುಗಳಿಂದ, ಪ್ರಭವೇಷು = ಹುಟ್ಟಿದವರೊಳು, ತಿಮಿರೇ = ತಿಮಿರಂ ಇಂತಿವುಗಳೊಳು, ಊರ್ಧ್ವೇಷು ಚ ವ್ಯಾಧಿಷು = ಕೊರಳಿಂದ ಮೇಲ್ಪಟ್ಟ ವ್ಯಾಧಿಗಳೊಳು ಹಿತಮಪ್ಪುದು.

ಶೂಲೆಗೆ:—......ತಿರುಳು ಹೂವು, ಟಂಕಣ, ಓಮ, ಇವಂ ಹುರಿದು ಚೂರ್ಣಂ ಮಾಡಿ ಬಿಸಿನೀರಿಂ ಕೊಂಬುದು. ಶೂಲೆ ಹರ. ನವಸಾರ, ಹೊಸ ಸುಣ್ಣಂ, ಇವಂ ಅಕ್ಕಿಗಚ್ಚಿನಿಂದ ಅರೆದು ನಸ್ಯಮಾಡುವುದು, ಶೂಲೆ ಹರ. ನರ ಸಿಕ್ಕು, ಕಪಾಲಶೂಲೆಗೆ–ಕಡಲ ನಾಲಿಗೆ, ತುತ್ತ, ಸೈಂಧವಲವಣಂ, ನಿಂಬೇಹುಳಿಯಿಂದರೆದು ಉಮ್ಮತ್ತದ ರಸ, ಎಕ್ಕದ ಹಾಲು, ಇವೆಲ್ಲವಂ ಕೂಡಿ ವೇದನೆಯಾದ ಠಾವಿಗೆ ಶಸ್ತ್ರವನ್ನಿಕ್ಕಿ ಆ ಔಷಧಿಯಂ ಲೇಪಂ ಮಾಡೆ ವೇದನೆ ತೀರ್ಗುಂ.

ಹೆನ್ನೆತ್ತರಿಗೆ :—ಕೆನ್ನೈದಿಲಗೆಡ್ಡೆ, ಒಂದು ಹಿಡಿ ಉತ್ತರಾಣಿಯ ಸೊಪ್ಪಂ ಹಾಕಿ ಇಡಿದು ಆಡಿನಹಾಲಂ ಹೆಸರಾಗಿ ಕಾಯಿಸಿ, ಆಡಿನ ತುಪ್ಪದಿಂ ಮೂರು ದಿನಗಳು ಮೆಲ್ಲುವುದು. ಹೆನ್ನೆತ್ತರು ಮಾಣ್ಗುಂ.

---

1 ಈ ಶ್ಲೋಕವು ಮೂಲಕೋಶದಲ್ಲಿಲ್ಲ. ವ್ಯಾಖ್ಯಾನದ ಆಧಾರದಿಂದ ಉದ್ಧರಿಸಲ್ಪಟ್ಟಿದೆ.

ವಾತಜ್ವರಕ್ಕೆ :—ಲೊಕ್ಕಿಯ ರಸ, ತನಿಯ ರಸ, ಔಡಲದ ರಸ, ಎಣ್ಣೆ, ಇಂತಿವುಗಳಿಂ ಕೂಡಿದ ಔಷಧ, ಸಬ್ಬಸಿಗೆ ಗ ೬ ತೂಕ, ದೇವದಾರು ಗ ೬ ತೂಕ, ಜಟಾಮಾಂಸಿ ಗ ೬ ತೂಕ, ಕಲ್ಲಹೂವು ಗ ೬ ತೂಕ, ಲವಂಗದ ಚೆಕ್ಕೆ ಗ ೬ ತೂಕ, ಶ್ರೀಗಂಧ ಗ ೬ ತೂಕ, ಕೋಷ್ಠ ಗ ೬ ತೂಕ, ಗಂಗುಂಗೆಯ ಬೀಜ ಗ ೬ ತೂಕ, ಮಯೂರಶಿಖಿ ಗ ೬ ತೂಕ, ರಾಸ್ನೆ ಗ ೬ ತೂಕ, ಓಮ ಗ ೬ ತೂಕ, ಅಂಗೋರ ಗ ೬ ತೂಕ, ಮೆಣಸು ಗ ೬ ತೂಕ, ತೈಲಂ= ಎಣ್ಣೆಯಂ, ತೈಃ=ಅವುಗಳೊಡನೆ, ಸಪಯಃ=ಹಾಲು ಬೆರಸಿದ್ದು, ತಿಮಿರಮಂ ಕೆಡಿಸುಗುಂ ನಸ್ಯಂ=ನಸ್ಯವು, ಮುಖ್ಯಂ=ಮುಖ್ಯವಾದಂಥಾದ್ದು. ವ್ಯಾಧಿಷು ಊರ್ಧ್ವೇಷು=ಕೊರಳಿಂದ ಮೇಲಿನ ವ್ಯಾಧಿಯೊಳು.

ಟೀಕೆ :—... ...ನಾಗೊಳ ನೀರೊಳಗೆ ಮುಷ್ಟಿಕ ಭಸ್ಮಂ, ಇಕ್ಕೊಳ ಬೂದಿಯಂ ಇಕ್ಕಿ ಕಲಸಿ ಕಾಯಿಸಿ ಒಕ್ಕೊಳ ನೀರಾದಾಗಲೇ ಬೂದಿಯ ಆ ನೀರೊಳು ಬಪ್ಪಂತಾಗಿ ಶೋಧಿಸಿಕೊಂಡು ಅನಲೇ=ಕಿಚ್ಚಿನೊಳಟ್ಟು, ಶಂಖದ ಮುರುದಂ ಪುಡಿಮಾಡಿ ಆ ಕಷಾಯದೊಳು ಇಬ್ಬಳ್ಳ ಶಂಖದ ಪುಡಿಯಂ ಹಾಕಿ ಇಬ್ಬಳ್ಳ ಎಣ್ಣೆಯನ್ನೆರೆದು ಆ ಎಣ್ಣೆಯಂ, ಆ ಶಂಖದ ಬೂದಿಯಂ ತೇನೈವ ಜಲೇನ=ಆ ಕಷಾಯದಿಂದಲೇ, ಪುನಃ=ಮರಳಿ, ಎಣ್ಣೆಯನಡುಗೆ. ಕ್ಷಾರಂ ಚ ತೈಲಂ=ಕ್ಷಾರವಾದ ತೈಲವು, ಯೋಜ್ಯಂ=ಪ್ರಯೋಗಿಸಲ್ಪಡುವುದು. ತತ್=ಅದು, ವ್ರಣಕುಷ್ಠಂ=ಕುಷ್ಠವ್ರಣದಿಂದಾದ, ದುಷ್ಟವ್ರಣರುಜಾ=ದುಷ್ಟ ವ್ರಣದ ಬೇನೆಗಳೊಳುಂ, ಅರ್ಶೇಷು=ಮೂಲವ್ಯಾಧಿಗಳೊಳು, ನಾಡೀಷು ಚ=ನಾಡೀಹುಣ್ಣುಗಳೊಳು, ತ್ವಗ್ದೋಷೇ ಚ=ತೊನ್ನಿಗುಂ ಭಗಂದರಕ್ಕುಂ, ವಿವಿಧಾನಿ=ಪಲತೆರನಪ್ಪ ............ ತನಿಯೊಡನಾದ ರೋಗಂಗಳೊಳುಂ, ಸ್ಥಿರೇಷು ಚ=ಪವಿತ್ರ ಮೊದಲಾದ ಬಲಿತ ರೋಗಂಗಳೊಳುಂ.

[1] ಟೀಕೆ :—ಅರಸಿನ, ಅಷ್ಟಮಧುಕ, ಮಧು=ಜೇನುತುಪ್ಪ, ಪದ್ಮ=ತಾವರೆಯಂ, ಉತ್ಪಲೈಃ = ನೈದಿಲೆಗೆಡ್ಡೆ, ಪ್ರಿಯಂಗು = ಕಾನಾಳಲ ಪೂ, ಎಂಬಿವುಗಳಂ ಅಟ್ಟು ಲೋಧ್ರಮುಂ. ಚಂದನಮಂ, ತೈಲೇ=ಎಣ್ಣೆಯಲ್ಲಿ, ಪಯಸಾ=ಪಾಲಿಂದಂ ಪ್ರಯೋಗಿಸುಗೆ, ಕ್ಷತೇಷು=ಕತ್ತಿಯ ಹುಣ್ಣುಗಳೊಳಗೆ, ಸಂರೋಹಣಂ=ಗುಣಕರವು. (ವ್ರಣಾನಾಂ= ಹುಣ್ಣುಗಳ) ದಾಹನಾಶನಂ=ದಾಹವನ್ನು ಕೆಡಿಸುಗುಂ.

ನಾಡೀಹುಣ್ಣಿಗೆ :—

[2] [ಜಾತೀನಿಂಬಪಟೋಲಪತ್ರಕಟುಕಾದಾರ್ವೀನಿಶಾಶಾರಿಬಾ-
ಮಂಜಿಷ್ಠಾಭಯತುತ್ಥಸಿಕ್ಥಮಧುಕೈರ್ನಕ್ತಾಹ್ವಬೀಜಾನ್ವಿತೈಃ ।

---

1 ವ್ಯಾಖ್ಯಾನಬಲದಿಂದ ಶ್ಲೋಕವು ಊಹಿಸಲ್ಪಟ್ಟಿದೆ :—
ಆರ್ದ್ರಕಂ ಯಷ್ಟಿಮಧುಕಂ ಮಧುಪದ್ಮಕಮುತ್ಪಲಂ ।
ಪ್ರಿಯಂಗುಲೋಧ್ರಶ್ರೀಖಂಡಂ ತೈಲೇ ಚ ಪಯಸಾ ಯುತಂ ॥
ಕ್ಷತೇಷು ಸಂರೋಹಣಕೃದ್ವ್ರಣಾನಾಂ ದಾಹನಾಶನಂ ॥

2 ಮೂಲಕೋಶದಲ್ಲಿ ಶ್ಲೋಕಗಳು ಇಲ್ಲ. ಟೀಕೆಯು ಮಾತ್ರ ಕಾಣಬರುತ್ತಿದೆ. ಈ ಶ್ಲೋಕವು ಯೋಗರತ್ನಾಕರ, 2-ನೇ ಭಾಗ, ಪುಟ 297 ರಿಂದ ಉದ್ಧೃತವಾಗಿದೆ.

ಸರ್ಪಿಃ ಸಿದ್ಧಮನೇನ ಸೂಕ್ಷ್ಮವದನಾ ಮರ್ಮಾಶ್ರಿತಾಃ ಸ್ರಾವಿಣೋ
ಗಮ್ಭೀರಾಃ ಸರುಜೋ ವ್ರಣಾಃ ಸಗತಿಕಾಃ ಶುಧ್ಯನ್ತಿ ರೋಹನ್ತಿ ಚ ॥]

ಟೀಕೆ:—ಜಾತೀ = ಜಾಯಿಕಾಯಿ, ನಿಂಬ = ಬೇವು, ಪಟೋಲ = ಕಹಿಪಡವಲ, ಎಂಬಿವುಗಳ, ಪತ್ರ = ಎಲೆಯಂ, ಕಟುಕಾ = ಕಟುಕರೋಹಿಣಿ, ದಾರ್ವಿ = ಮರದರಸಿನವಂ, ನಿಶಾ = ಅರಿಸಿನಮಂ, ಶಾರಿಬಾ = ಸುಗಂಧಿಯಂ, ಮಂಜಿಷ್ಠಾ = ಮಂಜಿಷ್ಠೆ, ಅಭಯ = ಅಳಲೇಕಾಯಂ, ಸಿಕ್ಥಂ = ಜೇನುಮಯಣವಂ, ಮಧುಕೈಃ = ಅಷ್ಟಮಧುಕ ಎಂಬಿವುಗಳಿಂ, ನಕ್ತಾಹ್ವಬೀಜಾನ್ವಿತೈಃ = ಹೊಂಗೆಯ ಬೀಜಗಳಿಂದ ಸಮಾನಂಗೊಂಡು, ಸರ್ಪಿಃಸಿದ್ಧಂ = ತುಪ್ಪದಿಂದಟ್ಟು ಕೊಳ್ಳೆ, ಅನೇನ = ಇದರಿಂದ, ಸೂಕ್ಷ್ಮವದನಾಃ = ಬಹಳ ಸೂಕ್ಷ್ಮವಾದ ಬಾಯನ್ನುಳ್ಳವು, ಮರ್ಮಾಶ್ರಿತಾಃ = ನರಗಳಲ್ಲಾದ ಹುಣ್ಣುಗಳು, ಗಂಭೀರಾಃ = ರಸಿಸುರಿಯುವ ಹುಣ್ಣುಗಳು, ಸರುಜಃ = ನೋವುಳ್ಳ ಹುಣ್ಣುಗಳು ಸಹ, ಶುಧ್ಯನ್ತಿ = ಶುದ್ಧವಹುವು. ಸಗತಿಕಾಃ = ನಾಡಿಯಲ್ಲಿದ್ದ ಹುಣ್ಣುಗಳೂ ಸಹ, ರೋಹನ್ತಿ ಚ = ಗುಣವಾಗುವುವು.[1]

[2] [ಅಂಗಾರಧೂಪೋ ಮಹಿಷಾಕ್ಷಿಯುಕ್ತಃ
ಸವಾಜಿಗಂಧೋ ವೃಷತಂಡುಲೀಯಃ ।
ಗೋಮೂತ್ರಪಿಷ್ಟೋಽಪ್ಯಗದೋ ನಿಹನ್ತಿ
ವಿಷಾಣಿ ಚ ಸ್ಥಾವರಜಂಗಮಾನಿ ॥]

ಟೀಕೆ :—ಅಂಗಾರಧೂಪಃ = ಇಲ್ಲಣಮಂ, ಮಹಿಷಾಕ್ಷಿಯುಕ್ತಃ = ಗುಗ್ಗುಳದೊಳು ಕೂಡಿದುದಂ, ಸವಾಜಿಗಂಧಃ = ಹಿರಿಯಮದ್ದಂ, ವೃಷಾ = ಆಡುಸೋಗೆಯಂ, ತಂಡುಲೀಯಂ = ಕಿರುಕಸಾಲೆಯ ಬೇರು, ಎಂಬಿವುಗಳಂ, ಗೋಮೂತ್ರಪಿಷ್ಟಃ = ಗೋಮೂತ್ರದೊಳು ಅರೆದು ಕುಡಿಸಿದರೆ, ಅಗದಃ = ನಂಜುಗಳಂ, ನಿಹನ್ತಿ = ಕೆಡಿಸುಗುಂ. ವಿಷಾಣಿ ಚ ಸ್ಥಾವರಜಂಗಮಾನಿ = ಸ್ಥಾವರ ಜಂಗಮ ವಿಷಂಗಳನೆಲ್ಲವಂ ಕೆಡಿಸುಗುಂ.

ಸ್ಥಾವರಜಂಗಮವಿಷಕ್ಕೆ :—

[3] [ಮಯೂರಪಿಂಛೇನ ಚ ತಂಡುಲೀಯಕಂ
ಕಾಕಾಂಡಯುಕ್ತಂ ಪ್ರಪಿದೇನಲ್ಪಂ ।
ವಿಷಾಣಿ ಚ ಸ್ಥಾವರಜಂಗಮಾನಿ
ಸೋಪದ್ರವಾಣ್ಯಪ್ಯಚಿರೇಣ ಹನ್ತಿ ॥]

---

1 ಇದರ ನಂತರ ತಾಲಪತ್ರಕೋಶದಲ್ಲಿ ಹೀಗಿದೆ: —ಇಂತಿ ಶಕ್ತಿತ್ರಯ ಸಮಾಪ್ತಿಃ ಮಂಗಳ ಮಹಾಶ್ರೀ.

2 ಯೋಗರತ್ನಾಕರ, ಭಾಗ 2, ಪುಟ 817

3 ಯೋಗರತ್ನಾಕರ, ಭಾಗ 2, ಪುಟ 818.

ಟೀಕೆ :— ಮಯೂರಪಿಂಛೇನ = ಹೆಮ್ಮರದ ತಿಗಡಿನಿಂದ, ತಂಡುಲೀಯಕಂ = ಕಿರುಕ ಸಾಲೆಯ ಬೇರಂ, ಕಾಕಾಂಡಯುಕ್ತಂ = ಕಾಗೆತೊಂಡೆಯ ಹಣ್ಣು ಸಹಿತವಾಗಿ, ಪ್ರಪಿಬೇತ್ = ವಿಶೇಷವಾಗಿ ಕುಡಿಸುಗೆ. ಅನಲ್ಪ = ಪಿರಿದಾದ, ವಿಷಾಣಿ ಚ ಸ್ಥಾವರಜಂಗಮಾನಿ = ವಿಷಂಗಳಂ ಸ್ಥಾವರಜಂಗಮಂಗಳಂ, ಸೋಪದ್ರವಾಣ್ಯಪಿ = ಉಪದ್ರವದೊಳ್ಕೂಡಿದೊಡೆಯುಂ, ಅಚಿರೇಣ = ತಡವಿಲ್ಲದೆ, ಹನ್ತಿ = ಕೆಡಿಸುಗುಂ.

ವಿಷಪ್ರಯೋಗಕ್ಕೆ :—

ಟೀಕೆ :— ಎಲಚಿಯ ಬೀಜ, ಕಹಿಸೋರೆಯ ಬೀಜ, ಸಕರಂಜಿಬೀಜ, ಹುಂಗಿಲ ಬೀಜ, ಕೋಶಾತಕೀ = ಕಹಿಹೀರೆಯ ಬೀಜ, ಮೂಷಿಕ ಬೀಜ, ಬಳ್ಳಿದುರುಚಿಯ ಬೀಜ, ಎಂಬಿವಂ ಸಮಾನಂಗೊಂಡು ಹಸುವಿನ ಮೂತ್ರದಿಂದ ಸಣ್ಣಗೆ ಅರೆದು ಕುಡಿಸುಗೆ, ಸಮ್ಯಕ್ = ಒಳ್ಳಿಯದಾಗಿ, ವಿಷಂ ನಾಶಯಂತಿ = ವಿಷವನ್ನು ಹೋಗಲಾಡಿಸುವ ಕಾರಣವಗುವು.

ಮಹೋದರಾಣಾಂ ವಿಷಸ್ಯ = ಮಹಾಸರ್ಪಗಳ ವಿಷಕ್ಕೆ :—

1 [ಶಿರೀಷಪುಷ್ಪಂ ಸ್ವರಸೇನ ಭಾವಿತಂ
ತ್ರಿಃಸಪ್ತಕೃತ್ವೋ ಮರಿಚಂ ಸಿತಾಹ್ವಯಂ ।
ಪ್ರಯೋಜಯೇದಂಜನಪಾನನಾಸನ್ಯೈಃ
ಸಂಮೂರ್ಛಿತಾನಾಮಪಿ ಸರ್ಪದಂಶಿನಾಂ ॥]

ಟೀಕೆ :— ಶಿರೀಷಪುಷ್ಪಂ = ಬಾಗೆಯ ಹೂವು, ಸ್ವರಸೇನ ಭಾವಿತಂ = ಆ ಬಗೆಯಾದ ತನ್ನ ರಸದಿಂದಲೇ ಭಾವಿಸಲ್ಪಟ್ಟದ್ದು, ತ್ರಿಃಸಪ್ತಕೃತ್ವಃ = ಇಪ್ಪತ್ತೊಂದು ಬಾರಿ ಭಾವಿಸಿ, ಮರಿಚಂ = ಮೆಣಸಂ, ಸಿತಾಹ್ವಯಂ = ನುಗ್ಗೆಯ ಬೀಜವಂ, ಪ್ರಯೋಗಿಸುವುದು. ಅಂಜನಂ = ಕಣ್ಣೊಳಗೆ ಹಚ್ಚುವುದು, ಪಾನಂ = ಕುಡಿಸುವುದು, ನಾಸನ್ಯೈಃ = ನಸ್ಯಂಗೈವದರಿಂ, ಪ್ರಯೋಜಯೇತ್ = ಉಪಯೋಗಿಸಲ್ಪಡುವುದು. ಮೂರ್ಛಿತಾನಾಂ = ಮೂರ್ಛೆ ಹೊಂದಿದವರಿಗೆ, ಸರ್ಪದಂಶಿನಾಂ = ಹಾವುಕಚ್ಚಿದವರಿಗೆ.

ಟೀಕೆ :— ............... ತನಿರಸದೊಳು ಸೇವಿಸುವುದು. ಅಶ್ವಗಂಧ = ಹಿರಿಯ ಮದ್ದಿನ ಬೇರುಂ, ... ... ... ...ಶಿರೀಷಂ = ಬಾಗೆಯ ಬೀಜಮಂ, ಕಟುಕತ್ರಯಂ ಚ = ತ್ರಿಕಟುಕ ಎಂಬಿವುಗಳಂ, ಪ್ರಯೋಜಯೇತ್ = ಉಪಯೋಗಿಸುವುದು, ಮಾರ್ಜಯೇತ್ = ಎರಚುವುದು, ಪಾನಂ = ಕುಡಿಯುವುದು, ನಾಸನ್ಯೈಃ = ನಸ್ಯವಂ ಮಾಡುವುದು. ವಿರೋಹಿತಾನಾಂ ... ... ... ಮೂರಾವರ್ತಿಯಾಡಿದವರಿಗೆ.

........... ಎಣ್ಣೆ ಹರಳಂ, ಎಳ್ಳು ಸೂಸಲಂ, ಗುಡಂ ಚ = ಬೆಲ್ಲವನ್ನೂ ಸಹ, ........ ಅರ್ಕಕ್ಷೀರಂ = ಎಕ್ಕದಹಾಲಂ ಸಮಭಾಗನಾಗಿ ಕುಡಿಯಲ್ಪಟ್ಟದು ... ... ... ... ವಿಷವನ್ನು, ಆಶು = ಆ ಕ್ಷಣದಲ್ಲೇ, ಹಂತಿ = ಕೆಡಿಸುಗುಂ.

---

1 ಮೂಲಕೋಶದಲ್ಲಿ ಶ್ಲೋಕವಿಲ್ಲ. ವಾಖ್ಯಾನದ ಸಹಾಯದಿಂದ ಶ್ಲೋಕವು ಉದ್ಧೃತವಾಗಿದೆ.

ಟೀಕೆ :—ಮಾಂಸಿ=ಜಟಾಮಾಂಸಿಯಂ, ಸಿಕ್ಥೇ=ಜೇನುಮಯಣ, ಆಲ ... ... ಜಲದೇ=ಭದ್ರಮುಸ್ತೆ, ಜಲಜದಳ=ಕಮಲಪತ್ರಮಂ, ಮಣಶಿಲೆಯಂ, ಗೋರೋಚನಮಂ ...... ತಾವರೆಯ ರಸಮಂ, ಪಿತ್ತಿ=ಪಿತ್ತಿಯಂ, ಬಂಧು=ಬಂದೆಯಂ, ಹರಿದ್ರಾ=ಅರಿಸಿನಮಂ.... ಚಂದನಮಂ, ಪೀತಾ=ಪ್ರಿಯಂಗು, ಕುಂಕುಮದ ಪೂವಂ, ಕಸ್ತೂರಿಯಂ, ಏಲಂ=ಏಲಕ್ಕಿ, ಎಂಬಿವಂ, ಸಾಮ್ಯಂ=ಸರಿಯಪ್ಪುದಂ, ಕರಾಷ್ಟಭಾಗಂ=ಕೈಯ್ಯಿಂದ ಎಂಟು ಹಿಡಿ .... .... ... ಬಿಳಿಯ ಸಾಸುವೆ, ಚತುರಿಕಾ ಕುಸುಮ ಒಂದು ಪಾಲು ಕೂಡಿ ... ... ... ವರ್ತಯಃ=ಬತ್ತಿಗಳು, ಸರ್ವಭೋಗ್ಯೈಃ=ಎಲ್ಲಾ ತೆರನಾಗಿ ಉಪಯೋಗಿಸಲು... ... ... ಆವರೋಗಂಗಳು ಪಿಶಾಚಂಗಳು ಜ್ವರಮಂ, ನಿಹಂತಿ=ಪೋಗಲಾಡಿಕುಂ ... ... ... ಇಂತಿದೆಲ್ಲವಂ, ಘ್ನಂತಿ=ಕೆಡಿಸುಗುಂ. ಚಂದ್ರೋದಯಾಖ್ಯಂ=ಚಂದ್ರೋದಯ ಎಂಬ ಹೆಸರುಳ್ಳ ಇದು. ... ...[1]

[2] ಭಗಂದರಕ್ಕೆ :—ಕಂಕ್ರಿಯೆಯಂ ನೆಲ್ಲಿಯ ಕಾಯಂ ... .... ... .... ಪೂಸಿದೊಡೆ ಫಲತ್ರಯದ ಕಷಾಯ ಮನೆ ... ... ... ಕುಡಿದರೆ ... ಕೆಡಿಸುಗುಂ. ರಜನಿಕೃತಂ... ... ಅಜಾಗಂಧ, ಅಶ್ವಗಂಧಿ ಎಂಬಿವಂ ... ... ... ಚೂರ್ಣಂ ಅಂಬುಜಾನನೆಯರ್ಗೆರೆಯೆ ಅವಶ್ಯಂ ಮೊಲೆಬರ್ಕುಂ. ವನದಂತಿಯ ಸಂದಿಯ ... .... ... ...ಯೊಳು ಮೊಲೆಯ ನೊರಸಿ ಕಳ್ಳಿವೆರಸಿ ರಸಾಂಜನಮಂ ನಸ್ಯಂಗೈದೊಡೆ ವನಜಾಕ್ಷಿಯ ಮೊಲೆ ... ...ಮರಿಗುಂ. ಹೊಸಘೃತದೊಳಿರಿಸಿ ಜಾತಿಪ್ರಸೂನವಂ ಪಂಚಕಲಪಂ ಮಧುಕಮಂ ... ... ... ಕಟ್ಟಿ ಪೂಸುಗೆ ಕಿಸುಕುಳ್ಳಿಯಪ್ಪವಳ ಭಗದ ಗಂಧಂ ಮಾಣ್ಗುಂ. ಭಗರಕ್ತ ... .... .... .... ಎಂಬಿವಂ ... ... ಮೇಣ್ಕಿರುಕುಸಾಲೆಯ ... ... ... ತರುಣಫಲಮಂ ... ... ... .... ಬೇರಿನ ನಸ್ಯಮೆರೆಯೆ ಗರ್ಭಿಣಿಯರಿಗೆ ಗೋರಂಟಿಯ ಬಿತ್ತಂ ಪಳೆಯ ನೀರೊಳು ಅರೆದು ಕುಡಿಯಿಸುಗೆ ಜಲದೆಡೆ ಭಗದೋಳ್ ಸಂಚರಿಪುದು. ನೀರಕರ್ಣಿಯ ಬೇರಂ ಕೊಂಡರೆದು ಕುಡಿಯೆ ಗರ್ಭ ನಿಲ್ಲುವುದು. ಫಲಮನಪೇಕ್ಷಿಸದಿರ್ಪಡೆ ಪಲಾಶಬೀಜಚೂರ್ಣದೊಳು ಮಧುಘೃತಮಂ ಕಲಸಿ ಬಳಿಕ್ಕದನ್ನು ರಜಸ್ವಲೆಯಾದವಳ ಭಗದೊಳು ಇಟ್ಟೊಡೆ ಆಗದು ಗರ್ಭ. ಸಮನಿಸೆ ಪುಷ್ಯಮಾಸದ ಮಾಮರದಮೂಲಮಂ ಕೊಂಡು ಕಟಿಕಟಿಯೊಳ್ಪುರುಷಂ ರಮಿಸಿದಂಗನೆಗೆ ಗರ್ಭವಾಗದು. ಏನೆಂದು ಪೇಳ್ವೆನಿದರುನ್ನತಿಯಂ. ಜಲಜಾತಕಂದ, ಮಧು, ಸಿತತಿಳಂಗಳಂ...ಡಿಗೆ...ಬೆಳುದಾಳಂ ಮಲೆಯರುಹಂ ಎಂಬಿವಂ ತಂಡುಲಜಲದಿಂ ಕುಡಿಯೆ ಗರ್ಭಪತನಂ ಮಾಣ್ಗುಂ.

---

1 ಮೂಲಕೋಶದಲ್ಲಿ ಇದರ ನಂತರ ಹೀಗಿದೆ :—ಇಂತೀ ವಿಷಚಿಕಿತ್ಸೆ ಸಮಾಪ್ತಂ.

2 ಇದರ ನಂತರ ಮೂಲಕೋಶದಲ್ಲಿ ಬಹಳ ಗ್ರಂಥಪಾತವಿದೆ. ಇವುಗಳು ಪದ್ಯರೂಪಗಳಂತಿದ್ದರೂ ಗ್ರಂಥಪಾತದಿಂದಾಗಿ ಇವುಗಳನ್ನು ಪದ್ಯಗಳನ್ನಾಗಿ ವಿಭಾಗಿಸುವುದು ದುಸ್ತರವಾಗಿದೆ.

ಗರುಗದ ತನಿರಸಮಂ ಮೇಣ್
ಗಿರಿಕರ್ಣಿಕೆಯ ಬೇರ ಸಮಂ
ಹಸುವಿನ ಪಾಲೊಳ್ವೆರಸಿ ಕುಡಿವ
ವನಿತಾಜನದ ಗರ್ಭವಿಳಿಯದೆ ನಿಲ್ಗುಂ.

ಗಿರಿಕರ್ಣಿಕೆಯಂ, ಉತ್ತ್ರರಾಣಿಯಂ, ಗುರುಗುಂಜಿಯ ಬೇರೊಳು ಅರೆದು ಇಡಲು ಭಗಾಂತರದೊಳು ಹಿತವೂ ಮನಕ್ಕೆ ಹರುಷವೂ ತಟ್ಟುವುದು .. ... ... ...ಬಿಸಿಯಕ್ಕಿಯ ಗಚ್ಚಿನೊಳ್ಕುಡಿಯುಸಿದರೆ .... ... ... ಶೀಘ್ರದೊಳು ಪ್ರಸವದ ಪ್ರಾಪ್ತಿಯರ್ಗೆ ಸುಖಪ್ರಸವ ಮಕ್ಕುಂ. ಸರಸ್ವತೀಮುಖ ತಿಲಕ ಭಗದೊಳು ಉತ್ತ್ರರಾಣಿಯತ್ವಕ್ಕು, ಹೊರಕ್ಕೆ ಸೊಪ್ಪಂ ಅಟ್ಟಿಟ್ಟೊಡೆ ಬಟ್ಟೆಗೆ ಬೀಳ್ಗುಂ ಬಸುರೊಳನಿಂಬುಗೆಟ್ಟ ಸತಿಯರ್ಗೆ ... ... ... ತಕ್ಷಣ ದಿಂದ ಕಡುಚೋದ್ಯವಾಗಿ ಉತ್ತ್ರರಾಣಿಯಗಿಡಂ ಕೆಳಕ್ಕೆ ಸರಿದು ಬಂದರೆ ಸುತೆಯಂ ಪಡೆ ವರು. ಸರಿಯದೆ ಬಂದೊಡೆ ಸುತನಂ ಪಡೆವರು. ಸರಸ್ವತೀಮುಖ ತಿಲಕ.

ನಾರಿಯ ರೂಪಿರಲೋಡಂ
ದುರ್ವಾರಮೆನಿಪ್ಪದತಿಶೂಲೆಯಾಗೆಯಂದು
ಯವಕ್ಷಾರಮನಾಜ್ಯದಿ ಮೇಣ್ಬೆಸಿ
ನೀರೊಳ್ಕುಡಿಯೆದಂತೆಯಾಗೆ ನಿಲ್ಗುಂ
ಗುಡಮಂ ತುಳಸಿಯ ರಸದೊಳ್
ಕುಡಿಯಿಸಿ ಉತ್ತ್ರರಾಣಿಯಂ ... ...

... ... ... ... ... ಮೇಣ್
ಇಡುಗವಳ ಯೋನಿಯೆ ಪರಿಪರಿ
ನಡುಗುಂ ತಡೆದಿರದೆ ಭಗಸಮುದಿತಶೂಲಂ
ಕಡಮೆಯಾಗಂಬುಜಾನನೆಯರ್ಗೆ

ಚಂದ್ರಮುಸ್ತೆ, ವಿಷಮುಷ್ಟಿ, ಎನಿಪ್ಪಿವನೊಡೆಗೂಡಿದ ತೈಲವನೆಟ್ಟನೆ ಪೂಸಗೆ ಭಗದ ವೇದನೆ ಮಾಣ್ಗುಂ. ಲಲನಾಪ್ರಸವಕೂಟಲೆಯಿಂದಂ ಪೊರೆಗೆ ಪೊಣ್ಮಿದಾ ಭಗಮು ಮಾಂಸಂ ಕೊಳೆಗೆಡಿಸುತಿರ್ಪಡೆ, ಪಾಗಲಬೇರಂ ಪೂಸಿದಂದುಪಶಮನಮಕ್ಕುಂ. ಯುವತಿ ಜನದ ಭಗ ಶಿಥಿಲವಾಗೆ ಜಕ್ಕೆಪಸಿಂ, ಮೃಗಾಂಕ ಮಧುವನರೆದು ಭಗದೊಳಿಡೆ ಒಡನೆ ನಿರ್ಕುಂ ಭಗ, ಸರಸ್ವತೀಮುಖ ತಿಲಕ. ... ... ... ಮಧುಮಿಶ್ರಂ ಪತ್ರೆ ಗೋರಂಡಿಯಂ ಇಡೆ ನಾಣ್ಗುಂ. ಯೋನಿಯ ರಪ್ಪರ್ ಮುಸಗಂ ಮರಳಿ ಬಗಂ .... .... ಘೃತ ಸಮ ನ್ವಿತಂ ಪೂಸ ... ... ದಂ. ಕುಸುಮರಸಸಮನ್ವಿತ ರಸವ ಬಂಜೆಯರಿಗೆ ... ... ... ಮೂಲಿಕೆಯಂ ಬಿಸಿನೀರೊಳ್ಕುಡಿಯಿಸೆ ಮೇಣ್ ಪ್ರಸೂತೆಯಾದವಳ ಒಡಲ ಬಸುರಸಿದಕ್ಕುಂ. ಸುರವಾರುಣಿಯ .... .... .... ಲೋಹಿಸರಮುಂ ತೊಡೆಸಡೆ ಉತ್ತ್ರರಾಣಿಯ ... ... ... ತೀರ್ಗುಂ. ಕರುಳಕ್ಷತಚೂರ್ಣಂ ಮೇಣ್ ನೆಲಗುಂಬಳಮಿದರೊಳೊಂದನೆಮ್ಮೆಯ ಪಾಲಿಂ ಕಲಸಿ ಕುಡಿಯೆ ಆಗ ಬಾಣಂತಿಗೆ ತೋರ್ಗುಂ ಹೆಚ್ಚು ಪಾಲ್ಕರೆವ ತೆರದಿಂ.

ಕರ್ಣರೋಗಕ್ಕೆ :—

ನಾಗರಸೇ ಯವ ... ಕುಷ್ಠವಚಾ .. ತಿಲತೈಲಂ ।
ಅರ್ಕಪತ್ರರಸಯುಕ್ತಂ ಕರ್ಣರುಜಾಶ್ರಿತರೋಗಾನ್ನಿಹನ್ತಿ ॥ (?)
ಸಮುದ್ರಸಾಂವತ್ಸರಸೈಂಧವಾದಿಕ್ಷಾರತ್ರಯಾಣಾಮಜಮೋದಕಂ ಚ ।
ಹರೀತ್ಸ ಚೈರಂಡಘೃತೇನ ಮಿಶ್ರಮಜೀರ್ಣವಾತಂ ಗುರುಗುಲ್ಮವಾತಂ ॥
ಪ್ರಮೇಹವಾತಂ ಚ ವಿಷೂಚಿಕಾಂ ಚ ಕಾಮಾಲಕಾಂ ಪಾಂಡುರೋಗಂ ಜ್ವರಂ ಚ ॥

ಟೀಕೆ:—ಪಂಚಲವಣ, ಯವಕ್ಷಾರ, ಸದ್ಯಕ್ಷಾರ, ಟಂಕಣ, ಅಜವೋದ, ಅಳಲೆಯ ಕಾಯಿ, ಶುಂಠಿ, ಚಿತ್ರಮೂಲ, ಇಂಗು, ವಾಯಿವಿಳಂಗ, ತಾರೇಕಾಯಿ, ನೆಲ್ಲಿಯ ಕಾಯಿ, ಇವುಗಳ ಸಮಾನ ಚೂರ್ಣವಂ ಮಾಡಿ ತುಪ್ಪದಲ್ಲಿ ಮೆಲ್ಲುವುದು. ಪಥ್ಯ ಹಾಲೋಗರ.

ಆರ್ದ್ರಕಂ ಚ ಪಿಪ್ಪಲೀಮರೀಚವಹ್ನಿಜೀರಕಂ
ಶ್ರೀಫಲೀ ಚ ಸೈಂಧವಂ ಚ ಚೂರ್ಣಿತಂ ಗುಡಂ ಸಹ ।
ವಟೀಕೃತಂ ಪಾಚನಂ ಪ್ರರೋಚಕಂ ಪ್ರದೀಪನಂ
ವಾಯುಗುಲ್ಮಮೂಲರೋಗನಾಶನಂ ರಸಾಯನಂ ॥

ಟೀಕೆ :—ಶುಂಠಿ, ಹಿಪ್ಪಲಿ, ಮೆಣಸು, ಚಿತ್ರಮೂಲ, ಜೀರಿಗೆ, ನೆಲ್ಲಿಯಕಾಯಿ, ಸೈಂಧವ, ಇಷ್ಟನ್ನೂ ಚೆನ್ನಾಗಿ ಇಡಿದು ಧೂಳಿಯಂ ಮಾಡಿ ಬೆಲ್ಲವ ಕಲಸಿ ಉಂಡೆಯಂ ಮಾಡಿ ಉದಯಕಾಲದಲ್ಲಿ ಮೆಲ್ಲುವುದು.

ಕಾಮಾಲೆಗೆ :—ಹಿಪ್ಪಲಿ, ಗೋರಂಟಿಯನ್ನು ಚೆನ್ನಾಗಿ ಇಡಿದು ಪುಡಿ ಮಾಡಿ ಆ ಪುಡಿ, ಅಳಲೇಕಾಯಿಯ ಪುಡಿ, ತಾರೇಕಾಯಿಯ ಪುಡಿ, ಈ ನಾಲ್ಕು ಪುಡಿಯನ್ನು ಬಿಸಿನೀರಲ್ಲಿ ಕುಡಿಯುವುದು. ಪಥ್ಯ ಹಾಲೋಗರ.

ಆಮಶಂಕೆಗೆ :—ಬೆಲ್ಲಗಣಿಕೆಯ ತಿಗಡು . . . . . . . ಈ ಎರಡನ್ನು ಜಜ್ಜುಗೊಟ್ಟಿ ಎಣ್ಣೆಯಲ್ಲಟ್ಟು ಉದಯಕಾಲದಲ್ಲಿ ಕೊಂಬುದು. ಪಥ್ಯ ಹಾಲೋಗರ.

ಏಲಾಲವಂಗತಕ್ಕೋಲಕರ್ಪೂರಸಿತಶರ್ಕರಾಂ ।
ಚಂದನೇನ ಚ ಚೂರ್ಣಂ ತದ್ಬ್ರಾಮ್ಯೇರಂಡಸಮಾಯುತಂ ॥
ವಸ್ತ್ರೇಣ ಗಾಲನಂ ಕೃತ್ವಾ ನಾಳಿಕೇರೋದಕೇನ ಚ ।
ದಾಪಯೇನ್ಮದಮೂರ್ಛಾಸು ಕ್ರೂರಜ್ವರ ಪ್ರಶಾಂತಯೇ ॥

ಟೀಕೆ :—ಏಲಕ್ಕಿ, ಲವಂಗ, ಕಾರಮೆಣಸು, ಸಕ್ಕರೆ, ಕರ್ಪೂರ, ಇಷ್ಟು ಸಮಾನ ಇದರ ಸಮಾನ ನೆಲಅರಳ ಪುಡಿ, ಇಷ್ಟನ್ನೂ ವಸ್ತ್ರಗಾಳಿತವಂ ಮಾಡಿಕೊಂಡು ನೀರಲ್ಲಿ ಕೊಡುವುದು.

ಜ್ವರಕ್ಕೆ :—ಕರ್ಪೂರ, ಶಿಲಾಧಾತು, ... ... ... ... ಅಯಃ ಕಾಂತ, ಶುದ್ಧವಾದ ಲೋಹ ಚೂರ್ಣ, ಅರಿಸಿನ, ಹತ್ತಿಯಗೊಟ್ಟೆ, ... ... ... ಅಗಿಲು, ತ್ರಿಫಳೆ, ಇವು ಪ್ರತ್ಯೇಕ ಪಲ ೨, ಇವಂ ಇಡಿದು ವಸ್ತ್ರಗಾಳಿತವಂ ಮಾಡಿ ಈ ಚೂರ್ಣವನ್ನು ... .... ....

ಹಾಕಿ ಕಲಸಿ ಮೂರು ವರಹ ತೂಕದ ಮರ್ಯಾದೆಯಲ್ಲಿ ಗುಳಿಗೆಯಂ ಮಾಡಿ ನೆರಳೊಳಗೆ ಇರಿಸಿ ಒಣಗಿಸಿ ಒಂದು ಗುಳಿಗೆಯಂ ಚೂರ್ಣಮಂ ಮಾಡಿ ಒಂದು ವರಹ ತೂಕ ಜೇನುತುಪ್ಪದಲ್ಲಿ ಕಲಸಿ ಲೇಹ್ಯವಾಗಿ ಕೊಡುವುದು.

ಸರ್ವಜ್ವರಕ್ಕೆ :—ಬಿಳಿಯ ಜೀರಿಗೆ, ಕರಿಯ ಜೀರಿಗೆ, ಕಲ್ಲುನಾರು, ಅಷ್ಟಮಧುಕ, ಏಲಕ್ಕಿ, ತವಕ್ಷೀರ, . . . ಬಜೆ, ಹ . . . ಲದ ಗೆಣಸು, ತುರುಚನ ಬೇರು, ಇಷ್ಟು ಸಮಾನ ತೂಕದಲ್ಲಿ ಒಣಗಿಸಿ ಇಡಿದು ವಸ್ತ್ರಗಾಳಿತವಂ ಮಾಡಿ ನಿಂಬೆಯ ಹುಳಿಯಲ್ಲರೆದು ಕಡಲೆಯ ಗಾತ್ರ ಗುಳಿಗೆಗಳಂ ಮಾಡಿ ಆ ಗುಳಿಗೆಯನ್ನು ಜೀರಿಗೆ, ಸಕ್ಕರೆಯಲ್ಲಿ ಕೊಡುವುದು. ನಿಂಬೆಯ ಹಣ್ಣು, ಸಕ್ಕರೆಯಲ್ಲಿ ಕೊಡುವುದು. ತಣ್ಣೀರು, ಸಕ್ಕರೆಯಲ್ಲಿ ಕೊಡುವುದು. ಮರಹತ್ತಿಯ ರಸ ಸಕ್ಕರೆಯಲ್ಲಿ ಕೊಡುವುದು. : . . . . ರಸದಲ್ಲಿ ಕೊಡುವುದು.

ಸನ್ನಿಜ್ವರಕ್ಕೆ :—ಭದ್ರಮುಸ್ತೆ, . . . . . . ಕೊತ್ತಂಬರಿ, ಶುಂಠಿ, ಹಿಪ್ಪಲಿ, ಕಟುಕರೋಹಿಣಿ, ಇಷ್ಟನ್ನೂ ಬೆರಸಿ ನೀರಲ್ಲರೆದು ... ... ... ... ಒಂದು ಗುಳಿಗೆಯಂ ಹಾಕಿ .... ......ನೀರಲ್ಲಿ ಕೊಂಬುದು. ಮೈಯ್ಯಶೂಲೆಗೆ ಬೆಲ್ಲವತ್ತದ ಬೇರಂ ತಂದು....(ಅಪೂರ್ಣ).

## D 1375 & R 1376

ಶೈತ್ಯವಾತಕ್ಕೆ ಔಷಧವು :—ದುಡ್ಡು ತೂಕ ಸಾಸಿವೆ, ದುಡ್ಡು ತೂಕ ಮೆಣಸು, ಚನ್ನಂಗಿ ಅಕ್ಕಿ ಹಿಡಿ ೮, ಕಸ್ತೂರಿ, ಕೊಗ್ಗಿ ಬೇರು ೧ ಹಿಡಿ, ಆವಿನ ಮಜ್ಜಿಗೆಯಲ್ಲಿ ಎರಡು ಸರಿ ಪಾಕ ಮಾಡಿ ಕೊಳ್ಳೆ ಶೈತ್ಯವಾತ ಮಾಣುವುದು.

ಗಂಡಮಾಲೆಗೆ :—ಆವಿನ ಕೊಂಬಿನ ... .... ... .... ಡ್ಲು, ಸಮುದ್ರಹಾಗಲಕಾಯಿ ಬೇರು, ಸೊಪ್ಪು, ... .... .... ಹೊನಗನ್ನೆ ಬೇರು, ಅಂಬಿಲದಲ್ಲಿ ಅರೆದು ಪೂಸೆ ಗಂಡಮಾಲೆ ಮಾಣುವುದು.

ಮೊಳೆಗೆ :—ಅರಿಸಿನವಂ ಚೂರ್ಣವಂ ಮಾಡಿ ಕಳ್ಳಿಹಾಲಲ್ಲಿ ಕಲಸಿ............ ಪಿಟ್ಟಿಯಂ ಮಾಡಿ ಮೊಳೆಗೆ ಉಣ್ಣೆಯಂ ತೊಡೆದು ಆ ಪಿಟ್ಟಿಯಂ ತೊಡೆಯಲು ಎಲ್ಲಾ ಮೊಳೆ ಕೆಡುಗುಂ. ದೊಡ್ಡಪುಚ್ಚಕಾಯ ರಸ ಸೇರು ೨, ಇದನ್ನಗ್ನಿಚೂರ್ಣ ಕೂಡಿ ಪಾಕ ಎತ್ತುವುದು. ೧ ಪುಚ್ಚನ ಕಾಯಿ ಹಲ ಅರೆದು ಉಬ್ಬಿ ತೂಕ ಮಾಡಿ ಪಾಕದೊಳಗೆ ಹಾಕುವುದು. ಗಂಧಿಗೆ ದ್ರವ್ಯ ಕೂಡಿ ಹಾಕುವುದು. ಪ್ರತಿಪಾಕ ಮಾಡಿ ಕಡೆಗೆ ಕಳಿಂಗ ಬೆರಸಿ ಹಿಪ್ಪಲಿ ಪಾವು ......ಮೊ ಪಾವು, ಲವಂಗ ವರಹ ತೂಕ, ಕಟುಕರೋಹಿಣಿ ೧ ತೂಕ, ಅಣಿಲೇಕಾಯಿ ಹೊಟ್ಟು ಅರೆಪಾವು, ತಾರೇಕಾಯ ಹೊಟ್ಟು ಅರೆಪಾವು, ಉಪ್ಪು ಅರೆಪಾವು, ಘಳಿಗೆ ೨ ಅಟ್ಟು ಇಳುಹುವುದು. ದಿನಾಗಲೂ ತಾರೇಕಾಯ ಪ್ರಮಾಣ ತೆಗೆದುಕೊಂಬುದು. ವಿರೇಚನೆ ಹೆಚ್ಚಿದರೆ ಮಜ್ಜಿಗೆ ಓಗರ. ಐದು ದಿನ ಭೂಮಿಪುಟ ಮಾಡುವುದು.............. ವುದು. ಮಯಿಕ್ಕಣಿಕನ ಬೇರು, ಸೊಪ್ಪು, ಬಲಮುರಿಸಿಗೆ ಚೂರ್ಣ, ಯವಕ್ಷಾರ, ಒಣಗಿಸಿ ಹಂಚಿನ ಒಲೆಮೇಲೆ ಇಕ್ಕಿ ಹುರಿಯುವುದು. ಇಷ್ಟನ್ನೂ ಹುಡಿಮಾಡಿ ಹಾಕುವುದು. ಹುಣಸೆ

22

ಸಿರೆ......ಕೆಲವು ಕೆಲವು ಬೋಗಿನೆ ಮಾಡಿ ಕೆಲವು ಹಾಕಿ ಮರ್ದನೆ ಮಾಡಿ ಪಾಕದ ಒಳಗೆ ಹಾಕುವುದು. (ಇದನ್ನು ಕೊಳ್ಳೆ) ಸಕಲರೋಗ ಮಾಣ್ಗುಂ.

ದೀಪನಕ್ಕೆ:—ರಸ, ಗಂಧಕ, ಮಯಿಲತುತ್ತ, ತಾಳಕ, ಶುಂಠಿ, ಮಣಿಸಿಲೆ, ಬಂಗಾಲ ಪಚ್ಚೆ, ಬಿಳಿಧೂಪ, ಚಿತ್ರಮೂಲ, ನೋಣಸು, ಸಹಮೂಲಕಬೇರು, ಕಿರುಮೂಲಕ, ಇವ ಚೂರ್ಣ ಮಾಡಿ ಕೊಳ್ಳುವುದು. ದೀಪನ ಹುಟ್ಟುವುದು, ದೇಹಪುಷ್ಟಿಯಹುದು, ಸತ್ವ ಹುಟ್ಟುವುದು, ಬ್ರಹ್ಮರಾಕ್ಷಸ ಮೊದಲಾದ ನಾನಾವರ್ಣಉನ್ಮಾದವೆಲ್ಲವೂ ಮಾಣ್ಗುಂ. ಇದು ಸಿದ್ಧಪ್ರಯೋಗ.

ಪಿತ್ತಕ್ಕೆ:—ನೆಲ್ಲಿಕಾಯ ಒಣಗಿದ ಬೀಜವ ತೆಗೆದು ಎರಡು ಹಲ ಪುಡಿಯಾಗೆ ಜೀರಿಗೆ ಹಲ ೧||, ಏಲಕ್ಕಿ ಹಲ ೧, ಕೊತ್ತಂಬರಿ ಹಲ ೧, ತವಕ್ಷೀರ ಹಲ ೧, ಶುಂಠಿ || ಹಲ, ನಾಗ ಕೇಸರಿ ಹಲ ಕಾಲು, ಹಿಪ್ಪಲಿ ಹಲ ಅರ್ಧ, ಖರ್ಜೂರ ಹಲ ಅರ್ಧ, ದ್ರಾಕ್ಷೆ ಹಲ ಅರ್ಧ, ಲಾಮಂಚ ಹಲ ಅರ್ಧ, ಕರಿಜೀರಿಗೆ ಹಲ ಅರ್ಧ, ಲವಂಗಚೆಕ್ಕೆ ಹಲ ಅರ್ಧ, ಅಣಿಲೇಕಾಯಿ ಹಲ ಅರ್ಧ, ಇವ ಕುಟ್ಟಿ ಚೂರ್ಣ ಮಾಡಿ ಶೋಧಿಸಿಕೊಂಡು ಇದರೊಳಗೆ ಸಮ ಸಕ್ಕರೆ ಬೆರಸಿ ಕೊಂಡು ನಿತ್ಯ ವರಹ ತೂಕ ಎರಡು ಹೊತ್ತು ಹದಿನೈದು ದಿನ ಕೊಳ್ಳಲು ಪಿತ್ತ, ಶಿರೋ ಭ್ರಮಣ, ಎದೆಉರಿ, ಉರಿಮೂತ್ರ, ಕರಪಾದತಾಪ, ಅರೋಚಕ, ಬಾಯಿಯಲ್ಲಿ ನೀರು ಸುರಿಯುವುದು ಇವು ಮಾಣ್ಪುವು.

ಅಮ್ಲಪೈತ್ಯಕ್ಕೆ :—ಶುಂಠಿ, ಹಿಪ್ಪಲಿ, ಜೀರಿಗೆ, ಕೊತ್ತಂಬರಿ, ನಾಗಕೇಸರಿ, ದ್ರಾಕ್ಷೆ, ಖರ್ಜೂರ, ತವಕ್ಷೀರ, ಸೊಗದೆಬೇರು, ಏಲಕ್ಕಿ, ಲವಂಗ, ನೆಲದಾಳಗೆಡ್ಡೆ, ಅತಿಮಧುರ, ಇವನ್ನು ಕುಟ್ಟಿ ಚೂರ್ಣ ಮಾಡಿ ಇದ್ದ ಹಾಗೆ ಸಮ ಸಕ್ಕರೆ ಬೆರಸಿಕೊಂಡು ೧೫ ದಿನ ಕೊಂಬುದು. ಅಮ್ಲಪೈತ್ಯ, ಅಸ್ತಿಗತ, ಅರೋಚಕ, ಎದೆಉರಿ, ನಾಭಿಉರಿ, ಇವು ಮೊದ ಲಾದ ಪೈತ್ಯವೆಲ್ಲ ಮಾಣ್ಗುಂ.

ಹುಣ್ಣಿಗೆ ಮದ್ದು:—ಅಡಿಕೆ, ಕಾಚು, ಈಶ್ವರಿ, ಬುಗುಡೆಬೇರು, ಅಕ್ಕಿಯ ರಸದಲ್ಲಿ ಮರ್ದಿಸಿ ಪೂಸುವುದು.

ಮದ್ದು ಬಿಡುವುದಕ್ಕೆ :—......ನೆಗ್ಗಿಲು, ಮರುತುಂಬೆಗಿಡ, ಇವ ಮೆಲ್ಲುವುದು. ಆವಿನ ಹಾಲು ಅನುಪಾನ.

ಕಾಮಾಲೆಗೆ :—ಏಲಕ್ಕಿ, ಕೊತ್ತಂಬರಿ, ಜೀರಿಗೆ, ಹಿಪ್ಪಲಿ, ಕುಂಬಳಬೀಜದ ತಿರುಳು, ಕರ್ಪೂರ, ಶಿಲಾಧಾತು, ದ್ರಾಕ್ಷೆಹಣ್ಣು, ಶುಂಠಿ, ಇವಂ ಸಮಗೊಂಡು ಚೂರ್ಣವ ಮಾಡಿ ಅಕ್ಕಿಗಚ್ಚಿನಲ್ಲಿ ಸಕ್ಕರೆ ಬೆರಸಿ ಕೊಳ್ಳಲು ಕಾಮಾಲೆ, ಪೈತ್ಯಮುಂ ಮಾಣ್ಗುಂ. ಪಥ್ಯ ಮೊಸರು, ಕಟುವರ್ಜಗರ. ನೆಲ್ಲಿಯ ಚಟ್ಟು, ಅಣಿಲೇಕಾಯಿ, ಬಾಳದ ಬೇರು, ಶ್ರೀಗಂಧ, ಮಂಜಿಷ್ಠೆ, ಅರಿಸಿನ, ಏಲಕ್ಕಿ, ಭದ್ರಮುಸ್ತೆ, ಖರ್ಜೂರ, ಕಾಡವರೆ, ಇವ ಚೂರ್ಣ ಮಾಡಿ

ಸಮ ಸಕ್ಕರೆ ಬೆರೆಸಿ ಅರೆತೂಕ ಅಕ್ಕಿಗಟ್ಟಿನಲ್ಲಿ ಕೊಂಬುದು. ರಕ್ತಮೂತ್ರ, ಕಾಮಾಲೆ, ಉದರಛರ್ದಿ, ಆಮ್ಲಪಿತ್ತ, ರಕ್ತಾತಿಸಾರ, ಉಷ್ಣ ಇವು ಮಾಣುವುವು. ನೀಲಿಯನರೆದು ಎಣ್ಣೆ ಯಾ ಅಳೆಯಲ್ಲಿ ಕಲಸಿ ಕುಡಿಯೆ ಕಾಮಾಲೆ ಮಾಣ್ಗುಂ.

ಕಪಾಲಶೂಲೆ, ಅರೆದಲೆಬೇನೆಗೆ :—ಕೋಷ್ಟ ಗಳ ತೂಕ ಸಣ್ಣನಾಗಿ ಅರೆದು ಎಣ್ಣೆ ಯಲ್ಲಿ ಕಲಸಿ ತಲೆಗೆ ಪೂಸಿ ಎಕ್ಕೆಯ ಎಲೆಯಲ್ಲಿ ಹೊಪ್ಪಿಗೆ ಹೊಲಿದು ತಲೆಗೆ ಸಿಕ್ಕಿಸು ವುದು. ಇದರಿಂದ ಕಪಾಲವಾಯು ಮಾಣ್ಗುಂ. ಈಶ್ವರಿಯ ಬೇರನ್ನೂ ಅದರ ಸೊಪ್ಪನ್ನೂ ತಂದು ರಸ ಹಿಂಡಿ ಆ ಬೇರನ್ನು ಆ ರಸದಲ್ಲಿ ತೇದು ಹತ್ತಿಯಲ್ಲಿಯಾಗಲೀ ವೀಳ್ಯದ ಎಲೆಯಲ್ಲಿ ಯಾಗಲೀ ಮೂಗಿಗೆ ನಸ್ಯಂ ಮಾಡಲು ದಿನ ೩ ಕ್ಕೆ ಅರೆದಲೆಬೇನೆ ಮಾಣ್ಗುಂ.

ಯಂತ್ರಾಪೀಡೆಗೆ :—ನೆಲಗುಮ್ಮುಡಿ ಬೇರು ತಂದು ಒಣಗಿಸಿ ಚೂರ್ಣವ ಮಾಡಿ ವಸ್ತ್ರ ಗಾಳಿತ ಮಾಡಿ ಕುಪ್ಪಿಗೆಯಲ್ಲಿ ಹಾಕುವುದು ಆ ಕಂತೆಪ್ರಕಟ್ಟುವುದು. ಗರ್ಭ ೫ ತಿಂಗಳು, ೭ ತಿಂಗಳು ಅದಕ್ಕೆ ಅಡಿಗೆ ಮಾಡಿ ಕೊಡುವುದು. ಯಂತ್ರಾಪೀಡೆ ಮಾಣ್ಗುಂ. ಪಥ್ಯ ಹುಳಿ, ಉಪ್ಪು, ಅವರೆ, ಬದನೆಯ ಕಾಯಿ, ಸಾಸುವೆ ಇವು ವರ್ಜಿತ.

ಮೂತ್ರಕಟ್ಟಿಗೆ :—ಗರಿಕೆಬೇರು, ಯಷ್ಟಿಮಧುಕ, ನೆಗ್ಗಿಲಬೇರು, ತ್ರಿಫಲೆಯ ರಸ ದಲ್ಲಿ ಅಟ್ಟು ಕರ್ಪೂರ, ಶಿಲಾಧಾತುವುಂ ಪ್ರತಿಪಾಕವಿಕ್ಕಿ ಕುಡಿಯೆ ಎಲ್ಲ ಮೂತ್ರಕೃಛ್ರ ಮಾಣ್ಗುಂ.

ಯೋನಿಯಲ್ಲಿ ಸುರಿವ ರಕ್ತಕ್ಕೆ :—ಪುಷ್ಕರಮೂಲ, ನಾಟಿ, ಹಿಪ್ಪಲಿ, ಗಾಡಿಬಲೆಬೇರು, ಉತ್ತರಣೆಬೇರು, ನೆಲ್ಲಿಬೇರು, ಇವಂ ಅಕ್ಕಿ ಯಂತೆ ಬಿಟ್ಟುಗುಟ್ಟಿ ತುಪ್ಪದಲ್ಲಿ ಸೇವಿಸಲು ವ್ರಣ ಕೆಡುಗುಂ. ಉತ್ತರಣೆಬೇರು, ಹಿಪ್ಪಲಿ, ಅಕ್ಕಿಗಟ್ಟಿನಲ್ಲಿ ಅರೆದು ಸಕ್ಕರೆ ಬೆರಸಿ ಕೊಡಲು ವ್ರಣ ಕೆಡುಗುಂ. ಜಿಲುವಾದ ಅರುವೆಯ ಸುಟ್ಟು ಭಸ್ಮ ಮಾಡಿ ತಂಗಳನೀರಲ್ಲಿ ಬೆರೆದು ಕಟ್ಟಿ ಕುಡಿಯಲು ಸೋರುವ ರಕ್ತ ಇಪ್ಪತ್ತು ವರುಷವಾದರೂ ಹೋಗುವುದು. ಇದಕ್ಕೆ ಪಥ್ಯ ಗಂಜಿ, ಅನ್ನ. ಹುಳಿ, ಉಪ್ಪು ವರ್ಜ್ಯ.

ಮೂತ್ರಕೃಛ್ರಕ್ಕೆ:—ಮಲ್ಲಿಗೆ, ಇದರ ಕಷಾಯವಂ ಶಿಲಾಧಾತು ಪ್ರತಿಪಾಕವಿಕ್ಕಿ ಕುಡಿ ಯೆ ಮೂತ್ರಕೃಛ್ರ ಕೆಡುಗುಂ. ದ್ರಾಕ್ಷೆಯಹಣ್ಣು, ಸ್ವಾದಿಬೀಜ, ಸಕ್ಕರೆ, ನೂಸರ ನೀರಲ್ಲಿ ಕಾಸಿ ಕುಡಿಯೆ ಮೂತ್ರಕೃಛ್ರ ಕೆಡುಗುಂ. ಬದಿತ್ಯಭಕ್ತನ ಬೇರು, ನೆಗ್ಗಿಲು, ಪಾಷಾಣಭೇದಿ, ಶಿಲಾಧಾತು, ಪ್ರತಿಪಾಕವಿಕ್ಕಿ ಕುಡಿಯೆ ಮೂತ್ರಕೃಛ್ರ ಕೆಡುಗುಂ. ಪಾಷಾಣಭೇಧಿ, ಕಾಡಮಲ್ಲಿ ಗೆಯ ಬೇರು ಕಲ್ಕಮಾಡಿ ಗೋಕ್ಷೀರದಲ್ಲಿ ಯಾ ಅಲ್ಲಕ್ಷೀರದಲ್ಲಿ ಕಲಸಿ ಕುಡಿಯೆ ಅಶ್ಮರೀಯಂ ಮೂತ್ರಕೃಛ್ರ ಕೆಡುಗುಂ. ಶ್ರೀಗಂಧ, ಬಾಳ, ನೆಗ್ಗಿಲು, ಪಾಷಾಣಭೇಧಿ, ಬದಿತ್ಯಭಕ್ತ, ಮಲ್ಲಿಗೆಬೇರು, ಇವಂ ಕಷಾಯವಂ ಕಾಸಿ ಶಿಲಾಧಾತು ಪ್ರತಿಪಾಕವಿಕ್ಕಿ ಕುಡಿಯೆ ಅಶ್ಮರಿ ಮೂತ್ರಕೃಛ್ರ ಕೆಡುಗುಂ.

ಛರ್ದಿಗೆ :—ಎರಡು (ಪಾವು) ಜೀರಿಗೆ, ೩ ಪಾವು ಕೊತ್ತುಂಬರಿ, ತ್ರಿಕಟುಕ, ತಿಗಡೆ, ಚಿತ್ರಮೂಲ, ಸೈಂಧವ, ಇನಿತಂ ಚೂರ್ಣವ ಮಾಡಿ ಸಕ್ಕರೆ ಬೆರಸಿ ಕುಡಿಯೆ ಛರ್ದಿ ಕೆಡುಗುಂ.

ಪ್ರಮೇಹದ ಕಲ್ಲಿಗೆ :—ಕಾಡಗೋಳಿಯ ಬೀಜ ಅರ್ಧ ಹಣ ತೂಕವನ್ನು ಸಣ್ಣ ಬಿಳು ಗಾರ ಇವನ್ನೂ ತಿಲತೈಲದಲ್ಲಿ ಕೊಡುವುದು.

ಉರಿಮೂತ್ರಕೃಛ್ರಕ್ಕೆ, ನೀರುತಾಪಕ್ಕೆ, ಮೇಹಕ್ಕೆ :— ಎರಡು ಪಡಿ ಆಡಿನ ಮೂತ್ರ ಒಂದುಪಡಿ ಆಗುವ ಪರ್ಯಂತರ ಕಾಸಿ ಅದರೊಳಗೆ ಒಂದುಪಡಿ ಹಳೇಕಿಟ್ಟದ ಪುಡಿಯ ಹಾಕಿ ಚೆನ್ನಾಗಿ ಕೂಡಿಸಿ ಇಳುಹಿಕೊಂಡು ಅರ್ಧ ಹುಣಸೇಬೀಜದಷ್ಟು, ನೆಲ್ಲಿಕಾಯಷ್ಟು ಸಕ್ಕರೆ ಬೆರಸಿ ಕೊಡಲು ಮೂತ್ರಕೃಛ್ರ, ಪ್ರಮೇಹಕಲ್ಲು, ಉರಿಮೂತ್ರಗಳು ಮಾಣುವುವು. ಇದ ಮೇಹಗಡಣ, ಜಲಗರ, ನೀರುಬಲ್ಲೆಯವರಿಗೆ ಮೂರು ಹುಣಸೇಬೀಜದಷ್ಟು ಕೊಟ್ಟು ಮಧುರ ಆಹಾರವಿಕ್ಕಲು ಬಲ್ಲೆ ಮಲದೊಳಗೆ ಬೀಳುವುದು. ಯಷ್ಟಿಮಧುಕ, ದ್ರಾಕ್ಷೆಹಣ್ಣು, ಬೆಲ್ಲವತ್ತದ ಹಣ್ಣು, ಈ ಮೂರನ್ನೂ ಕಷಾಯವ ಕಾಸಿ ಕೊಟ್ಟರೆ ನೀರುತಾಪ ಬಿಡುವುದು. ಬೆಲ್ಲವತ್ತದ ಹಣ್ಣು, ಗರಿಕೆಬೇರು, ಸಂಜೀವತಿಗುಡು ಅದರೊಳಗಣ ತತ್ತಿಯ ತೆಗೆದು ಕಂಗುಂಗೆಯ ಗೆಡ್ಡೆಯ ಮೇಲಣ ಸಿಪ್ಪೆಯನ್ನೆಲ್ಲಾ ಸುಲಿದು ಇವು ನಾಲ್ಕನ್ನೂ ಒರಳಲ್ಲಿ ಕುಟ್ಟಿ ಕಷಾಯವ ಕಾಸಿ ಕುಡಿಯಲು ನೀರುತಾಪ ಬಿಡುವುದು. ಜಾಯಿಕಾಯಿ ಎರಡುತೂಕ, ಜಾಯಿ ಪತ್ರೆ ಎರಡುತೂಕ, ಭೂರ್ಜತಿಗಡು ಎರಡುತೂಕ, ದ್ರಾಕ್ಷೆಹಣ್ಣು ಎರಡುತೂಕ, ಖರ್ಜೂರ ಎರಡು ತೂಕ, ಕೊಳವಳಿಕೆ ಬೀಜ ಎರಡು ತೂಕ, ಬೆಲ್ಲವತ್ತದ ಹಣ್ಣಿನ ತಿರುಳು ಎರಡು ತೂಕ, ಯಷ್ಟಿಮಧುಕ ಎರಡುತೂಕ, ಇವಿಷ್ಟನ್ನು ಚೂರ್ಣವ ಮಾಡಿ ವಸ್ತ್ರದಲ್ಲಿ ಶೋಧಿಸಿ ತಕ್ಕಷ್ಟು ಚೂರ್ಣವ ತೆಗೆದುಕೊಂಡು ಜೇನುತುಪ್ಪದಲ್ಲಿ ಕಲಸಿ ಮೂರು ಸೊಂಡೆಕಾಯಷ್ಟು ಮೂರು ಗುಳಿಗೆ ಮಾಡಿ ಒಂದೊಂದು ಗುಳಿಗೆಯ ಒಳ್ಳೇ ಎಣ್ಣೆಯಲ್ಲಿ ಹೊರಳಿಸಿ ಮೆಲ್ಲುವುದು. ಬಹು ಮೂತ್ರ ಇಪ್ಪತ್ತು ದಿನಕ್ಕೆ ಗುಣವಹುದು. ಉದಯಹೊತ್ತು ತೆಗೆದುಕೊಂಬುದು. ಪಥ್ಯ ತೊಗರಿ ಬೇಳೆ, ನುಗ್ಗೆಸೊಪ್ಪು ಕೂಡ ಅಡಿಗೆ ಮಾಡಿ ಚವುರುಪ್ಪ ಹಾಕಿ ಉಂಬುದು. ಹೀರೆ ಕಾಯಿ, ಪಡವಲಕಾಯಿ, ಒಳ್ಳೆಎಣ್ಣೆ, ಕಹಿಹೀರೆ ಸೊಪ್ಪು, ಆವರಿಕೆ ಕೊನರು, ತಾರೆಸೊಪ್ಪು, ಕೊನರು, ಹಿಂಡಿ ಹಾಕಿ ಅಡಿಗೆ ಮಾಡುವುದು. ಪಥ್ಯ ನೀರುಮಜ್ಜಿಗೆ, ಬೆಣ್ಣೆ, ತೊಗರಿಕಟ್ಟು, ಉಪ್ಪು ವರ್ಜ್ಯ.

ಕಾಮಾಲೆಗೆ :—೧ ಪಲ ರಸ, ಗಂಧಕ ೨, ಮಯಿಲತುತ್ತ, ........ತಾಳಕ, ಮಣಿ ಶಿಲೆ, ಬಂಗಾಲಪಚ್ಚೆ, ಬಿಳಿಧೂಪ, ಚಿತ್ರಮೂಲ, ಮೆಣಸು, ಶುಂಠಿ, ಕಪ್ಪಲಿ, ಇವ ಮರ್ದಿಸಿ ಕಾಸಿ ಆರಿಸಿ ಸಕ್ಕರೆ ಬೆರಸಿ ತುಪ್ಪ, ಹಿಪ್ಪಲಿ ಪ್ರತಿಪಾಕವಿಕ್ಕಿ ಕುಡಿಯೆ ಕಾಮಾಲೆ ಕೆಡುಗುಂ. ನೀಲಿಯ ರಸ, ತ್ರಿಫಲ, ಸಕ್ಕರೆ ಬೆರಸಿ ಕುಡಿಯೆ ಕಾಮಾಲೆ ಕೆಡುಗುಂ. ತ್ರಿಕಟುಕ, ಚಿತ್ರಮೂಲ, ಕಬ್ಬಿಣಕಿಟ್ಟ, ಇವ ಚೂರ್ಣವಂ ಮಾಡಿ ಅಳಲೆಯಲ್ಲಿ ಕುಡಿಯೆ ಪಾಂಡುರೋಗ ಕೆಡುಗುಂ.

ಮೂತ್ರಕೃಛ್ರಕ್ಕೆ :—ಬಿಳಿದುರುಚೆ, ಆಣೆಲೇಕಾಯಿ, ಪಾಷಾಣಬೇಧಿ, ನೆಲದಾಳ, ಕೊತ್ತಂಬರಿ, ಕಕ್ಕೇಹಣ್ಣಿನ ತಿರುಳು, ಇವ ಕಷಾಯವ ಕಾಸಿ ಸಕ್ಕರೆ ಹಾಕಿ ಪಾಕವಿಕ್ಕಿ ಕೊಳ್ಳಲು ಮೂತ್ರಕೃಛ್ರ, ಕಟಿಯ ಉರಿ, ಮೂತ್ರಶೂಲೆ ಮಾಣ್ಗುಂ. ಹಿಪ್ಪಲಿ, ಏಲಕ್ಕಿ, ಪಟಿಕ, ಅಕ್ಕಿ ಗಚ್ಚಿನಲ್ಲಿ ಕೊಡಲು ಮೂತ್ರಕೃಛ್ರ ಮಾಣ್ಗುಂ.

ವ್ರಣಕ್ಕೆ ಮದ್ದು:—ಮುರುದಾರಸಿಂಗಿ, ಬಂಗಾಳಪಚ್ಚೆ, ಮುಸ್ತಕಿ, ಪಾಟ, ತುತ್ತ, ಸುರುಗಡ, ಹರಿದಳ, ಪಟಿಕ, ಇಂಗಲೀಕ, ಕಾಚು, ಕಸ್ತೂರಿ, ಅರಿಸಿನ, ಮಯಿಲತುತ್ತ, ಕರ್ಕಟಕಶೃಂಗಿ, ನಾಭಿ, ಮಣಿಶಿಲೆ,................ಕತ್ರಿಯ ಬೀಜ, ಹುರಿಹುರಿಯ ಬೀಜ, ಮುಷ್ಟಿಯ ಬೀಜ,............ಮುತ್ತಗಸೆಕ್ಕೆ, ಭಾವಂಜಿಯ ಬೀಜ, ಇವಂ ಒಂದು ಬಿಸಲಿಗೆಯಂ ತುಂಬಿ ಮೇಲೆ ಬಿಸಲಿಗೆ ಮುಚ್ಚಿ ಸಿರುಮಣ್ಣುಗೊಂಡು ಬಾಯ ಪೂಸಿ ನೆಲದಲ್ಲಿ ಗುಳಿಯ ಮಾಡಿ ಬಿಸಲಿಗೆ ಇಕ್ಕಿ ಮೇಲಣ ಬಿಸಲಿಗೆಗೆ ಕಂಡಿಯ ಕೊರೆದು....... ..ಲಕಾಡು.......ಬೆಣ್ಣೆ ಬೆರಸಿ ಬೆಂಕಿಯನಿಕ್ಕೆ ತೈಲಲೇಪ ಬರುವುದು. ಆ ತೈಲವ ತೆಗೆದು ಬಲೆಗೆ ತೊಡೆದು ವ್ರಣಕ್ಕೆ ಹಾಕೆ (ವ್ರಣ ಹರ.)

ನಾನಾವ್ರಣಕ್ಕೆ :—ಚಿತ್ರಮೂಲ ಲೇಪಯಿಕ್ಕಲು ... ... .... ಬೀಜ, ನೆಡಿತಂಗಡಿ ಬೀಜ, ಭವಂಜಿ ಬೀಜ, ಬೇವಿನ ಬೀಜ, ಹಾವಿನ ... ... .... ಇವಂ ಅಂಬಿಲದಲ್ಲಿ ಅರೆದು ಹುಲಿಗಿಲಎಣ್ಣೆಯಲ್ಲಿ ಅರೆದು ಇಕ್ಕಲು ನಾನಾವ್ರಣ ತೀರ್ಗುಂ. ಕಾಚು, ಕಗ್ಗಲಿ, ಹಿಕ್ಕೆ, ಕರಿಜೀರಿಗೆ, ಏಲಕ್ಕಿ, ಮಣಿಶಿಲೆ, ಗಂಧಕ, ಇವಂ ಆಕಳ ಬೆಣ್ಣೆಯಲ್ಲಿ ತಳಿಗೆ ಮೇಲೆ ತಾಮ್ರದ ಚೆಂಬಿನಲ್ಲಿ ಆರಿಸಿ ವ್ರಣಕ್ಕೆ ಹಚ್ಚಲು ದುಷ್ಟವ್ರಣ ಮಾಣ್ಗುಂ. ಮನುಷ್ಯನ ತಲೆ ಎಲುವ ತಂದು ಚೂರ್ಣವ ಮಾಡಿ ವ್ರಣಕ್ಕೆ ಹಾಕಲು ಕುರುಕುಹುಣ್ಣು ಮಾಣ್ಗುಂ.

ಮೇಗಾಲು ಹುಣ್ಣಿಗೆ :—ಅಂಕೋಲೆ ಬೀಜ, ಮುಸ್ತೆ, ಕರಿಜೀರಿಗೆ ಗ ೨, ಶಂಗಡಿ ಸೆಕ್ಕೆ ಸೇ ೨, ಮುಷ್ಟಿಗೆ ಸೆಕ್ಕೆ ಸೇ ೨, ... ... ... ... ಡ ಮರದ ಸೆಕ್ಕೆ ಸೇರು ೨, ಇವಂ ತೈಲವಂ ತೆಗೆದು ಇದರೊಳಗೆ ಇಕ್ಕುವ ದ್ರವ್ಯ—ಕಾಚು, ಶುಂಠಿಚೂರ್ಣ, ಮೈಲತುತ್ತ, ಬಿಳಿಯ ಧೂಪ, ಕಾಕಿಮಾರೀಬೀಜ, ಅರಿಸಿನ, ಇವಂ ಚೂರ್ಣವಂ ಮಾಡಿ, ಆ ತೈಲದೊಳು ಮರ್ದಿಸಿ ಅರ್ಚನೆಯಂ ಮಾಡಿ ವ್ರಣಕ್ಕೆ ಹಚ್ಚಲು ಮೇಗಾಲುಹುಣ್ಣು ಮಾಣ್ಗುಂ. ಆವ ವ್ರಣರೋಗಕ್ಕೂ ಇದೇ ಔಷಧ.

ಗಂಡಮಾಲೆಗೆ :—ಅಮಳಸರ ಗ ೧, ಮೈಲುತುತ್ತ ಗ ೧, ಜಾಯಿಪತ್ರೆಯ ಬೀಜ ಗ ೧, ಇಲಿಕಿವಿ ಬೀಜ ಗ ೧, ಕಗ್ಗಲಿಯ ಬೀಜ ಗ ೧, ಕೆಂಪು ಕಣಿಗಿಲ ಸೆಕ್ಕೆ ಗ ೧, ಬಿಳಿಯ ಧೂಪ ಗ ೧, ಕರಿಜೀರಿಗೆ ಗ ೧, ಇವಂ ಗರುಗದ ರಸದಲ್ಲಿ ಮರ್ದಿಸಿ ಚೂರ್ಣವಂ ಮಾಡಿ ಆಕಳ ಬೆಣ್ಣೆಯಲ್ಲಿ ಸಮ ಮಾಡಿ ಹಾಕುವುದು.

ಹುಣ್ಣಿಗೆ :— ಬಿಳಿಧೂಪ ಗ ೧, ಮುರುದಾರಸಿಂಗಿ, ಮೈಲುತುತ್ತ ಗ ೧, ......ಗ ೧, ಎಲೆಮಧು ಗ ೧, ಕಾಕಿಮಾರಿಬೀಜ, ಇವಂ ಚೂರ್ಣವಂ ಮಾಡುವುದು. ಕಂಟದ ಮೇಲಣ ಎಣ್ಣೆ ಪಾವು, ಮೇಣ ವರಹ ಇಕ್ಕಿ ಇವ ಎರಡ ಬೆಂಕಿಯಲ್ಲಿ ಕಾಸಿ ಈ ಚೂರ್ಣ ಆ ಎಣ್ಣೆಯಲ್ಲಿ ಹೊಯ್ದು ತಳಿಗೆಯಲ್ಲಿ ತಣ್ಣೀರ ಹೊಯ್ದು ಆ ನೀರೊಳು ಈ ಎಣ್ಣೆಯ ಹೊಯ್ದು ಕಲಕಿ ನಾಲ್ಕು ಘಳಿಗೆ ಕೈಯಲ್ಲಿ ಹಿಸುಕಲು ಬೆಣ್ಣೆಯ ರೂಪ ಬರುವುದು. ಅದ ತೆಗೆದು ಭರಣಿ ತುಂಬಿ ವ್ರಣಕ್ಕೆ ಹಾಕಲು ಹಳೇವ್ರಣ ತೀರ್ಗುಂ. ಮುಸ್ತಕ, ಮೈಲತುತ್ತ, ಸುಡುಗರೆ, ಬಂಗಾಳ ಪಚ್ಚೆ, ಕಾಕಿಮಾರಿಬೀಜ, ಹಿರಿಮದ್ದು, ಕಾಚು, ಜೋಳ, ಇವುಗಳ ಚೂರ್ಣ, ಒಳ್ಳೆಯೆಣ್ಣೆ ಕಾಯ

ಲಿಕ್ಕಿ ಮೇಣ ಪಾವುಗ್ಯೆದು ಸಮಭಾಗ ಪುಡಿ ಮಾಡಿ ಆ ಎಣ್ಣೆಯೊಳಗೆ ಹಾಕಿ ಹುಣ್ಣಿಗೆ ಹಾಕುವುದು. ಮುರುದಾರಸಿಂಗಿ, ಆಕಳ ಬೆಣ್ಣೆಯಲ್ಲಿ ಮರ್ದನೆ ಮಾಡಿ ನಾನಾ ವ್ರಣಕ್ಕೆ ಹಾಕುವುದು. ............ಪುಡಿಗೆ ತೊಣಚಿಗೆ, ಒಳ್ಳೆಎಣ್ಣೆ, ಬೇವಿನ ಎಣ್ಣೆ, ............ಖಳ, ಗುರುಗಂಜಿ ಬೇರು, ಸೂರ್ಯಪುಟದ ಹುಳುಕು, ......... ಕಣಗಿಲ ಬೇರು, ಕಾಸಲಿರಿಸುವುದು. ತಂಗಡಿ.........ಕೆ ಪುಡಿ ಮಾಡಿ ಶೋಧಿಸಿ ಕಾಲುಹುಣ್ಣಿಗೆ ಒಳ್ಳೆ ಎಣ್ಣೆಯಂ ತೊಡೆದು ಈ ಪುಡಿಯಂ ಹಾಕಲು ವ್ರಣ ತೀರ್ಗುಂ.

ವ್ರಣಕ್ಕೆ :—ಕಣಗಿಲಬೇರು, ತೊಟ್ಟೆ ಬೇರು, ಅರಿಸಿನ, ಬಿಳಿಧೂಪ, ಮಣಶಿಲೆ, ಮಣ್ಣು ಕೊಟ್ಟು ಅಜದ ಪಿಚಿಕೆಯಲ್ಲಿ ನಿತ್ಯವೂ ಮಣ್ಣು ಹಾಕುವುದು. ಮೂವತ್ತೊಂದು ದಿವಸ ಅದು ಕರಗಿ ಏಕವಹುದು. ತಾಮ್ರದ ಮೇಲೆ ಅಷ್ಟಭಾಗದಲ್ಲಿ ೧ ಭಾಗ ಹಾಕುವುದು. ಬಳ್ಳ ೮ ಕೊಂಡಗಳ್ಳಿ ಹಾಲ ತಂದು ಕಾಸಿ ಹೆಸರಿನಲ್ಲಿ ಕಲ್ಲುಪ್ಪು ಪುಡಿಯ ಹಾಕಿ ತಿಳಿ ತೆಗೆದುಗೊಂಡು ಶೋಧಿಸಿ ಅದನ್ನು ಸಾಟಿನ ಒಳಗೆ ಇಲಿಪಾಷಾಣ ವರಹ ತೂಕ ಇಕ್ಕಿ ಗೋಧಿಹಿಟ್ಟ ಸುತ್ತಕಟ್ಟಿ ಇಪ್ಪೇಎಣ್ಣೆಯಲ್ಲಿ ಮರ್ದಿಸಿ ಅದ ಬಳಿಕ ನೆಲಮೂಸೆ ಮಾಡಿ ಬದಲು ಮೂಸೆ ಮಾಡಿ ಆ ಮೂಸೆಯೊಳಗೆ ಬಟ್ಟಲ ಮಡಗಿ ನೆಲಮೂಸೆಯೊಳಗಿಕ್ಕಿ ಮೇಲೆ ತಾಮ್ರದ ರೇಕ ಮಾಡಿ ಮುಚ್ಚುವುದು. ಮುಚ್ಚಿ ಜಂಬಿ ಪು............ ಕಟ್ಟಗೆದು ೩ ತೂಕ ಸತುವಿನ ಬಟ್ಲು, ದು ೩ ತೂಕ ರಸ, ಬಟ್ಲಿನ ಒಳಗೆ ಹಾಕುವುದು. ಅದರೊಳಗೆ ಹರೆಬರೆ ಹುಳಿ ಹೊಯ್ದು ಅದನ್ನು ನಿತ್ಯ ಹುಳಿ ಹೊಯ್ದು ಬಿಸಿಲಿನಲ್ಲಿ ಇರಿಸುವುದು. ಮೂವತ್ತೊಂದು ದಿನ ಆರಿಸಿ ಕಿಪಿಯಲ್ಲಿರಿಯಲು ಶೂಲೆವ್ರಣ ಮಾಣ್ಗುಂ. ಅಣಿಲೇಬೀಜ, ಮುಷ್ಟಿ ಬೀಜ, ನೀಲಿಸೆಕ್ಕೆ, ಗಾಂಧಾರಿಸಕ್ಕೆ, ಕಣಗಿಲ ಸಕ್ಕೆ, ಇವಂ ಅರೆದು ಹುಲಿಗಿಲೆಯೆಣ್ಣೆಯಲ್ಲಿ ಆ ರಸ ಇಕ್ಕಿ ಹಚ್ಚಲು ಹುಣ್ಣು ಮಾಣುವುದು. .........ಯಲಿ ದೀವಿಗೆ ಮುಡಿಸಿ ಜಯಪುಟವ ಕೊಡುವುದು. ಅದು ಅರಳಿದರೆ ತಾಮ್ರದ ಮೇಲೆ ಹಾಕುವುದು. ......... ಹುಣ್ಣು ತೊಳೆದು ಈ ಪುಡಿ ಆ ಹುಣ್ಣಿಗೆ ಹಾಕಲು ವ್ರಣಂಗಳು ಮಾಣುವುವು. ಅರಗು, ಅಣಿಲೇಕಾಯಿ, ಕರ್ಕಟಶೃಂಗಿ, ಕಾಚು, ಇಟ್ಟಿಗೆಪುಡಿ, ಇವಂ ಬೆಣ್ಣೆಯಲ್ಲಿ ತಳಿಗೆ ಮೇಲೆ ಮರ್ದಿಸಿ ಹುಣ್ಣಿಗೆ ಹಾಕುವುದು. ವ್ರಣ ಮಾಣ್ಗುಂ.

ಕಿವಿಕೀವು ಸೋರಿದರೆ :—ಇಂಗು, ಕೃಷ್ಣಾಂಜನ, ಒಳ್ಳೇ ಎಣ್ಣೆಯಲ್ಲಿ ಸೀವ ಹಾಗೆ ಕಾಸಿ ಅರಿದಳ ಅರೆದು ಆ ಎಣ್ಣೆಯಲ್ಲಿ ಹಾಕಿ ಕಜ್ಜಿಗೆ ಇಕ್ಕಲು ಕುರು ಕೆಟ್ಟು ಕಿವಿ ಕೀವು ತೀರ್ಗುಂ.

ನೂತಿಗೆ :—ಕುರುಟಿಗೆಯ ಹಾಲು, ಗರುಗದ ಹಸುರು, ಇದರಿಂದ ಗಂಧಕವ ನೆನಹಿ ಈ ಹಾಲಲ್ಲಿ ಮರ್ದಿಸಿ ಭರಣಿ ತುಂಬಿ ವ್ರಣಕ್ಕೆ ಬಿಗುರ, ಗಂಧಕ, ಏಲಕ್ಕಿಯಂ ಅರೆದು ಮೇಕೆ ಗಂಜಲದಲ್ಲಿ ಅರೆದು ಆಕಳ ಬೆಣ್ಣೆಯಲ್ಲಿ ಇಕ್ಕಲು ನೂತಿ ಮಾಂಬುದು. ಕಲ್ಲುಪ್ಪು, ಉಡುವಿನ ಎಲುವು, ಚೆನ್ನಂಗಿ ನೆಲ್ಲು, ಇವಂ ಅರೆದು ನಿಂಬೇಹುಳಿಯಲ್ಲಿ ಇಕ್ಕಲು ಗೆಡ್ಡೆ ಕರಗುವುದು.

**ಕುರಿಗೆ** :—ಅರಿದಳ, ಗೇರಹರಳಲ್ಲಿ ಕತ್ತರಿಸಿ ... ... ... ... ಪುಟವಲ್ಲಿ ತೈಲವ ತೊಯ್ದು ನೂತಿ, ಗಂಟು, ದುರ್ವ್ರಣ, ವ್ರಣಕ್ಕೆ ಹಾಕಲು ಸಕಲ ವ್ರಣ ಮಾಣುವುದು.

ಗೆಡ್ಡೆ ಕರಗುವುದಕ್ಕೆ :— ಮೈಲತುತ್ತ, ಚವುಳು, ಸಾಸಿವೆ, ಚೆನ್ನಂಗಿ ನೆಲ್ಲು, ನುಗ್ಗೆ ಸೆಕ್ಕೆ, ಇವ ಅರೆದು ಗೆಡ್ಡೆಗೆ ಲೇಪ ಮಾಡಲು ಗೆಡ್ಡೆ ಕರಗುವುದು.

ನೂತಿಗೆ :— ಬೇವಿನ ... ... ... ಇವಂ ಅರೆದು ಹುಲಿಗಿಲಎಣ್ಣೆಯಲ್ಲಿ ಕಾಸಿ ಆ ಹುಣ್ಣಿಗೆ ಹಚ್ಚಲು ದುರದ ನೂತಿ ಮಾಣ್ಗುಂ.

ದುರ್ವ್ರಣಕ್ಕೆ :—... ... ...ಸೆಕ್ಕೆ, ನವುಲಾಡಿಸೆಕ್ಕೆ, ಚಿತ್ರಮೂಲ, ಬೇಳದ ಸೆಕ್ಕೆ, ಬಿಳಿಗರಿಕೆ, ಅರಿಸಿನ, ಕಿರುಕಸಾಲೆ ಬೇರು, ಕೆಂಪಿನ ಕಣಿಗಿಲ ಬೇರು, ಮಾವು, ಇವ ಸಮಂ ಕೂಡಿ ಇವರೊಳಗೆ ದರಿಸೆಕ್ಕೆ ಸೇರು ಹಾಕಿ ಇವಂ ಹರವಿಯೊಳು ತುಂಬಿ ನೆರಳಲ್ಲಿ ಒಣಗಿಸುವುದು. ಒಣಗಿಸಿ ಸುಣ್ಣಗೆ ಕಲ್ಲಲ್ಲಿ ಮತ್ತೆ ಅರೆಯುವುದು. ಹುಲಿಗಿಲ ಎಣ್ಣೆ, ಅಂಬಿಲ, ಈ ಎರಡು ಸರಿಯಾಗಿ ಕೂಡಿ ಗಿದ್ದನದೊಳಗೆ ಕಾಸಿ ಕವಡಿ ಕುಡಿಗೆಯೊಳು ಇಕ್ಕಿಕೊಂಬುದು. ಕಜ್ಜಿಗೆ ತೊಡೆದು ಹಾಕುವುದು.

ಹುಣ್ಣಿಗೆ :—ಉತ್ತರಣೆ ಸೊಪ್ಪು, ಏಲಕ್ಕಿ, ಕಸ್ತೂರಿ, ಅರಿಸಿನ, ಇವ ತಣ್ಣೀರಲ್ಲಿ ಹದಮಾಡಿ ಅರೆದು ಹುರಿಮಾಡಿ ಹುಣ್ಣಿಗೆ ಹಾಕುವುದು.

ಹುಣ್ಣಿಗೆ :—ತಂಗಡಿ ಹೂವ ಸುಟ್ಟು ಕರುಕು ಮಾಡಿ ಹುಣ್ಣಿಗೆ ಮೇಲೆ ಹಾಕುವುದು.

ಆರದ ಹುಣ್ಣಿಗೆ :—ನಾಭಿ ತಳಿಗೆಯೊಳಗೆ ಸೆಸೆಹಾಕುವುದು. ಅಷ್ಟು ಚೂರಿಯಲ್ಲಿ ಸಣ್ಣಗೆ ಕತ್ತರಿಸಿ ತಳಿಗೆಯಂ ತುಂಬಿ ಸೋರೆ ಬೀಜ ದು ೧, ಕೆಂಪು ಹೀರೆಬೀಜ ದು ೧, ಬೇವಿನ ಬೀಜ ದು ೧, ... .... .... .... ವಿಸಿಕ ದು ೧, ಕೆಂಪುಕಣಿಗಿಲಬೇರು ದು ೧, ಇವಂ ಹುಲಿಗಿಲಎಣ್ಣೆಯಲ್ಲಿ ಅಟ್ಟು ಹುಣ್ಣಿಗೆ ಹಚ್ಚಲು ದುಷ್ಟವ್ರಣ ಮಾಣ್ಗುಂ. ............ಯಿ ಕಟ್ಟಿ ನೆಲದ ಮೇಲೆ ಇರಿಸುವುದು. ಮೂಗಿಗೆ ನಸ್ಯ ಮಾಡುವುದು. ............ ಪಥ್ಯ ಉಪ್ಪು ವರ್ಜ್ಯ. ಹಾಲುಅನ್ನ, ಹರಿವೆಸೊಪ್ಪು, ತೊಗರಿಬೇಳೆ, ಮೆಣಸು, ಬೆಳ್ಳುಳ್ಳಿ, ಗೆಡ್ಡೆ, ಇದು ಪಥ್ಯ. ನಿಶಿಗೆ ಇದೇ ಮದ್ದು.

ಮೂಲವ್ಯಾಧಿಗೆ :—ರಸವ ಹಾಕಿ ಕಾಸುವುದು. ಕಾಸಿ ಪಾವಡದಲ್ಲಿ ಶೋಧಿಸುವುದು. ಕುಪ್ಪಿಗೆಯೊಳಗೆ ಆರಿಸಿರಿಸುವುದು. ಆ ರಸದೊಳಗೆ ಹಣ ತೂಕ ಕಸ್ತೂರಿ, ಹಣ ತೂಕ ಗೋರೋಚನ, ಹಣ ತೂಕ ಕುಂಕುಮದ ಹೂವು ಹಾಕಿ ಆ ರಸವ ಇದರೊಳಗೆ ತೆಗೆದುಕೊಂಬುದು. ಅರಿದಳ, ಸಿತಿನಿ, ನೆಗ್ಗಿಲಹೂವು, ಮಲ್ಲಿಗೆ ಹೂ, ... ...ಹೂ, ಸೇವಂತೀ ಹೂ, ಮುಳ್ಳುಸೇವಂತಿಗೆ ಹೂ.........ಗ, ಲಾಮಂಚ, ಮುಡಿವಾಳ, ಇವೆಲ್ಲ ಸಂಪಾದನೆ ಮಾಡಿ ಈ ಪುಷ್ಪವ ಗದ್ಯಾಣ ತೂಕವ ತೆಗೆದುಕೊಳ್ಳುವುದು .... .... .... .... ತುಪ್ಪವ ಸೇರು ಸಹ ... ... ... ಇಕ್ಕುವುದು. ನುಗ್ಗೆಹೂವು, ವಿಷ್ಣುಕ್ರಾಂತಿ ಹೂವು, ದಾಸವಾಳದ ಹೂವು, ಕೆಂಪಿನ ಕಣಗಿಲಹೂ, ನೆಲಗುಳ್ಳದ ಹೂ, ಬೇವಿನ ಹೂವು, ... ... ... ... ಎಕ್ಕೆ ಹೂವು,

ದಾಳಿಂಬದ ಕುಸುಮ, ಧಾತಕೀಕುಸುಮ, ಗೋರಂಟೆಯ ಹೂವು, ತಾಳಹೂವು, ಸ್ತ್ರೀತುಳಸಿ ತೆನೆ, ಲೋಳಿಸರದ ಹೂವು, ತಾವರೇಕುಸುಮ, ನಿಂಬೇಕಾಯಿಪುಷ್ಟು ಚೂರ್ಣ, ಕಾಲುಸೇರು ಎಳ್ಳು, ಬೆಲ್ಲ, ಇವು ಮೂರನ್ನು ಬಿಗುಳಿಕಟ್ಟಿ ಕೊಳ್ಳೆ ಮೂರು ದಿನದ ಮೇಲೆ ಆವ ಬಗೆಯ ಮೂಲವ್ಯಾಧಿಯೂ ಮಾಣ್ಗುಂ. ಹಳೇಗಾಣದ ಹಿಂಡಿ ಒಂದುಪಡಿ, ಒಂದುಸೇರು ನಾಯಿತುಳಸಿ ಬೀಜ, ಒಂದುಸೇರು, ನೆಲಆವರಿಕೆ ಪುಡಿ, ಒಂದುಸೇರು ಬೆಳ್ಳುಳ್ಳಿ, ಇವಂ ಒಂದು ಬಿಸಲಿಗೆಗೆ ಅದ್ದನ ನೀರು ಹೊಯ್ದು ಕುದಿಸಿ ದಪ್ಪನಾದ ಬೆಳ್ಳುಳ್ಳಿ ಗ ಮೆಲುವ ತಿಂಬುದು. ಐದು ದಿನ ದಿನ ಮೆಲುವುದು. ಆ ಮೇಲೆ ಎರಡು ಹಿಡಿ ಗಜ್ಜುಗನ ಸೊಪ್ಪು, ಚನ್ನಂಗಿಅಕ್ಕಿ ಕೂಡ ಪುಡಿ ಕುಟ್ಟಿ ರೊಟ್ಟಿ ಮಾಡಿ ಸವಿ ತುಪ್ಪ ಮೆಲ್ಲೆ ಎಂಥಾ ಮೂಲವ್ಯಾಧಿಯೂ ಮಾಣುವುದು.

ಇರುವಾಯಿ ಕಟ್ಟಿದ್ದಕ್ಕೆ :—ಬೆಳ್ಳುಳ್ಳಿಬೇಳೆ ಸುಟ್ಟು ಆ ಬೂದಿ ಅವುಡಲದ ಎಣ್ಣೆಯಲ್ಲಿ ಕಲಸಿ ಹೊಟ್ಟೆಗೆ ತೊಡೆಯಲು ಇರುವಾಯಿ ಕಟ್ಟಿದ್ದು ಮಾಣ್ಗುಂ.

ಕೆಂಪಿನ ಹೆನ್ನೆಗೆ :—ನಾಯಿಬೇಳದ ಸೊಪ್ಪನ್ನು ಎಣ್ಣೆಯಲ್ಲಿ ಅರೆದು ಕುಡಿಯಲು ಕೆಂಪಿನ ಹೆನ್ನೆ ಮಾಣುವುದು.

ಹೊಕ್ಕುಳುಶೂಲೆಗೆ :—ಖರ್ಜೂರ, ಹಿಪ್ಪಲಿ, ಇವ ಚೂರ್ಣವ ಮಾಡಿ ಸಕ್ಕರೆಯಲ್ಲಿ ಕೊಳ್ಳಲು ಹೊಕ್ಕುಳುಶೂಲೆ ಮಾಣ್ಗುಂ.

ರಕ್ತಪ್ರಮೇಹಕ್ಕೆ:—ಅಡ್ಡಸರ, ತಾವರೆಗೆಡ್ಡೆ, ಅಗುಳುಶುಂಠಿ, ಮುಡಿವಾಳ, ಕೊಡಸಿಗೆ, ಸಕ್ಕರೆ ಜೇನುತುಪ್ಪದಲ್ಲಿಯಾಗಲೀ ಅಕ್ಕಿಗಚ್ಚಿನಲ್ಲಾಗಲೀ ಕೊಡುವುದು, ರಕ್ತಪ್ರಮೇಹ ಮಾಣ್ಗುಂ.

ಗ್ರಹಣಿಗೆ :—ಜೀರಿಗೆ, ತ್ರಿಕಟುಕ, ಚಂದನಸೆಕ್ಕೆ, ಅಜವೋದ, ಬೂರುಗದ ಸೆಕ್ಕೆ, ಇವಂ ಬಂಗಿಸೊಪ್ಪಿನ ರಸದಲ್ಲಿ ಮರ್ದಿಸಿ ಹೊನ್ನುತೂಕ ಜೇನುತುಪ್ಪದಲ್ಲಿ ಕೊಡುವುದು. ಗ್ರಹಣಿ ಕಂಡ ಕಂಡ ಬೀಳು ಮಾಯುವುದು.

ಭೇದಿಗೆ :—ಶ್ರೀಗಂಧ, ಅಗಿಲು, ನೆಲ್ಲ ಅರಳು, ತುಪ್ಪದಲ್ಲಿ ಹೊಗೆಯ ಹಾಕೆ ಬೇಧಿ ಮಾಣ್ಗುಂ.

ವಿಷಮಶೀತಜ್ವರಕ್ಕೆ:—ನೆಲ್ಲಿಕಾಯಿ, ತಾರೇಕಾಯಿ, ಅಣಿಲೇಕಾಯಿ, ಕಟುಕರೋಹಿಣಿ, ಇವಂ ಕೂಡಿ ಕಷಾಯವಂ ಮಾಡಿ ಕೊಡಲು ವಿಷಮಶೀತಜ್ವರ ಮಾಣುವುದು.

ರಕ್ತಪಿತ್ತಕ್ಕೆ :—ಮೇಟಿಹುರುಳಿಯ ಬೇರ ತಂದು ಮೇಗಣ ತಿಗಡ ತೆಕ್ಕೊಂಡು ಸಣ್ಣನೆ ಅರೆದು ಅವರೆಪ್ರಮಾಣ ಗುಳಿಗೆಯಂ ಮಾಡಿ ಒಂದು ಗುಳಿಗೆ ಅಕ್ಕಿಗಚ್ಚಿನಲ್ಲಿ ಕೊಂಬುದು. ಬೆಳಗಾಗುವಾಗ ಒಂದುಗುಳಿಗೆ ಕೊಂಬುದು. ಗಂಜಿ ಓಗರ ಪಥ್ಯ. ಉಪ್ಪು, ಹುಳಿ ಐದುದಿನ ಮುಟ್ಟಲಾಗದು. ತುಂಬಲಿನೆರಿ ಮಾಣುವುದು. ಯೋನಿಯಲ್ಲಿ ಸುರಿವ ರಕ್ತ, ರಕ್ತ ಪಿತ್ತ ಕೆಡಗುಂ.........ಉತ್ತರಣೆ ಬೇರು, ನೇರಲ ತಿಗಡು, ಮಾವಿನ ಹಣ್ಣಿನ ರಸ, ನೈದಿಲ

ಗೆಡ್ಡೆ, ಇನಿತಂ ಅಕ್ಕಿಗಚ್ಚಿನಲ್ಲಿ ಅರೆದು ಸಕ್ಕರೆ ಬೆರಸಿ ಕುಡಿಯೆ ಉರಿ ರಕ್ತಪಿತ್ತ ಕೆಡುಗುಂ. ಉತ್ತರಣೆ ಬೇರು, ನೆಲ್ಲಿಯಬೇರು, ಇನಿತಂ ಅಕ್ಕಿಹಾಕಿ ಹಿಟ್ಟು ತೊಳಸಿ ಕೊಳ್ಳೆ ರಕ್ತಪಿತ್ತ ಕೆಡುಗುಂ.

ನೊಲೆನಾಗರಕ್ಕೆ :—ಮೂರುತೊಡೆ ಪರ್ಪಟಕ, ಗಿಣಿಮೂಗು, ಕಾಗೆದೊಂಡೆ, ಔಡಲದ ನಾರು, ಹಾವುಮೆಕ್ಕೆ, ಅರಿದಳ, ಹುಲಿಗಿಲಬೇರು, ಬೇವು, ಈ ಬೇರುಗಳು ; ಬೇವಿನ ಹರಳು, ಇಂಗು, ಬಜೆ, ಹಿಪ್ಪಲಿ, ಮೆಣಸು, ನೆಳಗಿನಬೇರು, ಕಡಲೆ, ಹುರುಳಿ, ಇವುಗಳ ರಸಗಳಂ ಸಮಾನಂಗೊಂಡು ಸಣ್ಣನಾಗಿ ಅರೆದು ಗುಳಿಗೆಯಂ ಮಾಡಿ ಭೂನಾಗರಹಣ್ಣಿನ ರಸದಲ್ಲಿ ನಸ್ಯವಂ ಮಾಡೆ ಹದಿನಾಲ್ಕು ತೆರೆದ ನೊಲೆನಾಗರ ಮಾಣ್ಗುಂ. ಮೈಲಿಕರಕು, ಬಾಳೇಎಲೆ, ಉತ್ತರಣೆ, ಸುಟ್ಟಸಾಸುವೆ, ಎಣ್ಣೆಯಲ್ಲಿ ಕಲಸಿ ಪೂಸೆ ಚಿಬುಡಿಗು, ತ್ರಿಕಟುಕ, ಅರಿದಳ, ಕೋಷ್ಠ, ಸಮುದ್ರಪಾಳ, ಇವ ಸಮಾನಂಗೊಂಡು, ಬ್ರಾಹ್ಮೀರಸದಲ್ಲಿ ಮೂರುದಿನ ನಸ್ಯವಂ ಮಾಡೆ ನಾನಾನೊಲೆನಾಗರ ಮಾಣ್ಗುಂ. ಬೇಲಬೀಜವಂ ನರಮೂತ್ರದಲ್ಲಿ ನಸ್ಯವಂ ಮಾಡಿ ಕಣ್ಣಿಗೆ ಹಚ್ಚೆ ನೊಲೆನಾಗರ ಕೆಡುಗುಂ. ಹಿಪ್ಪೆಎಣ್ಣೆ, ... ... ... ... ಬೇರ ಶನಿವಾರ ತಂದು ಸಣ್ಣನಾಗಿ ಕಲಸಿ ಗಡಿಗೆಯಂ ತುಂಬಿ ಆದಿತ್ಯವಾರ ತೈಲವಂ ತೆಗೆದು ಬಲಿಯನಿಕ್ಕಿ ನೊಲೆನಾಗರ ಕೆರಳಿದಾಗ ಕಣ್ಣಿಗೆ ಹಚ್ಚಿ ಮೂರುಬಾರಿ ಬಿಡದೆ ಮೂರುದಿನ ನಸ್ಯ ಮಾಡೆ ನೊಲೆನಾಗರ ತೀರ್ಗುಂ. ಗಣಿಜಿಲಬೇರ ನರಮೂತ್ರದಿ ನಸ್ಯವ ಮಾಡಿ ಕಣ್ಣಿಗೆ ಹಚ್ಚೆ ನೊಲೆನಾಗರ ತೀರ್ಗುಂ.

ನೀರುವ್ಯಾಧಿಗೆ :—ಕಾಡುನುಗ್ಗೆ, ಅರಳಿಸಿಪ್ಪೆ, ಮೊಗಸಿರೆ, ವಿಷ್ಣುಕ್ರಾಂತಿ, ಸೂರ್ಯಕಾಂತಿ, ಚಂದ್ರಕಾಂತಿ, ಮೈಲತುತ್ತ, ಬಂಗಾಲಪಚ್ಚೆ, ಹಿಪ್ಪಲಿ ೩, ಮೋಡಿ ೩, ಗರುಗ ಸೊಪ್ಪಿನ ರಸ, ಸೀಗೆರಸ, ಇವ ಮರ್ದಿಸಿ ಕೊಳ್ಳೆ ನೀರುವ್ಯಾಧಿ ಮಾಣ್ಗುಂ. ಪಥ್ಯ ಉಪ್ಪು, ಮೆಣಸು, ವರ್ಜ್ಯ.

ಮೂಲವ್ಯಾಧಿಗೆ :—ಭೂಚಿಕ್ಕೆಗೆಡ್ಡೆ ಪುಡಿ ಮಾಡಿ ಗುಳಿಯನಗೆದು ಒಂದಾಗಿ ಇದಕ್ಕೆ ಕೆಂಡವನ್ನು ಮಾಡಿ ಅದರ ಮೇಲೆ ಈ ಪುಡಿಯನ್ನು ಹಾಕಿ ಆ ಹೊಗೆಯನ್ನು ಆಸನಕ್ಕೆ ಹಿಡಿಸಿದರೆ ಮೊಳೆ ಕರಗಿ ಹೋಗುವುದು. ಮೂಲವ್ಯಾಧಿಗೆ ಔಷಧವಂ ಪೇಳ್ವೆ. ಅರಿಸಿನವಂ ಚೂರ್ಣವಂ ಮಾಡಿ ಕಳ್ಳಿಹಾಲಲ್ಲಿ ಕಲಸಿ ಪಿಟ್ಟೆಯಂ ಮಾಡಿ ಮೊಳೆಗೆ ಉಣ್ಣೆಯಂ ತೊಡೆದು ಆ ಪಿಟ್ಟೆಯಂ ತೊಡೆಯಲು ಎಲ್ಲಾ ಮೊಳೆಗಳುಂ ಕೆಡುಗುಂ. ನಾಂಗಲಿಕ, ಮೊಗನಹುವೆ, ಚಿತ್ರಮೂಲ, ತ್ರಿಕಟುಕ, ಸೈಂಧವ, ಎಕ್ಕೆಯಹಾಲು ಕಲಸಿ ಗುದದಲ್ಲಿ ಪೂಸೆ ಎಲ್ಲ ಮೂಲವ್ಯಾಧಿ ಕೆಡುಗುಂ. ಅರಿಸಿನ, ನವಿಲಪಿಷ್ಟಗಂಜಿ, ಇವನ್ನು ಮನುಷ್ಯರ ಮೂತ್ರದಲ್ಲಿ ಅರೆದು ದೇವದಾರಿಯ ರಸದಲ್ಲಿ ಕಲಸಿ ಮೊಳೆಗೆ ಪೂಸೆ ಎಲ್ಲಾ ಮೂಲವ್ಯಾಧಿ ಕೆಡುಗುಂ. ತುಪ್ಪ, ಸೈಂಧವ, ಕಹಿಹೀರೇಬೀಜ, ಇವನ್ನರೆದು ಗುದದಲ್ಲಿ ಕಟ್ಟೆ ಮೂಲವ್ಯಾಧಿ ಕೆಡುಗುಂ. ತ್ರಿಕಟುಕ, ಸೈಂಧವ, ಕಹಿಹೀರೆಎಲೆ, ಇವನ್ನರೆದು ಗುದಕ್ಕೆ ಪೂಸೆ ಎಲ್ಲಾ ಮೂಲವ್ಯಾಧಿ ಕೆಡುಗುಂ. ತುಪ್ಪವಂ ಪೂಸಿ ಬಿಳುಗಾರವುಂ ಕಟ್ಟೆ ಮೂಲವ್ಯಾಧಿ ಕೆಡುಗುಂ. ವಿಳಂಗ, ನಾಗರಿಕ, ಚಿತ್ರ

ಮೂಲ, ಸೈಂಧವ, ಕಳ್ಳಿಹಾಲು, ಕಲಸಿ ಲೇಪವಂ ಮಾಡುಗೆ. ಗುದದ ವೊಳೆ ಕರಗುವುದು. ಮೂಲವ್ಯಾಧಿಯಂ ಪೇಳ್ವೆ. ಅವಾವುದೆಂದೆಡೆ ಮಲನಿರೋಧದಿಂದ, ಮುಂದಾಗ್ನಿಯಿಂದ, ಮೇಲೆ ಮೇಲೆ ಭೋಜನವ ಮಾಡುವುದರಿಂದಂ ಇನಿತರದಿಂ ಮೂಲವ್ಯಾಧಿ ಪುಟ್ಟುಗುಂ. ಅವು ಆರು ಪ್ರಕಾರಮಕ್ಕುಂ. ಆಸನಕ್ಕಿಳಿದು ಮೂಲವ್ಯಾಧಿಯಕ್ಕುಂ. ಬಿಸಿಯ ರಕ್ತ ಬಡವಾಗಿ ಸಂಗ್ರಹಿಸಿ ಅಂತರ್ವಳಿಯಂ ಬಹಿರ್ವಳಿಯಂ ಇನಿತು ಎರಡು ಪ್ರಕಾರಮಕ್ಕುಂ. ರಕ್ತ ಒಡೆಯದೆ ಗುದ ದೊಳಗೆ ಗಂಟಾಗಿರುವುದು, ........ಬೆವರುವುದು, ಎದೆ ಉರಿವದುಂ, ಮೈಬಣ್ಣ ಕೆಡುವುದುಂ, ನಿಶ್ಶಕ್ತಿಯಕ್ಕುಂ,ನರಗಳೊಪ್ಪಚಿ ಬೇನೆಗೈವುದುಂ, ಮೈಪಿರುದು ತಿಂಬುದುಂ, ಉಚ್ಛ್ವಾಸ ದಿಂದಂ, ಕಟಿಯ ಹೆರದಿಂದಂ ಮಲ ಶುಷ್ಕವಾಗಿ ಪೋಪುದು. ರಕ್ತ ಒಡೆದು ಬೆನ್ನು ಬೇನೆ ಗೈವುದುಂ, ಕೊರಳೊರಲಪುದಂ, ಹುಳಿದೇಗು ಅಡಿಗಡಿಗಕ್ಕುಂ.

ಪ್ರಮೇಹಾಧ್ಯಾಯ:—ಪ್ರಮೇಹಾಧ್ಯಾಯಮಂ ಪೇಳ್ವೆ, ಆಗಿಪ್ಪ ಅಪಥ್ಯಾಹಾರದಿಂದ ವಿಪರೀತದಿಂದ, ಅತಿಸ್ತ್ರೀಸಂಭೋಗದಿಂದ, ದಂತನವಮೂಲಂಗಳಿಂದ, ಧರಿಸುವದರಿಂದಂ ಪಾದರಕ್ಷೆ ಇಲ್ಲದೆ ಬಿಸಿಲಲ್ಲಿ ನಡೆಯುವುದರಿಂದಂ ಪ್ರಮೇಹಮಕ್ಕುಂ. ಇಂತಪ್ಪ ಲಕ್ಷಣವಂ ಪೇಳ್ವೆ. ಅವಾವುದೆಂದಡೆ ಕೈಕಾಲು ಉರಿವದು, ಬೆವರುವುದು, ಮೈ ಮದವಕ್ಕುಂ, ತೃಷ್ಣೆ ಪಿರಿದಪ್ಪುದು. ಅವು ಹತ್ತು ವಿಧ ಕಫದಿಂದ, ಆರು ವಿಧ ಪಿತ್ತದಿಂದ, ನಾಲ್ಕು ವಿಧ ವಾತದಿಂದ ಅಹುವು. ... ... ... ಮೂತ್ರ ಕೆಂಚನೆ ಪೋಪುದುಂ, ಹಿಟ್ಟಿನಂತೆ ಪೋಪುದುಂ ... ... ... ಕೆ ಬೆರಸಿ ಪೋಪುದುಂ, ಅಳೆಯಂತೆ ಪೋಪುದುಂ, ಉಪ್ಪಿನಂತೆ ಪೋಪುದುಂ, .... ... ನಿತು ಪೋಪುದುಂ, ವಾತಪ್ರಮೇಹದ ಲಕ್ಷಣ. ಅರಿಸಿನ ಬಣ್ಣದಂತೆ ಪೋಪುದುಂ, ಮಜ್ಜಿಗೆಯಂತೆ ಪೋಪುದುಂ, ಹೀರಾವಳಿಯ ಬಣ್ಣದಂತೆ ಪೋಪುದುಂ, ಬೆನ್ನ ಮೇಲೆ ಲಾಳದೊಳಗೆ ಉರಿವದುಂ, ಪಿತ್ತಪ್ರಮೇಹ ಲಕ್ಷಣಂ. ಮೂತ್ರ ಬಿಳಿದಾಗಿ ಪೋಪುದುಂ, ನಿರ್ಮಲವಾಗಿಯುಂ ಕೆಂಪಾಗಿ ಪೋಪುದುಂ, ದುರ್ಗಂಧ ಹರಿವಿಯಾಗಿಯುಂ, ನೆಗಡಿಯುಂ ಇನಿತುಂ ಶ್ಲೇಷ್ಮಪ್ರಮೇಹಲಕ್ಷಣಂ. ಶ್ಲೇಷ್ಮ ಪ್ರಮೇಹ ಸುಖಸಾಧ್ಯಂ, ಪಿತ್ತಪ್ರಮೇಹ ಅಸಾಧ್ಯಂ.

ವಾತಪ್ರಮೇಹಕ್ಕೆ ಔಷಧಿ :—ತಾವರೆಯ ದಂಟು, ಅಮರದ ಬಳ್ಳಿ, ಅಣಿಲೆ, ಅಗುಳು ಶುಂಠಿ, ಕಟುಕರೋಹಿಣಿ, ವಿಳಂಗ, ಮತ್ತಿಯ ಬೇರು, ಇಂತಿವ ಕಷಾಯವಂ ಕುಡಿಯೆ ವಾತಪ್ರಮೇಹ ಕೆಡುಗುಂ.

ಪಿತ್ತಪ್ರಮೇಹಕ್ಕೆ ಔಷಧಿ :—ಅರಿಸಿನ, ಮರದರಿಸಿನ, ಮತ್ತಿ, ಕಡವ, ಬೆಟ್ಟದ ಮೇಲಿನ ಕರಿಗೆ, ಎಂತಿವಂ ಒಂದಾಗಿ ಕಾಸಿ ಆರಿಸಿ ಕುಡಿಯೆ ಪಿತ್ತಪ್ರಮೇಹ ಕೆಡುಗುಂ.

ಶ್ಲೇಷ್ಮಪ್ರಮೇಹಕ್ಕೆ ಔಷಧಂ :—ಶ್ರೀಗಂಧ, ಅಗರು, ಅಣಿಲೆ,ದೇವದಾರು, ಇದೊಂದು ಪ್ರಮೇಹಯೋಗ.

ಎಲ್ಲಾ ಪ್ರಮೇಹಕ್ಕೆ ಔಷಧಿ :—ಮಂಜಿಷ್ಠೆ, ಕರಿಯ ಕೆಚ್ಚು, ತ್ರಿಫಲೆ, ಬೇಲದ ಕರಕು, ಇದೊಂದು ಕಷಾಯ; ಹಡಲ ಬೇರಿನ ಎಲೆ, ಅಮರದ ಬಳ್ಳಿ, ತ್ರಿಫಲೆ, ನೈದಿಲಗೆಡ್ಡೆ,

ಇದೊಂದು ಕಷಾಯ; ತಾವರೆಯ ಕಂದ, ಪದ್ಮಕ, ಮುಸ್ತೆ, ನೆಲ್ಲಿ, ಅಡವಿಯ ಮಲ್ಲಿಗೆ ಬಾಳದ ಬೇರು, ತಾಳೇಮರದ ಪೂವು, ಇದು ಒಂದು ಕಷಾಯ; ಮೇಲೆಬಾಳ, ಶ್ರೀಗಂಧ, ದೇವದಾರು, ಇದೊಂದು ಕಷಾಯ; ಅವರೆಯ ಹಗಿನು ಭಾಗ ೫, ಬೇಲದ ಹಗಿನು ಭಾಗ .... . ಅರಿಸಿನ ಭಾಗ ೪, ಮರದರಿಸಿನ ಭಾಗ ೫, ... ... ... ... ರು ಬಿತ್ತು ಭಾಗ ೬, ಅವರೆಯ ಬೀಜ ಭಾಗ ೭, ಇನಿತಿವಂ ಚೂರ್ಣ ಮಾಡಿ ಎಣ್ಣೆಯ ಕಾಸಿ ತಿಗುಡೆಯನಿಕ್ಕಿ ಮೆಲ್ಲಲು, ಎಲ್ಲಾ ಪ್ರಮೇಹವೂ ಕೆಡುಗುಂ. ... ... ಪುಚ್ಚಕಾಯಿ ಭಾಗ ೯, ನೆಲತಂಗಡಿ, ಚಿತ್ರಮೂಲಂ ಓಡಪತ್ರೆ... ... ... ...[1] (ಅಪೂರ್ಣ).

## D 1388

ಓಕರಿಕೆಗೆ :—ನೆಲ್ಲಿಚಟ್ಟು, ದ್ರಾಕ್ಷೆಹಣ್ಣು, ಸಕ್ಕರೆ, ಜೇನುತುಪ್ಪದಲ್ಲಿ ಕೊಳ್ಳಲು ಓಕರಿಕೆ ಮಾಣ್ಗುಂ. ... ...ಣಸಿ ಬೇರು, ವಿಟ್ಲಂ ಕಶಿ ... ... ಆಪ್ಪನೆ ಸವ ಕಾಸಿ ಹಿಪ್ಪಲಿ ಪ್ರತಿಪಾಕವಿಕ್ಕಿ ಕೊಳ್ಳೆ ಮಾಣ್ಗುಂ.

ಅರೆದಲೆಬೇನೆಗೆ: —ಗಾಂಧಾರಿ ಬೇರನ್ನು ಹಸಿ ತುಪ್ಪದಲ್ಲಿ ಅಡುವುದು. ನಸ್ಯವ ಮಾಡಲು ಅರೆದಲೆಬೇನೆ ಮಾಣ್ಗುಂ.

ಶೂಲೆಗೆ :—ಇಂಗುಳ ಗ ೧, ನೆಲ್ಲಿ ...... ಜೇಪಾಳದ ಬೀಜ ಗ ೨, ಬಿಡುಲವಣ ಗ ೩, ಶುಂಠಿ ಗ ೪, ಓಮ ಗ ೫, ಅಳಲೇಕಾಯಿ ಗ ೬, ಚಿತ್ರಮೂಲ ಗ ೭, ಕೊವ ... ... ಚೂರ್ಣವ ಮಾಡಿ ಬಿಸಿನೀರು, ಆಲದ ರಸದಲ್ಲಿ ಕೊಳ್ಳಲು ಶೂಲೆ, ಗುಲ್ಮ ಶೂಲೆ ಹರ. ಸಿ ... ... ಷಳ ಶೂಲೆ, ವಿಷೂಚಿಕೆ ಶೂಲೆ, ಆಸ್ರವನೆಂಬ ಹೊಟ್ಟೆಶೂಲೆ, ಹೊಟ್ಟೆಯೊಳಗೆ ಮಲ ಹೆಚ್ಚಿದ ಶೂಲೆ, ... ... ... ಸ್ಪನಕದ ಶೂಲೆ ಮಾಣ್ಗುಂ. ಕೊಗ್ಗಿ ಬೇರಿನ ತಿಗಡು, ಈಶ್ವರೀಬೇರು, ಒಣಶುಂಠಿ, ಚಿತ್ರಮೂಲ, ಶುಂಠಿ, ಇವಂ ಬೇರೆಬೇರೆ ಚೂರ್ಣವಂ ಮಾಡಿ ವಸ್ತ್ರಗಾಳಿತವಂ ಮಾಡಿ ಚಿಟ್ಟೆ ಅಳೆದು ಕೊಳ್ಳುವುದು. ಆರು ಚಿಟ್ಟೆ ತುಪ್ಪದ ... ... ...(ಅಪೂರ್ಣ).

## D 1389

ಯೋನಿನೆತ್ತರಿಗೆ :—ನೊಸರು, ಹಾಲು, ಎಳ್ಳೆಣ್ಣೆ, ಹಾಲು, ಈ ಎರಡನ್ನೂ ಸಮವಂ ... ... ಹಾಕಿ ಹೀಗೆ ಮೂರು ದಿನ ಕುಡಿಸಿದರೆ ನೆತ್ತರು ನಿಲ್ಲುವುದು. ಪಥ್ಯ ಹುಳಿ ವರ್ಜಿತ.

ಮತ್ತೊಂದು ಕ್ರಮ :—ಒಂದು ... ... .... ಕ್ಕೆ ಬೇಳೆಯ ಮಾಡಿಕೊಂಡು ಒಂದು ಹಿಡಿ ಜೀರಿಗೆಯನ್ನು ಕೂಡಿಕೊಂಡು ಬಾಳೆಹಣ್ಣನ್ನು ಕೂಡಿ ಸಕ್ಕರೆ, ಹಸುವಿನ ತುಪ್ಪ ...

---

1 ಇದರ ನಂತರ ತಾಲಪತ್ರಕೋಶದಲ್ಲಿ ಹೀಗಿದೆ :— "ಇಲ್ಲಿಗೆ ವೈದ್ಯವಿಷಯವು ಮುಗಿದುದು."

... ... ವಾಗಿ ಕೂಡಿ ಇಬ್ಬನಿಯೊಳಗೆ ಇರಿಸಿ ಬೆಳಗಾದ ಬಳಿಕ ಹೇರಳೆಕಾಯಷ್ಟು ಐದು ದಿನ ಕೊಂಬುದು. .........ನಾಲಿಗೆಗೆ ಮೆದ್ದು ಜಗಳಕಂಟೆಯ ಪಟ್ಟೆಯಂ ಉದಯ ಮಧ್ಯಾಹ್ನ ಉದ ... ... ... ... ಆಡುಸೋಗೆ ಸೊಪ್ಪು, ನೆಲಗುಳ್ಳದ ಸೊಪ್ಪು, ತುಳಸೀಸೊಪ್ಪು, ಸಹದೇವಿ ಸೊಪ್ಪು, ಭೂತ ... .... ... ಹಿಪ್ಪಲಿ, ಜೀರಿಗೆ, ಇವನ್ನು ಆ ರಸದಲ್ಲಿ ಅರೆದು ಕುಡಿದರೆ ಜ್ವರಂ ಮಾಣ್ಗುಂ.

ಪುದುವನಿಗೆ :—... ... ...ಓಮ, ಒಳ್ಳೇ ಹಾಲು ಈ ಎರಡನ್ನೂ ತೆಗೆದುಕೊಂಬುದು. ಆಮೇಲೆ ರಾತ್ರಿಗೆ ಅಪರೇಕಾಯಷ್ಟು ... ... ...ಯಲಿ ಸುಲಿದು ತೆಗೆದುಕೊಂಬುದು. ಆಮೇಲೆ ನುಗ್ಗೆ ಹೂವಿನ ರಸವ ಕೊಂಬುದು. .... ... ... ಸ್ತ್ರೀಯರ ನೆರೆಯಬಹುದು. ಸಾಕಾದರೆ ಮೊಸರೋಗರವನುಂಬುದು.

## D 1392 & D 1396

ಚಕ್ಷುರೋಗಕ್ಕೆ ಕಣ್ಣು ತೊಳೆವ ಕಷಾಯ :—ನೆಲ್ಲಿಯ ಚಟ್ಟು, ಪಾಷಾಣಭೇದಿ, ನೇರಿಲತ್ವಕ್ಕು, ಇವಂ ಕಷಾಯವಂ ಮಾಡಿ ತೊಳೆಯುವುದು. ಅಂಬಿಲವಂ ಕಾಸಿ ಮೂಗಿಗೆ ಸೇಕಂ ಕೊಡುವುದು. ಉಗುರಿಂ ಕಣ್ಣಮಲವ ತೆಗೆಯಲಾಗದು. ನಯನಕ್ಕೆ ಶೇವ ಉದ್ರೇಕಿಸುವ ಸಮಯದಲ್ಲಿ ಹಾಲು, ನೀರು, ಏರಂಡಪತ್ರಫಲಂಗಳನಿಕ್ಕಿ ಕಾಸಿ ಮೃದುಸ್ವೇದವಂ ಮಾಡುವುದು. ವಾತಪ್ರಕೋಪದ ಚಕ್ಷುರೋಗ ಕೆಡುವುದು. ಬೆಳಲ ಎಲೆಯನಿಕ್ಕಿ ಹಾಲಲ್ಲಿ ಕಾಸಿ ಸೋಗುಸುವಂತಾಗಿ ಸ್ವೇದಂ ಮಾಡುಗೆ, ಪಿತ್ತಪ್ರಕೋಪದ ಚಕ್ಷುರೋಗ ಕೆಡುಗುಂ. ಶ್ಲೇಷ್ಮಕ್ಕೆ—ಬೆಲ್ಲವತ್ತ್ರದ ಎಲೆಯಂ ಹಾಲಲ್ಲಿ ಕಾಸಿ ಸೋಗುಸುವಂತಾಗಿ ಶಾಖಂ ಮಾಡುವುದು. ಶ್ಲೇಷ್ಮಪ್ರಕೋಪದ ಚಕ್ಷುರೋಗ ಕೆಡುಗುಂ.

ವಾತನಯನಕ್ಕೆ :—ಉಬ್ಬೆಯ ಔಷಧಿ–ಲೊಕ್ಕಿಯ ಕಗ್ಗ, ಎರಡು ಗುಳ್ಳ, ಉಮ್ಮತ್ತ, ಎಕ್ಕೆಹೂ ಹಣ್ಣೆಲೆ, ಆಡಿನ ಹಿಕ್ಕೆ, ಇಷ್ಟನ್ನೂ ಕದಡಿ ಅಂಬಿಲವ ಹಾಕಿ ಕಾಸಿ ಉಬ್ಬೆಯಂ ಕೊಂಬುದು. ವಾತದಿಂದ ಹುಟ್ಟಿದ ಚಕ್ಷುರೋಗಂ ಕೆಡುಗುಂ.

ಪೀನಸಕ್ಕೆ :—ಗಂಧಕ, ಹುಲಿಯುಗುರು, ಬಜೆ, ನೆಗ್ಗಿಲಬೇರು, ತುಳಸಿ, ಪದ್ಮಕ, ಎಣ್ಣೆಯನ್ನು ಹೊಯ್ದು ಅಜಮೂತ್ರದಿಂದಟ್ಟು ನಸ್ಯಂ ಮಾಡಲು ಪೀನಸ, ಮೂಗು ನಾರುವುದು ಮಾಣ್ಗುಂ.

ಗಳರೋಗಕ್ಕೆ :—

ದ್ವಿಕ್ಷಾರತ್ರಿಫಲಾವ್ಯೋಷಾವಿಳಂಗಂ ಲವಣಾನ್ವಿತಂ ।
ಚಿತ್ರಮೂಲಂ ತು ಚೂರ್ಣಾನಿ ಸೂಕ್ಷ್ಮಚೂರ್ಣಂ ತು ಕಾರಯೇತ್ ॥
ಗೋಮೂತ್ರೇ ವರ್ತಿತಾನಾಂ ತು ಗಳರೋಗಂ ತು ನಾಶನಂ ॥

ಜ್ವರಕ್ಕೆ ಅಂಜನ :—

ಲಶುನಂ ಪಿಪ್ಪಲೀ ರಾಜೀ ವಚಾ ಪಥ್ಯಾಸಮಾಂಶಕಂ ।
ಏತಚ್ಚೂರ್ಣಂ ಜಲೇ ಪಿಷ್ಟ್ವಾ ಚಕ್ಷುಷ್ಯಂ ಜ್ವರನಾಶನಂ ॥

ಅತಿಸಾರಕ್ಕೆ :—ಬಂಜೆ ಮಡುವಾಗಲಗೆಡ್ಡೆಯಂ ಕಳ್ಳಿಯ ಹಾಲಲ್ಲರೆದು ಚಣಕ ಸಮಾನ ಕೊಡಲು ಅತಿಸಾರವು ಮಾಣ್ಗುಂ. ಛಳಿ ಹರ ಸಿದ್ಧ. ಹಜ್ಜೆಯ ಶೋಫಂ ಮೆಣಸಿನಲ್ಲರೆದು ಚಣಕಪ್ರಮಾಣಂ ಕೊಡಲು ಅತಿಸಾರ, ಹೊಟ್ಟೆಬೇನೆ, ಮಾಣ್ಗುಂ ಸಿದ್ಧ.

ಗುಲ್ಮಕ್ಕೆ :—

ತಾಳಕಂ ಗಂಧಕಂ ಚೈವ ಶಂಖಪರ್ಣಮನಃಶಿಲಾ ।
ಮಾತುಲುಂಗಸಮಾಯುಕ್ತಂ ಗುಲ್ಮರೋಗವಿನಾಶನಂ ॥

ಇರುಳುಗಣ್ಣಿಗೆ:—ತ್ರಿಗುಣಿಯನ್ನು ಹಸಿಯ ಶುಂಠಿಯ ರಸದಲ್ಲಿ ಭಾವಿಸಿ ಕಣ್ಣಿಗೆ ಹಚ್ಚುವುದು. ಇರುಳುಗಣ್ಣು ಮಾಣುವುದು. ಹೆಣ್ಣುಗವಡೆಯಂ ಕೊಂಡು ಪಚ್ಚೆಕರ್ಪೂರವ ಅದರೊಳಗೆ ತುಂಬಿ ತಾಮ್ರದ ಬಟ್ಟಲೊಳಗೆ ಶುದ್ಧ ಗೋರೋಚನವನ್ನು ಗುರುಗಂಜಿಯ ತೋರದಲ್ಲಿ ಮೂರು ಗುಂಡ ಮಾಡಿ ಒಲೆಯ ಹಾಗೆ ಹೂಡಿ ಕವಡೆಯನಿರಿಸಿ ಮೇಲೆ ಶುದ್ಧ ಗೋರೋಚನವನ್ನು ೩ ಹಣ ತೂಕವನ್ನು ತುಳಿದು ನಿಂಬೇಹಣ್ಣಿನ ರಸವ ಬಟ್ಟಲು ತುಂಬ ಹಿಂಡಿ ಆ ಅಂಬಟೆಯ ರಸವ ೧ ಹಣ ತೂಕವನದರಲ್ಲಿ ಹಿಂಡಿ ಬಿಸಿಲಲ್ಲಿ ಇಡೆ ಕರಗುವುದು. ಅದನ್ನು ತಳಿಗೆಯ ಚೆಂಬಿನಲ್ಲಿ ಅಟ್ಟು ತಾಮ್ರದ ಚೆಂಬಿನಲ್ಲಿ ಮರ್ದಿಸಿ ತೆಗೆದು ಸೀಸದ ಕರಡಿಗೆಯಲ್ಲಿ ತುಂಬಿ ಕಣ್ಣಿಗೆ ಹಚ್ಚೆ ಹೂವು ಕರಗುವುದು.

ಹರಿದ್ರಾನಿಂಬಪತ್ರಾಣಿ ಪಿಪ್ಪಲೀಮರಿಚಾನಿ ಚ ।
ವಿಭೀತಕಸ್ಯ ಮಜ್ಜಾನಿ ಶಂಖನಾಭಿರ್ಮನಶ್ಶಿಲಾ ॥
ಏತಾನಿ ಸಮಭಾಗಾನಿ ಅಜಾಮೂತ್ರೇಣ ಪೇಷಯೇತ್ ।
ನಿಶಾಂಧಂ ತಿಮಿರಂ ಕಾಚಂ ಪುಷ್ಪಾಣಿ ಪಟಲಾನಿ ಚ ॥
ಅತಿರಕ್ತಾನಿ ಮಾಂಸಾನಿ ಸಪ್ತರಾತ್ರಾದ್ವಿನಶ್ಯತಿ ॥

ಜಾಜಿಯ ಸೊಪ್ಪಂ ಹಸಿಹಾಲಲ್ಲಿ ಅರೆದು ಕುಡಿಸುವುದು. ಇರುಳುಗಣ್ಣು ಮಾಣ್ಗುಂ.

ಶೂಲೆಗೆ :—ರಸವನ್ನು ಉಮ್ಮತ್ತದ ರಸದಲ್ಲಿ ಕರಿ ಎಲೆಯ ರಸದಲ್ಲಿ ಮರ್ದಿಸಿ, ಶುದ್ಧ ರಸ, ಇಂಗಲೀಕ, ಮಣಿಸಿಲೆ, ತುತ್ತ, ಪಾಷಾಣ, ಬಿಳುಗಾರ, ಗಂಧಕ, ಖಪ್ಪರಿ, ನಾಭಿ, ಮಾಕ್ಷಿಕ, ಸೈಂಧವಲವಣ, ಚಂದ್ರ, ಇವನ್ನು ಕಳ್ಳಿಯ ಹಾಲಲ್ಲಿ ಅರೆದು ಸಣ್ಣ ಪಾವಡೆಗೆ ತೆಳುವಾಗಿ ತೊಡೆದು ಆ ಶುದ್ಧರಸವನ್ನು ಆ ಪಾವಡೆ ಆರಿದ ಬಳಿಕ ಒಳ್ಳೆಯ ಎಣ್ಣೆಯಲ್ಲಿ ಅದ್ದಿ ಸರಪಣಿಗೆ ಸುತ್ತಿ ಅದರ ಕೆಳಗೆ ದೀವಿಗೆಯನ್ನು ಹೊತ್ತಿಸಿ ಮೇಲೆ ಒಳ್ಳೆಎಣ್ಣೆಯನ್ನು ಬಿಡುತ್ತಿರುವುದು. ಹಾಗೆ ಬಿದ್ದ ಎಣ್ಣೆಯ ಎರಡು ಬಾರಿ ಬಿಟ್ಟು ಮತ್ತೆ ಶುದ್ಧ ಎಣ್ಣೆಯಲ್ಲಿ ನೋವು ತೋರಿದ ಠಾವಿಗೆ ತೊಡೆಯುವುದು. ಆ ಶುದ್ಧರಸವನ್ನು, ಅಣಿಲೆಯನ್ನು, ಇಂಗಲೀಕವನ್ನು, ಪಾಷಾಣ, ಗಂಧಕ, ತುತ್ತ, ಇವುಗಳನ್ನು ಪ್ರತ್ಯೇಕ ೨ ತೂಕ, ರಸ ತೂಕ ೪, ಮೇಣ ೧ ಹಲ ಕೂಡಿ ಮರ್ದಿಸಿ ಅರೆ ಸಡಿ ಒಳ್ಳೆಣ್ಣೆಯಲ್ಲಿ ಹಾಕಿ ಮೇಣವನ್ನು ರಸಔಷಧ ಹಾಕಿ ಮೇಣ ಕರಗುವಷ್ಟು ಕಾಸಿದರೆ ನೊರೆ ಏಳುವುದು. ಆ ಲೇಹ್ಯವನ್ನು ನೋವು ಆದ ಠಾವಿಗೆ ಉಜ್ಜುವುದು. ಶೂಲೆ, ನೋವುಗಂಟು, ಮುಡುಬು ಇವು ಗುಣ.

ದೃಷ್ಟಪುಷ್ಪ ದ್ವಿತೀಯ ಪ್ರಕಾರ :—ಟಂಕಣವನ್ನು ಗಂಧಕದೊಳಗೆ ತೇದು ಹೂವಿನ ಮೇಲೆ ಚಿಮ್ಮಿ ಹೂವನ್ನು ಕಟ್ಟಾಗಿ ಕಟ್ಟಿ ೧ ಹರವಿಯೊಳಗೆ ಒಕ್ಕೊಳ ನೀರನ್ನು ಹೊಯ್ದು ಆ ನೀರ ಮೇಲೆ ಪಾಲುಗಣಿಕೆಯಾಗಲೀ ಸಜ್ಜೆಯ ಗಣಿಕೆಯ ಕುಡಿಯನಾದರೂ ಹಾಕಿ ಆ ಗಣಿಕೆಯ ಮೇಲೆ ಒಂದು ಅಗಲಿಹ ಬಟ್ಟಲನಿರಿಸಿ ಆ ಮಡಕೆಯ ಕಂಠದ ಸಮೀಪದಲ್ಲಿ ಎರಡು ಛಿದ್ರವ ಮಾಡಿ, ಆ ಛಿದ್ರದೊಳಗೆ ಅಡ್ಡ ಗಣಿಕೆಯನಿಕ್ಕಿ ಆ ಗಣಿಕೆಗೆ ಪೊಟ್ಟಣವ ಕಟ್ಟಿ ಬಟ್ಟಲೊಳಗೆ ಹೋಗದ ಹಾಗೆ ಕಟ್ಟಿ ಮಡಕೆಯ ಬಾಯ ಮುಚ್ಚಿ ೧ ಘಳಿಗೆ ಪಚಿಸುವುದು.

ಫಿರಂಗಿ ಉಬ್ಬೆಗೆ :—

ಪಾರದಂ ಟಂಕಣಂ ನಾಭಿಂ ನವಸಾರಂ ಶಿಲಾಜಿತುಂ ।
ಬಂಗಾಳಂ ಮುಸ್ತಕಂ ತುತ್ಥಂ ಹಿಂಗುಳಂ ಚ ಸಮನ್ವಿತಂ ॥
ಹರಿತಾಲಂ ತದರ್ಧೋಕ್ತಂ ಪ್ರತ್ಯೇಕಂ ಚ ತ್ರಿನಿಷ್ಕಕಂ ।
ಪ್ರಸ್ಥಾರ್ಧೇನ ಘೃತಂ ಯೋಜ್ಯಂ ಯಾವತ್ಫೇನಂ ವಿಪಾಚಯೇತ್ ॥
ತದ್ಘೃತಂ ಲೇಪನಂ ಸೇವ್ಯಂ ಫಿರಂಗಿವ್ರಣನಾಶನಂ ।

ಪಂಚವರ್ಣದ ದೀವಿಗೆಯ ಹೊತ್ತಿಸುವ ಪ್ರಕಾರ :—ತಾರೆ, ಗಣಿಜಿಲ ಸಮೂಲ, ಗಾಂಧಾರಿ ಎಲೆ, ಗಂಧಕ ಗ ಳ, ವಸ್ತ್ರಗಾಳಿತವಂ ಮಾಡಿ ಎಣ್ಣೆ ೧ ಮಾನಂ ತಿಳಿ ಕಾಸಿ ತಳಿಗೆಯಲ್ಲಿ ಇಳುಹಿ ಚೂರ್ಣವಂ ಹಾಕಿ ಹೊತ್ತಿಸೆ ಕೆಂಪಕ್ಕು. ಒಳ್ಳೆಸೊಂಡೆಯ ಸೊಪ್ಪು, ಬಿಳಿತುರುಚಿನ ಸಮೂಲ, ಕರಿಬೇವಿನ ಸೊಪ್ಪು, ವಿಷ್ಣುಕ್ರಾಂತಿಸಮೂಲ, ಇವು ಪ್ರತ್ಯೇಕ ಗ ಲ, ಎಣ್ಣೆ ೧, ಪೂರ್ವ ಕ್ರಮ, ಕೊಳವಳಿಕೆಯ ಬೀಜ, ಹೊನಗೊನ್ನೆಸೊಪ್ಪು, ಪ್ರತ್ಯೇಕಲ, ಎಣ್ಣೆ ೧ ಮಾನ, ಕಪ್ಪಕ್ಕು. ತಗರೆಶೇರೆ ಉಂಡೆ ಅಂಬಿಗೆ, ಇಂಗುಳದ ಹಣ್ಣು, ದಾಗುಡಿಯ ಸಮೂಲ, ಮೊಲ ನಂದಿಯಗೆಡ್ಡೆ, ಬಿಳಿಯ ಸಾಸುವೆ, ಇವು ಪ್ರತ್ಯೇಕ ಲ ಪೂರ್ವಕ್ರಮ. ಕೆಂಪಿನ ಮಸಿಗೆ ಸಮೂಲ, ತೊಬರತಿಗಡು ಈ ೨ ನ್ನೂ ನೆರಳೊಳಗೆ ಒಣಗಿಸಿ ಪುಡಿಮಾಡಿ ಎಣ್ಣೆಯಲ್ಲಿ ಹೊತ್ತಿಸೆ ಬಿಳಿದಕ್ಕು. ತಾಳಕ ೧೦ ತೂಕ, ರಸ ೨ ತೂಕ, ಕಪ್ಪಲಿಸತ್ವ ೧ ತೂಕ, ನಿಂಬೇಹುಳಿಯಿಂದರೆದು ಮೂಸೆಯಲಿರಿಸಿ ಗುಳಿಗೆಯ ಮಾಡಿ ಮೂಸೆಯಲಿರಿಸಿ ಮೇಲೆ ಮರಳ ತುಂಬಿ ತುಸು ಪುಟಿಸಿ ಕೊಳ್ಳೆ ಹರವಹುದು.

ಲೇಪನದ ಗ್ರಂಥ :—

ಆಯಾಮಸಪ್ತಭಾಗಂ ಚಾಪ್ಯಧೋಭಾಗಂ ಚತುಷ್ಟಯಂ ।
ದ್ವಿಭಾಗಮೇಕಭಾಗಂ ಚ ಛಿದ್ರಂ ಕುರ್ಯಾದ್ವಿಚಕ್ಷಣಃ ॥
ಆಯುರ್ಮಧ್ಯಾಚ್ಚತುರ್ಭಾಗಂ ದ್ವಿಭಾಗಂ ಪುನರೇವ ಚ ।
ಉಭಯೋರ್ಮಧ್ಯತಶ್ಛಿದ್ರಮಿತ್ಯೇತಲ್ಲೇಪಲಕ್ಷಣಂ ॥
ಪುನ್ನಾಗೈರಂಡನಿಂಬೈರ್ವಕುಳಧನದವೃಜ್ಞಾಳಿಕೇರೈಃ ಕರಂಜೈಃ
ಕಾರ್ಪಾಸೈಃ ಶಿಗ್ರುಡೋಲಾಫಲಮುನಿಚಣಕೈಃ ಸರ್ಷಪಾಂಕೋಲಬೀಜೈಃ ।

ರಾಸ್ನಾಕುಷ್ಠೈಃ ಕುಲುತ್ಥೈಃಸ್ತಿಲಲವಣವಸೂರಿಂಗುದೇವದ್ರುದಾರ್ವ್ಯ
ಸರ್ವಾಮ್ಲಸ್ನೇಹಯುಕ್ತಂ ಸಕಲಪಟುಯುತಂ ಪೊಟ್ಟಣಂ ವಾತಭುಂಜಿ ॥
ಏರಂಡಾರ್ಕಕರಂಜಮಾರಟಬಲಾಕರ್ಕಾತಿಸೋಮಸ್ನುಹಿಃ
ನಿರ್ಗುಂಡೀತಲಪೋಟಶಿಗ್ರುವರುಣಾಪಾಟಾಶ್ವಗಂಧಾದಿಕೈಃ ।
ಪತ್ರೈಃ ಕಾಂಜಿಕಮೂತ್ರವರ್ಗಸಹಿತೈಃ ಸ್ವಿನ್ನೈರ್ಘಟಸ್ಥೈರ್ಯುತಂ
ಸ್ವೇದಂ ಕ್ರುದ್ಧಸಮೀರಣಾರ್ತಿವಪುಷ್ಟಃ ಸದ್ಯಃ ಸುಖೋತ್ಪಾದಕಂ ॥
ಕುಲುತ್ಥದೀಪ್ಯಚಣಕೈರ್ಭಸ್ಮ ಚೂರ್ಣೀಕೃತೈರಪಿ ।
ಕರೀಷಭಸ್ಮನಾ ಸಾರ್ಧಂ ದೇಹಾನಾಂ ಸ್ವೇದಶಾಂತಯೇ ॥
ರಾಸ್ನಾಸರ್ಷಪಶೃಂಗಿವೇರಮರಿಚಂ ಭೂಪೀಲುದೇವದ್ರುಮಂ
ಮಾಸಾಲರ್ಕಕರಂಜಜಾಸ್ಥಿವಕುಳಂ ಶಿಗ್ರುಂ ಪುನರ್ನದ್ವಯಂ ।
ಕುಷ್ಠೈಲಾಗರುಮಾತಲುಂಗವರಣಂ ಶ್ರೀಪರ್ಣಿಸಿದ್ಧಾರ್ಥಕಂ
ಹ್ರಸ್ವೈರಂಡಜನಿಂಬತೋಯಸಹಿತಂ ಲೇಪಂ ಚ ವಾತಾಪಹಂ ॥
ಕೇಸರಂ ಮಾತುಲುಂಗಸ್ಯ ಫಲಂ ತ್ರಿಕಟುಕಂ ಘೃತಂ ।
ನಿಷ್ಕಸಿಂಧೂದ್ಭವಂ ಕರ್ಷಂ ಕರ್ಷಂ ಚ ಮಧುಶರ್ಕರಂ ॥
ತದೇವ ದ್ವಿಫಲಂ ಸರ್ವಂ ಯೋಜ್ಯಂ ಗಂಡೂಷಧಾರಣೈಃ ॥

ಜ್ವರಕ್ಕೆ ಅಂಗೋದ್ವರ್ತನ :—

ಮಾರೀಚಂ ವಿಷಗೈರಿಕಂ ಮಲಯಜಂ ಕಾರ್ಪಾಸಶೈಲೇಯಜಂ
ವಾರೀರೇಣುಕಕೋಲಜಾತಿಕಟುಕಂ ನಿಂಬಾಮೃತಾಸರ್ಷಪಂ ।
ತುಳಸೀಪರ್ಪಟಶಾರಿಬಾಕಣಮಚಾಜಾತಿಸ್ನುಹೀಮಾಕುಟೀ
ಅರವಿಂದಂ ಚ ಶತಾವರೀ ಸಹಚರೀ ದುಸ್ಪರ್ಶನೀಲೀಜಟೀ ॥
ಏತೇ ಭಾಗಸಮಂ ತು ಯೋಜಿತಮಿದಂ ಸೂಕ್ಷ್ಮಂಕೃತಂ ಚೂರ್ಣಿತಂ
ಅಂಗೋದ್ವರ್ತನಮರ್ದನಂ ಚ ಕುರುತೇ ಸರ್ವಜ್ವರಂ ಪಾಚನಂ ।
ರಕ್ತಂ ಪಿತ್ತವಿನಾಶನೀ ಕ್ರಿಮಿಕುಲಂ ಕುಷ್ಠತ್ರಿನಾಶಾವಹಂ
ತುಷ್ಟಿಂ ಪುಷ್ಟಿಕರೋತಿ ಮಂಗಲಯಶೋಶಾಂತಿಂ ಸಕಾಂತಾಯುತೇ ॥

ಮೆಣಸು, ಶುಂಠಿ, ಜಾಜಿ, ಶ್ರೀಗಂಧ, ಮತ್ತಿಯಹರಳು, ಕಲ್ಲನಾರು, ಲಾಮಂಚ, ರೇಣುಕ, ತಕ್ಕೋಲ, ಜಾಯಿಫಲ, ಕಟುಕರೋಹಿಣಿಬೇರು, ಅಮರದವಳ್ಳಿ, ಸಾಸಿವೆ, ತುಳಸಿ, ಪರ್ಪಾಷ್ಟಕ, ಸುಗಂಧಿ, ಹಿಪ್ಪಲಿ, ಬಜೆ, ಕಂಗುಂಗೆ, ಬಾವಂಜಿಯ ಬೀಜ, ಮುಂಜಾದಿ ಬೀಜ, ಆಷಾಡಿ, ಸಹದೇವಿ, ತುರುಚ, ನೀಲಿ, ರುದ್ರಜಡೆ, ಇವ ಸಮಾನಂಗೊಂಡು ಸಹದೇವಿ ರಸದಲ್ಲಿ ಲೇಪವಂ ಮಾಡಿದುದು ಜ್ವರಹರ.

ದೂರ್ವಾಚಂದನಲಾಮಂಚಪೃಶಾಚಕದಳೀಫಲಂ ।
ಮೃಣಾಲೋತ್ಪಲಕಂದಂ ಚ ಧಾತ್ರೈಲಾಶ್ಮಮಧೂಕಜಂ ॥

ಪದ್ಮಕೇಸರಕುಮಾರೀಜಲಾಲುಮುಕುಲಾ ಮತಾಃ ।
ಜಲವಾಸಸಪತ್ರ್ಯೈಲಾ ಗುಂಜಾಪತ್ರಂ ತು ಕೋಲಕಂ।
ಗೌಲಿಕೇ ತಾನಿ ಪಿಷ್ಟ್ವಾ ತು ಧಾನ್ಯಾಮ್ಲಂ ಮಿಶ್ರಯೇತ್ತ್ರಧಾ ॥
ಘೃತಕ್ಷೀರಂ ದ್ವಿಕುಡುಬಂ ದಧಿಸಾರಂ ತಥೈವ ಚ ।
ದಂಢಾಭಿಮಥನಂ ಕೃತ್ವಾ ನವನೀತಂ ತು ಲೇಪಿತಂ ॥
ಅಂತರ್ದಾಹಭ್ರಮಮದಸನ್ನಿಪಾತಜ್ವರಂ ಜಯೇತ್ ।
ಅಜಮೋದಂ ವಿಡಂಗಾನಿ ಪಿಷ್ಟ್ವತಕ್ರೇಣ ಪಾಯಯೇತ್ ॥
ಕೃಮಿಕೋಟಿಶತಂ ಜಾತೇ ಭೋಜನಾಂತೇ ಪ್ರಶಸ್ಯತೇ ।
ಜೈಪಾಲಂ ದ್ವಿಪಿನೀ ತ್ರಿವೃತ್ ಪಲಾಶಂ ಬೀಜಪೂರಕಂ ॥
ವಿಳಂಗಂ ರಾಮಠಂ ಚೈವ ಕ್ರಿಮಿಜಂತುವಿನಾಶನಂ ।
ಕದಲೀಕಂದಮೂಲಂ ಚ ಪಾರಿಭದ್ರಂ ದಿನಂ ಚರೇತ್ ॥
ಜೈಪಾಲಂ ಕೃಮಿಶತ್ರುಂ ಚ ಪಿತ್ತಪಾಲಾಶಬೀಜಕಂ ।
ಗುಡೇನ ಘುಟಿಕಾಂ ಕೃತ್ವಾ ಘೃತೇನ ಸಹ ಭಕ್ಷಯೇತ್ ॥
ದೀಪನಂ ಪಾಚನಂ ಹೃದ್ಯಂ ಕೃಮಿಜಾಲವಿನಾಶನಂ ।

ಗರಳವನಸ್ಪತಿಗಳು ಸ್ಥಾವರಮೆನಿಕ್ಕುಂ. ಜಂಗಮಂಗಳಹಿಮೊದಲಾದ ಗರಳಪ್ರಾಣಿಗಳು. ಈ ಎರಡರೊಳಂ ಕೂಡಿ ಮಾಡೆ ಕೃತ್ರಿಮಮಕ್ಕುಂ.

ಸ್ಥಾವಿರವಿಷನಿದಾನ :—

ಸ್ಥಾವರಂ ತು ಜ್ವರಂ ಹಿಕ್ಕಾದಂತಹರ್ಷಗಳಗ್ರಹಂ ।
ಫೇನಛರ್ದ್ಯರುಚಿಶ್ವಾಸಂ ಮೂರ್ಛಾಂ ತು ಕುರುತು ವಿಷಂ ॥
ಕೇಶಚ್ಯುತಿಂ ಶುಷ್ಕಕಾಸಂ ಪ್ರಲಾಪಮರುಚಿಜ್ವರಂ ।
ಹರಿದ್ರಾವರ್ಣಸರ್ವಾಂಗಂ ನಿದ್ರಾಹಾನಿಃ ಕೃಶಾಂಗತಾ ॥
ಸ್ವರಸ್ರಾವಭ್ರಮಂ ಚೈವ ಸಂತಾಪೋ ಜಡತಾ ಕ್ಲಮಃ ।
ಸತ್ವಹಾನಿಶ್ಚ ದೌರ್ಬಲ್ಯಂ ಕೃತ್ರಿಮವ್ಯಾಧಿಲಕ್ಷಣಂ ॥
ತತ್ರ ಕ್ರಿಯೇತಿ ಕಥಿತಾ ಮುನಿಭಿಶ್ಚಿಕಿತ್ಸಾ
ಸೇಯಂ ಚತುರ್ವಿಧಪದಾರ್ಥಗಣಪ್ರಧಾನಾ ।
ವೈದ್ಯಾತುರೌಷಧಸುಭೃತ್ಯಗಣಃ ಪದಾರ್ಥ-
ಸ್ತೇಷ್ವಪ್ಯಶೇಷಧಿಷಣೋ ಭಿಷಗೇವ ಮುಖ್ಯಃ ॥
ಆದೌ ವಮನವಿರೇಕಾರ್ಥಮೌಷಧಂ ದದ್ಯಾತ್ ।
ಸದ್ಯಃಕ್ಷಾರಂ ಯವಕ್ಷಾರಂ ತಂಡುಲೀಯಂ ಸಮೂಲಕಂ ॥
ಜೀರಕಂ ಚಾಶ್ವಗಂಧೀಂ ಚ ಮೂಲಂ ಜಂಬೀರಕಾದ್ರವೈಃ ।
ಸಂಪಿಷ್ಟ್ವಾ ತು ಪಿಬೇಚ್ಛೀಘ್ರಂ ಕೃತ್ರಿಮವ್ಯಾಧಿನಾಶನಂ ॥

ಜಿಹ್ವಾಲೇಪಕ್ಕೆ :—

ವಿಶ್ವೇಪ್ಸಿತಪುನರ್ನವ್ಯಃ ಕುಷ್ಠಾಗೋರೋಚಪಿಪ್ಪಲೀಃ ।
ರುದ್ರಾಕ್ಷಿಕಸ್ತೂರಿಹೇಮಂ ಜಿಹ್ವಾಯಾಂ ಶುದ್ಧಿಕೃಲ್ಲಘು ॥
ಸನ್ನೇನ ಲುಳಿತಂ ಪೀತ್ವಾ ಸನ್ನಿಪಾತಜ್ವರಂ ಜಯೇತ್ ।
ತಿನ್ತ್ರಿಣೀಪುಷ್ಪಸಾರಂ ವಾ ಮಧೂಕಂ ಶರ್ಕರಾಯುತಂ ॥
ತ್ರುಟೀಚಂದನಲಾಮಂಚಶಾರಿಬೋತ್ಪಲಶಾರಿಬಂ ।
ಪಿಷ್ಟಂ ಸ್ವರಸಸಂಮಿಶ್ರಂ ಕರ್ಪೂರಂ ಸಹ ಯೋಜಯೇತ್ ।
ಪ್ರಾತಃಕಾಲೇ ಪಿಬೇತ್ಪಾನಂ ವಡವಾನಲವಾರಣಂ ॥

ಮಂಡೆನೋವಿಗೆ :—

ಕುಷ್ಠಮೇರಂಡಮೂಲಂ ಚ ಲೇಪಾತ್ ಕಾಂಜಿಕಪೇಷಿತಂ ।
ಶಿರೋರ್ತಿಂ ನಾಶಯತ್ಯಾಶು ಪುಷ್ಪಂ ವಾ ಮುಚುಕುಂದಜಂ ॥

ಅವುಡಲದ ಬೇರು, ಲೊಕ್ಕಿಯ ಹೂವಂ ಅಂಬಿಲದಲ್ಲಿ ಅರೆದು ಪೂಸೆ ಮಂಡೆನೋವು ಮಾಣ್ಗುಂ.

ಆರನಾಳೇ ರಸಂ ಪಿಷ್ಟಂ ಪಿಪ್ಪಲೀ ಮರಿಚಂ ಶಿಲಾ ।
ಶಿರೋಽಲೇಪೇನ ನಶ್ಯಂತಿ ಶಿರಶ್ಶೂಲಾನ್ಯನೇಕಧಾ ॥

ಹಿಪ್ಪಲಿ, ಮೆಣಸು, ಶಿಲಾಧಾತು, ಅಂಬಿಲದಲ್ಲರೆದು ಲೇಪಮಾಡೆ ಎಲ್ಲಾ ಮಂಡೆ ನೋವು ಮಾಣ್ಗುಂ.

ಛರ್ದಿಗೆ :—

ಕಾರ್ಪಾಸಶಾಸ್ತ್ರಿತ್ರುಟೀಕುಷ್ಠಾಲಾಜಚೂರ್ಣಂ ಚ ಶರ್ಕರಾ ।
ಲೇಪಯೇಚ್ಛರ್ದಿನಾಶಾರ್ಥಂ ರಹಸ್ಯಮಿದಮೌಷಧಂ ॥
ದ್ರಾಕ್ಷಾಮಧೂಕಮಧುಕಲೋಧ್ರಕಾಶ್ಮರ್ಯಶಾರಿಬಾಃ ।
ಮುಸ್ತಾಮಳಕಹ್ರೀಬೇರಪದ್ಮಕೇಸರಪರ್ಪಟಂ ॥
ಮೃಣಾಲಚಂದನೋಶೀರನೀಲೋತ್ಪಲಪರೂಷಕಂ ।
ಪಾತೋಜವೋದಾದ್ರಾಕ್ಷಾದಿಜಾತೀಕುಸುಮವಾಸಿತಂ ॥
ಯುಕ್ತೋ ಮಧುಸಿತಾಲಾಜಜಯಂತ್ಯಾನಿಲಪಿತ್ತಜಂ ।
ಜ್ವರಂ ಮದಾತ್ಯಯಂ ಛರ್ದಿಮೂರ್ಛಾದಾಹಸಮಾಶ್ರಯಂ ॥

ದ್ರಾಕ್ಷೆ, ಇಪ್ಪೇಹೂವು, ಯಷ್ಟಿಮಧುಕ, ಲೋಧ್ರ, ಖರ್ಜೂರ, ಸುಗಂಧಿ, ಮುಸ್ತೆ, ನೆಲ್ಲಿಯಚಟ್ಟು, ಮುಡಿವಾಳ, ತಾವರೆಕುಸುಮ, ತಾವರೇಗೆಡ್ಡೆ, ತಾವರೇನಾಳ, ಶ್ರೀಗಂಧ, ಲಾಮಂಚ, ನೈದಿಲಗೆಡ್ಡೆ, ಖರ್ಜೂರ, ಇವುಗಳ ಕಷಾಯಕ್ಕೆ, ಜೇನುತುಪ್ಪ, ಸಕ್ಕರೆ ಪ್ರತಿಪಾನ.

ವಿರೇಕಕ್ಕೆ :—ಕಹಿಹೀರೆಯ ಬೀಜವನ್ನು, ಜೇಪಾಳದ ಬೀಜವನ್ನು, ಪಾತಾಳಯಂತ್ರದಿ ತೈಲವ ತೆಗೆದುಕೊಂಡು ಕಹಿಸೋರೆಯ ಹಸಿಯ ಕಾಯ ಅರ್ಧವ ತೋಡಿ ಆ ತೈಲವ ತುಂಬಿ ಧಾನ್ಯರಾಶಿಯೊಳಗೆ ೧೫ ದಿನ ಇರಿಸಿ ತೆಗೆದುಕೊಂಡು ಆ ತೈಲದಲ್ಲಿ ಪಾದವನ್ನೂ, ನಾಭಿಯನ್ನೂ ಲೇಪವಮಾಡೆ ಆವಮಾಂತ್ಯ ವಿರೇಚನವಹುದು. ಎದೆಯಲ್ಲಿ ಲೇಪವಮಾಡಲು ಪಿತ್ತಾಂತವಮನವಹುದು. ನಿಂಬೇಹುಳಿಯಲ್ಲಿ ತೊಳೆಯೆ ಸ್ತಂಭನ.

ಅಂಡಶೂಲೆಗೆ:—ಹಿಡಿಹಿಡಿಕೆ, ಗದುಗು, ಓಮ, ಚಿತ್ರಮೂಲ, ಬಜೆ, ಇಂಗು, ಸೈಂಧವ, ಇವಂ ಪುಡಿಮಾಡಿ, ಏರಂಡತೈಲ ಸಹ ಕುಡಿಯೆ ಅಂಡಶೂಲೆ ಮಾಣ್ಗುಂ. ತೆಂಗಿನಹಣ್ಣುಗಾಯ ಹೆರೆದು ಬಿಸಿಮಾಡಿ ಕಟ್ಟುವುದು. ಹುಚ್ಚದುಂಬೆಯ ಬೇರಂ ನಿಂಬೆಯಲ್ಲಿ ಅರೆದು ಅಂಡಕ್ಕೆ ಕಟ್ಟುವುದು. ಕೊಗ್ಗಿಯಸೊಪ್ಪು ತುಳಿದು ಕಟ್ಟುವುದು. ಎಡಕಡೆಯ ಶೀರು ಇಳಿದರೆ ತೊಡೆಯ ಮಧ್ಯದಲ್ಲಿ ನೂಲಂ ಎಳೆಯ ಘೃತದಲ್ಲಿ ಸುತ್ತ ಜತೆಯಾಗಿ ಇಕ್ಕುವುದು. ಬಲದ ತೋಳಲ್ಲಿ ಆ ಮರ್ಯಾದೆಯಲ್ಲಿ ಇಕ್ಕುವುದು.

ಪೀನಸಕ್ಕೆ :—ಗಂಧಕ, ಹುಲಿಯುಗುರು, ಬಜೆ, ನುಗ್ಗೆಯ ಬೇರು, ತುಳಸಿ, ಪದ್ಮಕ, ಎಣ್ಣೆಯನ್ನು ಅಜಮೂತ್ರ ಬೆರಸಿ ನಸ್ಯ.

ಜ್ವರಕ್ಕೆ :—

ರೋಹಿಣ್ಯಾಶ್ಚ ಚತುರ್ನಿಷ್ಕಂ ದೇವೀರಸಸಮನ್ವಿತಂ ।
ಮರ್ದಯಲ್ಲೇಪಮಾತ್ರೇಣ ಸರ್ವಜ್ವರನಿವಾರಣಂ ॥
ಸಹದೇವಿವಚಾಮುಕ್ತೋಶೀರಂ ಕಟುಕರೋಹಿಣೀ ।
ಚಂದನಂ ಕಟುಕಂ ಕೋಷ್ಠಂ ಸಮಭಾಗಾನಿ ಕಾರಯೇತ್ ।
ತೈಲಪ್ರಸ್ಥೇ ಪಚೇತ್ತೈಲಂ ಸರ್ವಜ್ವರನಿವಾರಣಂ ॥

ಮಂಡೆಗೆ ಲೇಪ :—

ಸಿದ್ಧಾರ್ಥ ಕೂಷ್ಮಾಂಡಕ ಉಗ್ರಗಂಧಾ ಪಾಠವ್ಯಯಾಪತ್ರಫಲಾವಿಲೇಪಾತ್ ।
ನಿಂಬಸ್ಯ ನಿರ್ಯಾಸಯುತೋ ಲಲಾಟಛರ್ದಿಂ ನಿಹನ್ಯಾಜ್ಜ್ವರತಃ ಕ್ಷಣೇನ ॥
ಗಾಂಧಾರೀಂ ಚ ಜಟಾಮಾಂಸೀಂ ಘೃತೇನ ಸಹ ಪಾಚಯೇತ್ ।
ತದಾಜ್ಯಂ ನಸ್ಯಮಾತ್ರೇಣ ನಿಹಂತ್ಯರ್ಧಶಿರೋವ್ಯಥಾಂ ॥
ಕಾರ್ಪಾಸಾನಿ ತ್ರುಟೀಕೃಷ್ಣಲಾಜಚೂರ್ಣಂ ತು ಶರ್ಕರಾಂ ।
ಲೇಪಯೇಚ್ಛರ್ದಿನಾಶಾರ್ಥಂ ರಹಸ್ಯಮಿದಮುತ್ತಮಂ ॥

ಕಟ್ಟಿದ ಮಲಮೂತ್ರಕ್ಕೆ :—ಕಾಗೆದೊಂಡೆಯ ಬೀಜ, ತೈಲ ಹ ೩೧, ಸೂತ ಹಲ ೧೦, ಗಂಧಕ ಹಲ ೫, ಅಟ್ಟು ಕೊಳ್ಳೆ ಮೂತ್ರ ಬಿಡುವುದು. ಹಿರಿಯ ಮದ್ದಿನಬೇರು, ಚಿವಣಗಳದ ಬೇರು, ನೊಳಗ ಬೇರಿನ ತಿಗುಡಂ ಹಸಿಯ ಹಾಲಲ್ಲಿ ಕುಡಿಯೆ ಕಟ್ಟಿದ ಮೂತ್ರ ಬಿಡುವುದು.

ದೋಷಕ್ಕೆ :—ಉತ್ತರಣಿಯ ಬೇರನ್ನು ಸಣ್ಣನಾಗಿ ಅರೆದು ಎಳ್ಳ ತೊಳೆದ ನೀರಿನಲ್ಲಿ ಕುಡಿಯೆ ಬಿಡುಗು.

ಬಿಕ್ಕುಳಿಗೆ:—ಉತ್ತರಣೆಯ ಬೇರು, ಮೆಣಸು, ಶುಂಠಿ, ತಿಗಡೆ, ಅವರಣೆ, ಕಾಡು ಸಬ್ಬಸಿಗೆಬೀಜ, ಹಿಪ್ಪಲಿ, ಹಿಪ್ಪಲಿಯ ಮೂಲ, ತುಪ್ಪ, ದೇವದಾರು, ಗೋಂಟೆ, ಕಾಡವುಡಲದ ನಾರುಬೇಳೆ, ಕರಿಬೇವು, ಗಜ್ಜುಗ, ಸುಗಂಧಿ, ಅಗುಳುಶುಂಠಿ, ಕುರುಟಿಗೆ, ಕಳ್ಳಂಗಡಲೆ, ಪ್ರತ್ಯೇಕ ಗ೨ ಸಕ್ಕರೆ, ತುಪ್ಪ ಲೇಹ್ಯವಂ ಮಾಡೆ ಬಿಕ್ಕಳು ನಿಲ್ಲುವುದು. ಸಕ್ಕರೆಯ ಮೊಲೆಹಾಲಲ್ಲಿ ನಸ್ಯ ಮಾಡೆ ಬಿಕ್ಕು ಕೆಡುಗು. ತ್ರಿಫಲೆ, ಹಿಪ್ಪಲಿ, ಚೂರ್ಣ ಮಾಡಿ ಬೆಲ್ಲದಲ್ಲಿ ಗುಳಿಗೆಯಂ ಮಾಡಿ ಕೊಳ್ಳೆ ಬಿಕ್ಕಳು ನಿಲ್ಲುವುದು. ಅರುವೆಯ ಕರಕು, ಹಿಪ್ಪಲಿಯ ಕರಕು, ಜೇನುತುಪ್ಪ, ಹಿಪ್ಪಲಿಯಲ್ಲಿ ಕಲಸಿ ನಾಲಿಗೆಗೆ ಕೊಡಲು ಬಿಕ್ಕಳು ನಿಲ್ಲುವುದು.

ಜ್ವರಕ್ಕೆ :—

ಮಧುಕಂ ಮಧುಸಂಯುಕ್ತಂ ಪಿಪ್ಪಲೀ ಶರ್ಕರಾಸಮಂ ।
ನಾಗರಂ ಗುಡಸಂಯುಕ್ತಂ ಹಿಕ್ಕಾಘ್ನಂ ನಾತ್ರಂ ಸಂಶಯಃ ॥
ಸ್ತನ್ಯೇನ ಮಾಕ್ಷಿಕಾವಿಶ್ವಾನಸ್ಯಂ ವಾಲಕ್ತಕಾಂಬುನಾ ।
ಮಧೂಚ್ಛಿಷ್ಟಂ ಸಜ್ಜರಸಂ ತುತ್ಥಂ ಮಣಿಶಿಲಾಸಮಂ ॥
ಧೂಮಪಾನಂ ಹರೇದ್ಧಿಕ್ಕಾಂ ಧೂಪೈರ್ವಾ ಶಿಖಿವಕ್ಷಜೇ ।
ಎಲಾವಾಲುಕಸಾರಿಬೇಕ್ಷುಮುಸಲೀ ... ... ...
ದ್ರಾಕ್ಷಾಮ್ರುಶರ್ಕರಾಯಷ್ಟಿಜಂಬೀರರಸಲೋಳಿತಂ ॥
ಜಿಹ್ವಾಲೇಪನಮಾತ್ರೇಣ ದಾಹತೃಷ್ಣಾಸಿಬರ್ಹಣಂ ।
ತಿಂತ್ರಿಣೀಪುಷ್ಪಸಾರೇಣ ಮಧುಕಂ ಶರ್ಕರಾಯುತಂ ॥
ತ್ರುಟೀಚಂದನಲಾಮಂಚಶಾರಿಬೋತ್ಪಲಶಾಬಿಬಂ ।
ಪಿಷ್ಟಂ ಸ್ವರಸಸಮ್ಮಿಶ್ರಂ ಕರ್ಪೂರಂ ಸಹ ಯೋಜಯೇತ್ ॥
ಸನ್ನಿಪಾತೇ ಚ ದಾಹೇ ಚ ಭ್ರಮಮೂರ್ಛಾಪ್ರಲಾಪನುತ್ ।
ದ್ರಾಕ್ಷಾಖರ್ಜೂರವಕುಳಮೃಣಾಲಂ ತಿಂತ್ರಿಣೀಫಲಂ ॥
ಮುಸ್ತಾಪರೂಷಕೋಶೀರಾಃ ಸರ್ವೇಷಾಂ ಪಾನಮೇವ ಚ ।
ವಸ್ತ್ರೇಣ ಪೀಡಯೇತ್ಸಮ್ಯಕ್ ಖರ್ಜೂರಂ ಶರ್ಕರಾಯುತಂ ॥
ಪ್ರಾತಃಕಾಲೇ ಪಿಬೇತ್ಪಾನಂ ವಡಬಾನಲವಾರಣಂ ।
ಉದುಂಬರತ್ವಕ್‌ಪ್ರಕ್ಷಾಳೇ ಕುಷ್ಣಾಂ ತದ್ವಿಫಲಂ ಭವೇತ್ ॥
ಕದಲೀಫಲಸಂಮಿಶ್ರಂ ಮರ್ದಯೇತ್ಸ್ವರಸೇನ ತು ।
ಶರ್ಕರಾಮಧುಕಂ ದ್ರಾಕ್ಷಾಶಾರಿಬೋಶೀರಚಂದನೈಃ ॥
ಪಕ್ವೋದುಂಬರಮಾತ್ರಂ ಚ ಕಲ್ಕಂ ಸಂಮಿಶ್ರಿತಂ ಪಿಬೇತ್ ।
ಭ್ರಮಂ ಮೂರ್ಛಾಂ ಪ್ರಲಾಪಂ ಚ ತೃಷ್ಣಾಜ್ವರಂ ವ್ಯಪೋಹತಿ ॥

ಶೀತಕ್ಕೆ ಲೇಪಧೂಪ :—

ತುಳಸೀವಾಕುಲೀತಿಕ್ತಗುಡೂಚೀಕ್ಷುಕಜೋರಕಾಃ ।
ಸಹದೇವಿವಚಾಯುಕ್ತಾಃ ಶೀತಘ್ನಂ ಲೇಪಧೂಪಕೈಃ ॥

ಏತೈರೈವೌಷಧೈಃ ಪಿಷ್ಟ್ವಾ ಲವಣಕ್ಷಾರಸಂಯುತೈಃ ।
ಸಾಮ್ಲೇ ವಿಪಾಚಿತಂ ತೈಲಮಭ್ಯಂಗಾಚ್ಛೀತನಾಶನಂ ॥

ನಿದ್ರಾನಿವಾರಕಂ ಅಂಜನಂ :—

ಪಿಪ್ಪಲೀ ಸೈಂಧವಂ ತೈಲಂ ನೈವಾರೀಪೇಕ್ಷಣಾಂಜನಂ ।
ವಿಷ್ಣುಕ್ರಾಂತ್ಯಭಯಾಸಿದ್ಧಂ ಶುಂಠೀಕಟ್ಫಲಕಶ್ಚ ವಾ ॥
ಕ್ರಾಂತಾಮಕಟ್ಫಲಶ್ಚಾಪಿ ಕ್ವಾಥಂ ಶೀತಜ್ವರಾಪಹಂ ।
ಸೈಂಧವಂ ಶ್ವೇತಮರಿಚಂ ಸರ್ಷಪಂ ಕುಷ್ಠಮೇವ ಚ ॥
ಬಸ್ತಮೂತ್ರೇಣ ಸಂಪಿಷ್ಟ್ವಾ ನಸ್ಯಂ ನಿದ್ರಾನಿವಾರಣಂ ॥

ಸ್ವೇದಸ್ಯ ಉದ್ವರ್ತನಂ :—

ಸ್ವೇದೋದ್ಗಮೇ ಕುಲುತ್ಥಾನಾಂ ಭ್ರಷ್ಟಾನಾಂ ಚೂರ್ಣಸೇಚನಂ ॥
ಭೂನಿಂಬಕಾರಟಸ್ತಿಕ್ತವಚಾಸರ್ಷಪಜಂ ರಜಃ ॥
ಉದ್ವರ್ತನಂ ತ್ರಿದೋಷೋತ್ಥೇ ಸ್ವೇದಾಭಿಸ್ಯಂದಜೇ ಜ್ವರೇ ।
ಕೇಸರಂ ಮಾತುಲುಂಗಸ್ಯ ಪಲಂ ತ್ರಿಕಟುಕಂ ಪೃಥಕ್ ॥

ಗಂಡೂಷಃ :—

ನಿಷ್ಕಂ ಸಿಂಧೂದ್ಭವಂ ಕರ್ಷಂ ಕರ್ಷಾಂಶಂ ಮಧುಶರ್ಕರಾ ।
ತದೇತದ್ದ್ವಿಫಲಂ ಸರ್ವಂ ಯೋಜ್ಯಂ ಗಂಡೂಷಧಾರಣೈಃ ॥
ಕೇಸರಂ ಮಾತುಲುಂಗಸ್ಯ ಧಾನ್ಯಾಮ್ಲಶರ್ಕರಾಯುತಂ ।
ಕ್ಷೌದ್ರಂ ಕ್ಷೌದ್ರಾಂಶಗಂಡೂಷಸ್ತಾಲುದೋಷನಿಬರ್ಹಣಃ ॥

ಹೊಟ್ಟೆಬೇನೆಗೆ:—ಮಾವುನೇರಿಲು, ಹೆಮ್ಮರ, ಇದರ ತಿಗುಡಿನ ರಸಮಂ ಪುಟಪಾಕದಿ ಬೇರೆ ಬೇರೆ ರಸವ ತೆಗೆದು ನಿಂಬೇಹುಳಿ, ಎಣ್ಣೆ ಇವಂ ಸರಿಗೂಡಿ, ನಿಂಬೆಯಬೀಜ, ಮೆಣಸು, ಜೀರಿಗೆ, ಓಮ, ಉಳ್ಳಿ, ಸಾಸುವೆ, ಶುಂಠಿ, ಹಿಪ್ಪಲಿ, ಪ್ರತ್ಯೇಕಗಳ ನಿಂಬೇಹುಳಿಯಿಂದರೆದು ಬಿಸಲಿಗೆಯೊಳಗೆ ಒಗ್ಗರಿಸಿದ ಹಾಗೆ ಸಣ್ಣ ಕುದಿ ಬಂದಾಗ ಇಳುಹಿ ಶರೀರವರಿತು ಕೊಡುವುದು. ಹೊಟ್ಟೆಬೇನೆ ವಿಚಿತ್ರವಾಗಿ ಮಾಣ್ಗುಂ.

ಕವಡೆಪ್ರಯೋಗ :—ಒಳಕವಡೆಯನು ಮಜ್ಜಿಗೆಯೊಳಗೆ ನೆನೆಯಿಕ್ಕಿ ತೊಳೆದು ಆ ಕವಡೆಯೊಳಗೆ ಪ್ರತ್ಯೇಕ ಒಂದೊಂದಕ್ಕೆ ಎರಡು ಗುಂಜಿಯ ತೂಕ ವತ್ಸನಾಭಿಯನ್ನು ಚೂರ್ಣ ಮಾಡಿ ತುಂಬಿ ಆ ಕವಡೆಯ ಬಾಯಿಗೆ ಟಂಕಣವನ್ನು ಸುಣ್ಣವನ್ನು ನಿಂಬೇಹುಳಿಯಲ್ಲಿ ಅರೆದು ಮೆತ್ತಿ ಒಣಗಿಸಿ ಕೆಂಡದ ಮೇಲೆ ಇರಿಸಿ ಹೊಗೆ ಹೊರ ಹೊರಟರೆ ತೆಗೆದು ಕಲ್ವದಲ್ಲಿ ಚೂರ್ಣವ ಮಾಡಿ ಕರಡಿಗೆಯೊಳಿರಿಸಿ ಒಂದುಗುಂಜಿ ತೂಕದ ಪ್ರಮಾಣವ ಕೊಟ್ಟರೆ ಅತಿದೀಪನಮಕ್ಕು.

ಗ್ರಹಣಿಯಿಂದ ಅತಿಸಾರ ನಿಲ್ಲದಿದ್ದರೆ ವಿಜಯಬೀಜದ ಎಲೆಯನ್ನು ಹುರಿದು, ಎಲವದ ಹಗಿನ್ನು, ಸಜ್ಜರಸ, ಮಾವಿನಬೀಜ, ಧಾತಕೀಕುಸುಮ, ಇವಂ ಸಮಾನವಾಗಿ ಚೂರ್ಣವ

ಮಾಡಿ ಆ ಕವಡೆಚೂರ್ಣ ಗುಂಜಿಯ ತೂಕವ ಕೊಡುವುದು. ಸಕ್ಕರೆ ಜೇನುತುಪ್ಪದಿಂ ಗುಳಿಗೆಯ ಮಾಡಿ ಕೊಡುವಾಗ ಪತ್ರಿಜ್ಞೆಯಂ ಮಾಡಿ ಕೊಳ್ಳುವುದು. ಸಿದ್ಧಾಂತ ತಪ್ಪದು, ಅನುಭವ.

ಕಪಿತ್ಥನಿರ್ಯಾಸಸಪೇನಯುಕ್ತಂ ಸಂಪ್ಮರ್ದ್ಯ ಖಲ್ವೇ ವಿಜಯಾರಸೇನ ।
ಅಜಾಜಿಜಾತೀಫಲೇನ ಮರ್ದ್ಯ ಗುಂಜಾಪ್ರಮಾಣಂ ಗ್ರಹಣೀಂ ನಿಹನ್ತಿ ॥

ಪೀನಸಕ್ಕೆ :—ಗಂಧಕ, ಹುಲಿಯುಗುರು, ಬಜೆ, ನೆಗ್ಗಿಲಬೇರು, ತುಳಸಿ, ಪದ್ಮಕ, ಎಣ್ಣೆಯನ್ನು ಹೊಯ್ದು ಅಜಾಮೂತ್ರದಿಂದಟ್ಟು ನಸ್ಯವಂ ಮಾಡಲು ಪೀನಸ, ಮೂಗು ನಾರುವುದು ಮಾಣ್ಗುಂ.[1]

ಛಳಿಜ್ವರಕ್ಕೆ :— ಬಂಜೆಮುಡುವಾಗಲದ ಗೆಡ್ಡೆಯಂ ಕಳ್ಳಿಯ ಹಾಲಲ್ಲರೆದು ಚಣಕ ಪ್ರಮಾಣಂ ಕೊಡುವುದು. ಛಳಿಜ್ವರ ಬಿಡುವುದು ಸಿದ್ಧ.

ಹೊಟ್ಟೆಬೇನೆಗೆ :—ಅಬ್ಬೆಸೊಪ್ಪಂ ಅರೆದು ಮೊಸರಲ್ಲಿ ಗುಳಿಗೆಯಂ ಕೊಡಲು ಅತಿಸಾರ, ಹೊಟ್ಟೆಬೇನೆಗಳು ಮಾಣುವುವು.

ನಷ್ಟೇಂದ್ರಿಯಕ್ಕೆ:—ಗೊರಸಿನ ಹೊಡಕೇಬೇರನ್ನು ಹಾಲಲ್ಲಿ ಅರೆದು ಕದಡಿ ಸಕ್ಕರೆ ಬೆರೆಸಿ ಕೊಳ್ಳೆ ಮಾಣ್ಗುಂ. ಹುದ್ದಾಳ ಹಣ್ಣನ್ನು ಕಿವಿಚಿ ಪಾವಡೆಗೆ ಹಾಕಿ ಹಿಂಡಿಕೊಂಡು ಕೊಳ್ಳೆ ನಷ್ಟೇಂದ್ರಿಯ ಮಾಣ್ಗುಂ.

## D 1396

ಶಿರೋರೋಗ, ವಾತಾದಿಲಕ್ಷಣ:—ವಾತದಿಂದಂ ತಲೆ ತುಡಿವದುಂ, ಬಾವುದು, ಕಣ್ಣುನೀರು ಸುರಿವುದುಂ, ಹೆಡೆತಲೆಯ ನರ ತೆಗೆವುದುಂ, ತೀವ್ರ ಶೂಲೆಯಪ್ಪುದುಂ, ಇನಿತುಂ ವಾತಶೂಲೆಯ ಲಕ್ಷಣ. ಶ್ಲೇಷ್ಮಕ್ಕೆ:-ತಲೆ ಅತ್ಯಂತ ಭಿನ್ನಂತಪ್ಪುದುಂ, ಬಾಯಿ, ಮೂಗು ಕಟ್ಟಿದಂತಿಕ್ಕು,ಅರೋಚಕಂ, ಕಣ್ಣು ಮೆತ್ತುವುದುಂ, ಶ್ಲೇಷ್ಮಕ್ಕೆ ಅಳುಕುವುದುಂ, ಗಂಟಲು ತಿಂಬುದುಂ, ಗಳಗ್ರಂಥಿಗಳು ಬೇನೆಗೈವುದುಂ, ಪಲ್ಲು ಕುತ್ತುತ್ತಿರುವುದುಂ, ಶ್ವಾಸ, ಕೆಮ್ಮು ಇನಿತು, ಶ್ಲೇಷ್ಮರೋಗ ಲಕ್ಷಣ. ಪಿತ್ತರೋಗಕ್ಕೆ—ತಲೆ ಉರಿವುದುಂ, ನೆತ್ತಿಸಂತಾಪವಹುದುಂ, ಕಣ್ಣು ಉರಿ

---

1 ಇದರ ನಂತರ ಮೂಲಕೋಶದಲ್ಲಿ ಈ ಕೆಳಗಿನ ಶ್ಲೋಕಗಳಿವೆ. ಇವು ಹಿಂದೆ 180ನೇ ಪುಟದಲ್ಲಿ ಇವೆ :—

ಗಳರೋಗಕ್ಕೆ :—

ದ್ವಿಕ್ಷಾರತ್ರಿಫಲಾವ್ಯೋಷವಿಳಂಗಂ ಲವಣಾನ್ವಿತಂ ।
ಚಿತ್ರಮೂಲಂ ತು ಚೂರ್ಣಾನಿ ಸೂಕ್ಷ್ಮಚೂರ್ಣಂ ತು ಕಾರಯೇತ್ ॥
ಗೋಮೂತ್ರೇ ಲೋಹಪತ್ರೇ ಚ ಪಚೇ ... ... .... ।
ಗೋಮೂತ್ರವರ್ತಿತಾನಾಂ ತು ಗಳರೋಗಂ ತು ನಾಶನಂ ॥
ಲಶುನಂ ಪಿಪ್ಪಲೀ ರಾಜೀ ವಚಾ ಪಥ್ಯಾಸಮಾಂಶಕಂ ।
ಏತಚ್ಚೂರ್ಣಂ ಜಲೇ ಪಿಷ್ಟಂ ಚಕ್ಷುಷ್ಯಂ ಜ್ವರನಾಶನಂ ॥

ವದುಂ, ಛರ್ದಿಯೆತ್ತುವುದುರಿ, ಬಾಯಲ್ಲಿ ಪುಣ್ಣಕ್ಕು, ಮೂಗಿನಲ್ಲಿ ನೆತ್ತರು ಸುರಿವುದು, ನಾಲಿಗೆ ಒಣಗುವುದು, ಇನಿತು ಪಿತ್ತರೋಗಲಕ್ಷಣ. ಸನ್ನಿಪಾತರೋಗಲಕ್ಷಣ—ತಲೆ ಅತ್ಯಂತ ಬಾವುದುಂ, ಬಿಣ್ಮಿತಕ್ಕು, ನಾಲಿಗೆ ಪುಡುರಕ್ಕು, ಸಂತಾಪಂ ತಲೆನಿಲ್ಲಲಾರದು, ಮೂರ್ಛೆಯಪ್ಪುದುಂ, ತುಟಿ ಒಣಗುವುದುಂ, ನಾಲಿಗೆ ತೆಗೆವುದುಂ, ಏನೂ ಕೊಳ್ಳಲು ಬಾರದುಂ, ತಲೆ ಕಿಚ್ಚುಕಟ್ಟಿದಂತಕ್ಕು, ಹಣೆಗಣ್ಣು ಹಾರುವುದುಂ, ಇನಿತು ಸನ್ನಿಪಾತರೋಗಲಕ್ಷಣಂ. ಇದನ್ನು ಸೂರ್ಯಾವರ್ತನವೆಂಬುವರು. ಇದು ಉದಯದಲ್ಲಿ ತೊಡಗಿ ಅಸ್ತಮಯ ಪರ್ಯಂತರ ವೇಧಿಸುತ್ತಿರ್ಪುದು. ಚಂದ್ರಾವರ್ತವೆಂಬುದು ಕೃಷ್ಣಪಕ್ಷದಲ್ಲಿ ಆದರೂ, ಶುಕ್ಲಪಕ್ಷದಲ್ಲಾದರೂ ಆಹುದು. ತ್ರಿಕಾಲಾವರ್ತಿಯೆಂಬುದು ಮೂರು ಕಾಲದಲ್ಲಿಯೂ ಪ್ರಕೋಪಿಸುಗುಂ. ಇಂದ್ರವೇಷ್ಟಿಯೆಂಬುದು ಅಲ್ಲಲ್ಲಿಗೆ ಜೊಟ್ಟಿಟ್ಟಂತೆ ಕೂದಲು ಉಚ್ಚುವುದು. ಸಮಸ್ತಕೀಟಕವೆಂಬುದು ತಲೆಯ ಮೆದುಳೊಳು ಹುಟ್ಟಿ ತಲೆ ಕೆಡುವುದುಂ, ತಲೆ ಬಾತು ಮೆದುಳಿಂದ ಕಣ್ಣಲ್ಲಿ ತಿಂತ್ರಿಣಿ ತೊಡೆದು ಸುರಿವುದು ಕೀಟಕ ಸನ್ನಿಪಾತರೋಗ, ಅದು ಅಸಾಧ್ಯ.

ನೆತ್ತಿಯ ಶೂಲೆಗೆ :—ನೈದಿಲಗೆಡ್ಡೆ, ಅಲ್ಲಿಯಗೆಡ್ಡೆ, ಬಿಳಿರಕ್ಕಸಿಗೆಡ್ಡೆ, ಸೂರಣದಗೆಡ್ಡೆ, ಹುಳಿ, ಭದ್ರಮುಸ್ತೆ, ಇವಂ ಪ್ರತ್ಯೇಕಂ ಸಮಾನಂಗೊಂಡು, ತುಪ್ಪದಲ್ಲಟ್ಟು, ಪ್ರತಿಪಾಕಕ್ಕೆ ಕಟುಕರೋಹಿಣಿಯನಿಕ್ಕಿ, ನೆತ್ತಿಗೊತ್ತಲು ನೆತ್ತಿಯ ಶೂಲೆ ಮಾಣ್ಗುಂ. ಹುರುಳಿಯ ಬೇರಂ ಸಿದ್ಧದಿನದಲ್ಲಿ ತಂದು, ಆ ಹಣ್ಣಿನ ಹುಳಿಯಲ್ಲಿ ತೇದು ನೆತ್ತಿಗೊತ್ತಲು, ಶೂಲೆ ಮಾಣ್ಗುಂ. ಲೋಳಿಯಸರ, ಹಾವುಮೆಕ್ಕೆಯ ಸಮೂಲ ರಸ, ಒಳ್ಳೆಎಣ್ಣೆಯಲ್ಲಿ ಅಟ್ಟು ಮಂಡೆಗೊತ್ತಲು ನೆತ್ತಿಯ ಶೂಲೆ ಮಾಣ್ಗುಂ. ಗಾಂಧಾರಿಯ ಎಲೆಯ ರಸ, ನೀರುಬನ್ನಿಯ ಸೊಪ್ಪ ರಸ, ನಿಂಬೆಯ ಹುಳಿ, ಎಣ್ಣೆಯಲ್ಲಿ ಕಾಸಿ ಮಂಡೆಗೊತ್ತಲು ಮಂಡೆಶೂಲೆ ಮಾಣ್ಗುಂ. ಸುರುಸುರುಕೆಯ ಸಮೂಲ ರಸವಂ ತುಂಬೆಯ ರಸ, ನಾರುಬೇಳೆಯ ರಸ, ಆಲದ ರಸ, ಇವ ಸಮಾನಂಗೊಂಡು ಎಣ್ಣೆಯಲ್ಲಿ ಅಟ್ಟು ಹಿಂಗು ಹಾಕಿ ನೆತ್ತಿಗೊತ್ತಲು. ಕಪಾಲಶೂಲೆ ಮಾಣ್ಗುಂ. ನೆತ್ತಿಯಶೂಲೆ, ತಲೆಶೂಲೆ ಮಾಣ್ಗುಂ. ಮುಳ್ಳುಕೊಳವಳಿಕೆಯ ರಸ, ಪುಳ್ಳಂಪುಣಸೆಯ ರಸ, ಎಳ್ಳೆಣ್ಣೆಯಲ್ಲಿ ಹೊಯ್ದು ಕಾಸಿ ನೆತ್ತಿಗೊತ್ತಲು ನೆತ್ತಿಯ ಶೂಲೆ ಮಾಣ್ಗುಂ. ನಾಯತುಳಸಿಯ ರಸಮಂ ನಿಂಬೇಹುಳಿಯಲ್ಲಿ ಕಾಸಿ ನೆತ್ತಿಗೊತ್ತಲು ನೆತ್ತಿ ಶೂಲೆ ಮಾಣ್ಗುಂ.

ತಲೆನೋವಿಗೆ :—ಅರಿದಳಮಂ ಅಕ್ಕಿಗಚ್ಚಿನಿಂ ನಸ್ಯಂ ಮಾಡೆ ತಲೆಯ ಹುಳು ಕಳೆದು ಬೀಳುವುದು. ಸೈಂಧವ, ಎಳ್ಳೆಣ್ಣೆಯಲ್ಲಿ ಕಾಸಿ ತಲೆಗೆರೆಯೆ ತಲೆನೋವು ಮಾಣ್ಗುಂ. ಗಾಂಧಾರಿಯ ಸೊಪ್ಪಿನ ರಸ, ಜಟಾಮಾಂಸಿ, ಹಸುವಿನಬೆಣ್ಣೆ, ಇವನ್ನು ಕಾಸಿ, ನಸ್ಯವಂ ಮಾಡಲು ಶಿರೋರೋಗ ಮಾಣ್ಗುಂ.

ಚಕ್ಷುರೋಗನಿದಾನ :—ವಾತದಿಂ ಅತ್ಯಂತ ಕುತ್ತುತ್ತಿರುವುದುಂ, ಅರಿತೆಗೆವುದುಂ, ನೀರು ಕೀವು ಸುರಿವುದುಂ, ಹೊಳಕು ಬಾರದುಂ, ಅಪ್ಪುಕಪಾಲ ಬೇನೆ ಗೈವುದುಂ, ಇನಿತು ವಾತರೋಗ. ಹಾಲಲ್ಲಿ ಅವುಡಲದ ಎಲೆಯನದ್ದಿ ಮೃದುಶಾಖವಾಗಿ ಒತ್ತಲು ಮಾಣ್ಗುಂ. ಹಾಗಲದ ಬೇರ ಕುದುರೆ ಮೂತ್ರದಿ ಅರೆದು ಕಣ್ಣಿಗೆ ಹಿಂಡಲು ನೀರುದೋಷ ಕೆಡುವುದು.

ಮಲಮೂತ್ರಾಧ್ವಾನದಿಂದಂ ಮಿನುಗುವ ಬಿಸಿಲಿಂದಂ
ತಾಂಬೂಲಸೇವಾಶ್ರಾಂತದಿಂದಂ ಅಧಿಕಸುರತದಿಂದಂ
ಸಲೇಕ್ಷಾಧಿಕ್ಯದಿಂದಂಅತಿಲವಣಾಮ್ಲಂಗಳಿಂದಂದುರ್ಗಮುಮುಪ್ಪಸಿಲದಿಂದಂ
ರೋದನದಿಂದಂ ದೂರನಡೆವದಿನಿತರಿಂ ಪುಟ್ಟುಗುಂ ನೇತ್ರರೋಗಂ.

ವಾತದಿಂದ ಪುಟ್ಟಿದವು ೨೪ ತೆರದ ಕಣ್ಣಿವ್ಯಾಧಿಗಳು :—

ಕೃಚ್ಛ್ರೋನ್ಮೀಲನಿಮೇಷಕುಂಭಿವಿಷಮುಂ ಶೋಷಂ ಚ ಪಿಲ್ಲಿತ್ರಯಂ
ಕ್ಲಪ್ತಸ್ಯಾಮದಿವಾಕರೇಂದುನಿಚಯಂ ವಾತಾಸ್ರಕಂ ಕುಷ್ಠಕಂ ।
ನೇತ್ರಸ್ತಂಭಕಪೋಲಶೂಲಪಟಲಂ ಪಕ್ಷ್ಮಾದಿಭೇದಂ ಸದಾ
ನಿತ್ಯಂ ಕರ್ದಮಬಾಷ್ಪಶುಕ್ಲಮಿನಿತುಂ ವಾತೋದ್ಭವಂ ಚೋದಿತಂ ॥

ಪಿತ್ತದಿಂದಪ್ಪ ೨೪ ತೆರದ ಕಣ್ಣಿವ್ಯಾಧಿಗಳು :—

ರಾತ್ರ್ಯಾಂಧಂ ಉಪನಾಹ ಪರ್ವಣಿಮರುಚ್ಚಾಳೈಸಧೂಮಾಕ್ಷಿಕಂ
ಕಾಸಕ್ಲಿನ್ನಹರಿದ್ರದಾಹಮಧಿಕೋಷ್ಣಾಶ್ರುಬಿಸಾವರ್ತಕಂ ।
ಶುಷ್ಕಂ ಪೀತಪುಲಂ ಭ್ರಮುಚ್ಚ ನಿಜನೇತ್ರಾಂತಂ ಚ ರೋಗಾನ್ವಿತಂ
ಪೂಯಸ್ರಾವಕಪಿಚ್ಛಿಲಾಮುಖಮಹಾರೌದ್ರಂ ಸಮುತ್ಪ್ಯಷ್ಣತಾ ॥
ಚಂದ್ರಂ ಕೋಕಿಲಮೂಲಜೀಕಮಥವಾ ವೈಗಂಧ್ಯವಿಸ್ಫೋಟಕಂ
ಪಿತ್ತಾಧಿಕ್ಯವಿಶೇಷಕೀರ್ತಿತಮಿದಂ ಶ್ರೀಪೂಜ್ಯಪಾದೋದಿತಂ ।

ಶ್ಲೇಷ್ಮದಿಂದ ಹುಟ್ಟಿದವು ೨೪ ತೆರನಕ್ಕು :—

ಶುಕ್ಲಂ ದುರ್ಮಲಕೀಟಕಾರ್ಮಪಟಲಂ ಕಂಡೂಷ್ಮಕೀಲ್‌ಗ್ರಂಥಿಕಂ
ಶೋಷಾಮರ್ಬುದಜಿಹ್ವಬೇನೆ ಪ್ರತಿರೋಮಂ ಪಿಷ್ಟಕಂ ಶ.ಕ್ತಿಕಂ ॥
ಪಕ್ವಾಪೂತಶಿರೋಗ್ರಶೂಲವಿಷಮುಸ್ವೇದಂ ಚ ಲೂತಿಸ್ತಥಾ
ಶೀರ್ಷಂ ಪಾರ್ಶ್ವಮಹಾಭಿಘಾತಕುಪಿತಂ .... ... .... ... ।
.... .... .... . ... ... ... ... ...
ಛಾಯಾನೀಲಕಫವ್ರಣಾಸ್ತಿಮಿತಮಾಜ್ಯಾಖ್ಯಂ ಚ ಶ್ಲೇಷ್ಮೋದ್ಭವಂ ॥

ರಕ್ತದಿಂ ಹುಟ್ಟಿದ ೨೪ ತೆರದ ಕಣ್ಣುವ್ಯಾಧಿಗಳು :—

ರಕ್ತಸ್ರಾವಕಮರ್ಜುನಂ ಚ ವಿಕಲಂ ಶೂಲಂ ಚ ದಾಹಂಕರಂ
ವಿಷ್ಟಂಭಂ ಬಹುವೇದನಾನಿಮಿಷಮುಂ ಸೂಚೀಭಿದಾಘೋರಕಂ ।
ಕ್ರೂರಂ ಸ್ನಿಗ್ಧಕತೂಣಕಂ ಚ ರುಧಿರಾವಷ್ಟಂಭಲೂತಿಸ್ತಥಾ
ಶೀರ್ಷಂ ಪಾರ್ಶ್ವಹಾಭಿಘಾತಕುಪಿತಂ ಸಂಕೋಚರೂಕ್ಷಸ್ತಥಾ ॥
ಪಕ್ಷೋಚ್ಛೋನಕಘಾತರಾಗನಿಚಯಂ ರಕ್ತೋದ್ಭವಂ ಕೀರ್ತಿತಂ
ಸಾಧ್ಯಾಸಾಧ್ಯ ಭಿಷಗ್ವರೇಣ್ಯ ವಿಪುಲಪ್ರತ್ಯೇಕನೇತ್ರಾಮಯಾನ್ ।

ಸರ್ವಂ ಲೋಕಹಿತಾತ್ಮಸದ್ಗುಣಕರಂ ಸೇವ್ಯಂ ಚ ಶಾಸ್ತ್ರಾನ್ವಿತಂ
ಸೌಖ್ಯಂ ಶಾಶ್ವತಪೂಜ್ಯಪಾದರಚಿತಂ ವಿದ್ವಜ್ಜನಕ್ಷಾಶ್ರಯಂ ॥

ಕೃಥ್ರೊನ್ಮಿ (ಲನಿವೇಷವಾತ ಇವು ಮೊದಲಾಗಿ ಅರ್ಬುದಾಂತವಾಗಿ ೨೪ ತೆರದ ಕಣ್ಣ ರೋಗಂಗಳು ಸಾಧ್ಯ. ಅಲ್ಲಿಂದಮೇಲೆ ಪಕ್ಷ್ಮಾಂತವಾದ ವ್ಯಾಧಿ ಅಸಾಧ್ಯ. ಇದಕ್ಕೆ ಶಸ್ತ್ರಕರ್ಮವಂ ಮಾಡಲಾಗದು. ಮತ್ತೆ ಆವುದಾದರೊಂದು ತೃಣ ಮೊದಲಾದವು ತಾಗಿದರೆ ಆದರಿಂದ ಹುಟ್ಟಿದ ವ್ಯಾಧಿಗಳು ತೂಣಕವೆನಿಸಿಕೊಂಬುವು. ಅವು ಅಸಾಧ್ಯ. ಕಣ್ಣುರೋಗಂಗಳು ತಿಮಿರವಾಗಿ ಇಹವು. ಕೆಂಪಾಗಿ ನೀರು ಸುರಿವುದಕ್ಕೆ ೩ ದಿನ ಶೈತ್ಯೋಪಚಾರಂಗಳಂ ಮಾಡುವುದು. ಮೇಲೆ ಸಮಧಾತುವಿನ ಅಂಜನವಿಕ್ಕುವುದು. ಮುಂದ ದಿನ ಇಕ್ಕಲಾಗದು.

[1] ಸಮಸ್ತ ಕಣ್ಣುವ್ಯಾಧಿಗಳಿಗೆ :–ಕಣ್ಣತೊಳೆವ ಕಷಾಯ :–ನೆಲ್ಲಿಯ ಚಟ್ಟು, ಪಾಷಾಣ ಬೇಧಿ, ನೇರಿಲತೊಕ್ಕು, ಇವಂ ಕಷಾಯವಂ ಮಾಡಿ ತೊಳೆಯುವುದು. ಅಂಬಿಲವಂ ಕಾಸಿ ಮೂಗಿಗೆ ಶೇಕಂ ಮಾಡುವುದು. ಉಗುರಿಂ ಕಣ್ಣ ಮಲಮಂ ತೆಗೆಯಲಾಗದು.

ನಯನಕ್ಕೆ ಶೀವ ಉದ್ರೇಕಿಸುವ ಸಮಯದಲ್ಲಿ ಹಾಲು, ನೀರು, ಏರಂಡಪತ್ರ, ಫಲಂಗಳನ್ನಿಕ್ಕಿ ಕಾಸಿ ಮೃದುಸ್ವೇದವಂ ಮಾಡುವುದು. ವಾತಪ್ರಕೋಪದ ಚಕ್ಷುರೋಗಂಗಳೆಲ್ಲ ಕೆಡುಗು. ಬೇಳಲ ಎಲೆಯನಿಕ್ಕಿ ಹಾಲಲ್ಲಿ ಕಾಸಿ ಸೊಗುಸುವಂತಾಗಿ ಶೇಕಂ ಮಾಡುಗೆ, ಪಿತ್ತ ಪ್ರಕೋಪದ ಚಕ್ಷುರೋಗ ಮಾಣ್ಗುಂ. ಶ್ಲೇಷ್ಮಕ್ಕೆ— ಬೆಲ್ಲವತ್ತದ ಎಲೆಯಂ ಹಾಲಲ್ಲಿ ಕಾಸಿ ಸೊಗಸುವಂತಾಗಿ ಶೇಕಂ ಮಾಡುವುದು. ಶ್ಲೇಷ್ಮಪ್ರಕೋಪದ ಚಕ್ಷುರೋಗಂ ಕೆಡುಗುಂ. ವಾತ ನಯನಕ್ಕೆ ಉಬ್ಬೆಯ ಔಷಧಿ–ಲೊಕ್ಕಿ, ಕಗ್ಗಿ, ೨ ಗುಳ್ಳ, ಉಮ್ಮತ್ತ, ಎಕ್ಕೆಯ ಹಣ್ಣೆಲೆ, ಆಡಿನಹಿಕ್ಕೆ, ಇಷ್ಟನ್ನೂ ಕದಕಿ ಅಂಬಿಲದಲ್ಲಿ ಹಾಕಿ ಕಾಸಿ ಉಬ್ಬೆಯಂ ಮಾಡುವುದು. ವಾತ ದಿಂದ ಹುಟ್ಟಿದ ಚಕ್ಷುರೋಗಂ ಕೆಡುಗುಂ. ಚಾಳಾಯಿಸಕ್ಕೆ–ಬಿಳಿಯ ಗಿರಿಕರ್ಣಿಕೆಯ ಬೀಜ, ಕಪ್ಪಲಿ,ಕಾಚುಲವಣ, ಕಾಯಹಣ್ಣು ಇವಂ ಸಮಾನಂಗೊಂಡು ಜೇನುತುಪ್ಪದಿ ಮರ್ದಿಸಿ ಗುಳಿ ಗೆಯಂ ಮಾಡಿ ಮೊಲೆಹಾಲಿಂದೆಚ್ಚಿ ಚಾಳೀಸ ತಿಳಿವುದು. ನೆತ್ತಿಗೆ ಉಷ್ಣವಾದರೆ— ಶ್ರೀಗಂಧ, ಲಾಮಂಚ, ಮುಡಿವಾಳ, ಎಲಚಿಯ ಕೊನರು, ಆಲದ ಬಿಳಲು, ಭದ್ರಮುಸ್ತೆ, ಸಂಪಿಗೆಯ ಮೊಗ್ಗೆ, ನವಿಲುಗರಿಯ ಕಣ್ಣು, ಸಾರಂಗದ ಕೋಡು, ಇವೆಲ್ಲವಂ ಗಂಧವಾಗಿ ಅರೆದು ಹಸುವಿನ ತುಪ್ಪವ ಕೂಡ ಹಾಕಿ ನಿಂಬೆಯ ಹುಳಿಯಲ್ಲಿ ೧೨೦ ಸಾರಿ ಭಾವಿಸಿ ಸರ್ವಾಂ ಗಕ್ಕೆ ಮಸ್ತಕಕ್ಕೆ ಒತ್ತಿಕೊಳ್ಳೆ ದಾಹೋಷ್ಣ ಹರ. ಎಳ್ಳು ಹೂ ೮೦, ಜಾತಿಯ ಹೂವು ೨೨, ಗುಳ್ಳದ ಹೂ ೫೦, ಕರಿಯ ಕಟ್ಟೆವತ್ತಿಗೆಯ ಹೂ ೭೦, ತುಂಬೆಯ ಹೂ ೬೦, ನಂದ್ಯಾವರ್ತದ ಹೂ ೨೫, ಬಿಳಿಯ ಗಿರಿಕರ್ಣಿಕೆಯ ಹೂ ೨೧, ತುತ್ತ, ಕಪ್ಪಲಿ, ಪಿತ್ತಕ, ರೋಹಿಣಿ, ರಸಾಂಜನ, ನೀಲಾಂಜನ, ತ್ರಿಫಲೆ ಗ ೧, ಇವಂ ಬೇರೆಬೇರೆ ಪ್ರತ್ಯೇಕವಾಗಿ ಮರ್ದಿಸಿ ಮೊಲೆಹಾಲಿಂದೆಚ್ಚು ವುದು. ಆ ಎಳ್ಳುಹೂ, ಗುಳ್ಳದ ಹೂ, ತುಂಬೇಹೂ, ಕರಿಯ ಕಟ್ಟೆವತ್ತಿಗೆ ಹೂ, ನಂದ್ಯಾ ವರ್ತದ ಹೂ, ಬಿಳಿಯ ಗಿರಿಕರ್ಣಿಕೆ, ಇವಂ ಪುಳ್ಳಂಪುಣಸೆಯ ರಸದಿಂದ ಎಲ್ಲವಂ ಸಣ್ಣನಾಗಿ ಅರೆದು ಸೀಸದ ಕುಡಿಯಿಂದ ಹಚ್ಚುವುದು.

---

1 ಇಲ್ಲಿಂದ ನಂತರ ಹತ್ತೂವರೆ ಪಂಕ್ತಿಗಳು ಹಿಂದೆ 180ನೇ ಪುಟದಲ್ಲಿ ಬಂದಿವೆ.

**ಅರಿಯು, ಪಟಲಂ, ನೀರು ಸುರಿವದು, ಅರ್ಜುನಗಣ್ಣು, ಅದಕ್ಕೆ ಔಷಧಿ :—ನೀಲಾಂಜನ, ರಸಾಂಜನ, ತುತ್ತ, ಕಪ್ಪಲಿ, ಪಿತ್ತಕ, ರೋಹಿಣಿ, ಸಹಸ್ರವೇದಿ, ಕಪಾಲದೋಡು, ಕುಕ್ಕುಟಾಂಡದ ಓಡು ಗ ೧, ರಸ ಗ ೧, ಲೋಹಚೂರ್ಣ ಗ ೧, ತಾಮ್ರದ ಕಿಲುಬು ಗ ೧, ಕಡಲ ನಾಲಿಗೆ ೧, ಸೈಂಧವ ಗ ೧, ಬೇವಿನ ಬೀಜ ಗ ೧, ತ್ರಿಫಲೆ ೩, ತ್ರಿಕಟುಕ ೩, ಸ್ಫಟಿಕ ಗ ೧, ಸೌವೀರಾಂಜನ ಗ ೧, ಕರ್ಪೂರ, ಶಿಲಾಧಾತು ಗ ೧, ಬೇಲದ ಬೀಜ ಗ ೧, ಇವಂ ಕಲ್ಕವಾಗಿ ಅರೆದು ಮಂಜುಗಣ್ಣಿಗೆ ಮೊಲೆಹಾಲಿಂದ ಹಚ್ಚೆ ಕಣ್ಣುರೋಗ ಮಾಣ್ಗುಂ.**

ಮಂಜುಗಣ್ಣಿಗೆ :—ಗುರುಗುಂಜಿಯ ಬೇರಂ ಅಜಮೂತ್ರದಿಂದ ಹಚ್ಚೆ ಕಣ್ಣುರೋಗ ಮಾಣ್ಗುಂ.

ಸರ್ವಾಂಗಜ್ವರಕ್ಕೆ :—ನಾಭಿಯನ್ನು ಕಿರುಕುನಾಲೆಯ ರಸದಲ್ಲಿ ಮರ್ದಿಸಿ ಸಹದೇವಿ, ಮೊಲೆಹಾಲಲ್ಲಿ ನಸ್ಯವಂ ಮಾಡಲು ಒಂದು ಭಾಗ ಜ್ವರ, ನಾಸಾರಂಧ್ರವುಳ್ಳೆಡೆಗೆ ನಸ್ಯವಂ ಮಾಡಲು ಸರ್ವಾಂಗಜ್ವರ ಹರ.

ಇದಕ್ಕೆ ಸ್ತಂಭನ :—ಗಾಂಧಾರೀರಸವುಂ ನಸ್ಯಂ ಮಾಡುವುದು.

ಪಿತ್ತಕ್ಕೆ :—ಖಡ್ಗಪತ್ರ ಎಲೆಯಂ ಕೊಯ್ಯುವುದು. ಹುಲುಚಲವದ ಹಗಿನಂ ಎಕ್ಕೆಯ ಹಾಲಲ್ಲಿ ಅರೆದು ಕೊಡಲು ಪೈತ್ಯ ಹರ. ತಪ್ಪದು.

ಮೂಲವ್ಯಾಧಿಗೆ :—ಹಿರಿಜೇಕನು ಪುಡಿ ಮಾಡಿ ಹಾಗಲ ಬೇರ ಕೆಂಡದಲ್ಲಿ ಈ ಚೂರ್ಣವ ಹಾಕಿ ಕಾಸಲು ಮೂಲವ್ಯಾಧಿಯ ಮೊಳೆ ಕರಗುವುದು.

ಕಣ್ಣುರೋಗಕ್ಕೆ :—ಎಳ್ಳ ಹೂ ೮೦, ಘಟ್ಟ ಮೆಣಸು ೧೬, ಜಾಜಿಯ ಹೂವು ೩೫, ಹಿಪ್ಪಲಿ ಬೀಜ ೬೦, ಇಷ್ಟನ್ನೂ ಆಡಿನ ಮೂತ್ರದಲ್ಲಿ ಅರೆದು ಗುಳಿಗೆಯಂ ಮಾಡಿ ನೆಳಲೊಳಾರಿಸಿ ನೊಲೆಹಾಲಿಂದ ಹಚ್ಚೆ ತಿಮಿರ ಮೊದಲಾದ ಕಣ್ಣುರೋಗ ಮಾಣ್ಗುಂ.

ಸರ್ವವ್ರಣಗಳಿಗೆ :—ತಾಳಕ, ಗಂಧಕ, ಅಳಲೇಕಾಯಿ, ಕೆಂಪಿನ ಕಣಿಗಿಲ ಬೇರು, ಇವಂ ಸಿಂಬೆಯ ಹುಳಿಯಿಂದರೆದು ಒಂದು ಪಡಿ ಎಳ್ಳೆಣ್ಣೆಯಲ್ಲಿಟ್ಟು ತೊಡೆಯೆ ಸರ್ವವ್ರಣ ಹರ.

ಕುರುಕುಹುಣ್ಣಿಗೆ :—ಶುದ್ಧರಸ ೨ ಭಾಗ, ವಂಗಭಸ್ಮ ೩ ಭಾಗ, ಮಯೂರತುತ್ತ ೩ ಭಾಗ, ಬಿಳಿಯ ಪಾಷಾಣ ೧ ಭಾಗ, ಬಿಳುಗಾರ ೧ ಭಾಗ, ಅಳಲೇಕಾಯಿ ೪ ಭಾಗ, ಇವನ್ನು ಖಲ್ವದಲ್ಲಿ ಇಕ್ಕಿ ಎಕ್ಕೆಯ ಹಾಲಲ್ಲರೆದು ನೆಳಲಲ್ಲಿ ಆರಿಸಿ ಎಲಚಿಯ ಬಿತ್ತದ ಪ್ರಮಾಣ ಗುಳಿಗೆಯಂ ಮಾಡಿ ಹುಣಸೆಯ ಕೆಂಡದಲ್ಲಿ ಕುರುಕುಹುಣ್ಣಿಗೆ ಹೊಗೆಯಂ ಹಾಕಲು ಮೂರು ದಿನ ಉಬ್ಬೆಯಂ ಹಾಕಲು ಕುರುಕುಹುಣ್ಣು ಮಾಣ್ಗುಂ.

ಬೀಜ ತಿಂಬ ಹುಳುವಿಗೆ :—ಸೀಸವನ್ನು ಕಬ್ಬಿಣದ ಪಾತ್ರೆಯಲ್ಲಿ ಹಾಕಿ ಸುರುಸುರುಕೆ ಸೊಪ್ಪಿನ ರಸದಿಂದ ಹುರಿಯುವುದು. ಪಿಟಲ ಹಸಿಯ ಉಪ್ಪು ಹಾಕಿ ಹುರಿಯುವುದು. ಆ ಮೇಲೆ ಎಳನೀರ ಮರ್ದಿಸಿ ಹುರಿಯುವುದು. ಚಂದವುಕ್ಕು. ಇಂಗುಳದ ತಿಗಡು, ತಗಚೆ

ಬೇರು, ಯಷ್ಟಿಮಧುಕ, ಶ್ರೀಮರಗೊರಡು, ಪುಡಿ ಮಾಡಿ ಜೇನುತುಪ್ಪದಿಂದ ಸಣ್ಣ ಅರುವೆಯಲ್ಲಿ ಪೊಟ್ಟಣವ ಕಟ್ಟಿ ತೊಲಗಿನ ಮೂರ್ಮಡಿ ಸಣ್ಣನಾಗಿ ಯೋನಿಯೊಳಗಿರಿಸಿ ತೆಗೆದು ನೋಡೆ ಬೀಜವ ತಿಂಬ ಹುಳು ಸತ್ತು ಬೀಳ್ಗುಂ.

ನಿರ್ದೆಸೆಗೆ:—ಕರ್ಕ್ಕೋಜೇರ ತಿಗಡ ಶರ್ಕರೆ ಬೆರಸಿ ಮೆಲ್ಲಲು ನಿರ್ದೆಸೆ ಮಾಣ್ಗುಂ.

ಮೂಗಿನ ರಕ್ತಕ್ಕೆ :—ಆಲದ ಬಿಳಲು, ಕೆಂಪಿನ ಹರುವೆಯಂ ತಂದು ಕರಿ ಮಾಡಿ ಸುಣ್ಣದಲ್ಲಿ ಕಲಸಿ ತುಪ್ಪವ ಕಲಸಿ ಇಕ್ಕಿದರೆ ನೀರು ಬಿಡುವುದು. ತುಪ್ಪ ಕರಗಿಹೋಗುವುದು. ಆ ಅರುವೆಯ ಪುಡಿ ಮಾಡಿ ಮೂಗಿಗೆ ಹೊಗೆಯ ಕೊಡಲು ಮೂಗಿನ ರಕ್ತ ಮಾಣ್ಗುಂ.

ಅರಗುಹುಣ್ಣಿಗೆ :—ಕೆಂಪಿನ ಹರುವೆಯನು ಸುಟ್ಟು ಕರುಕು ಮಾಡಿ ಸುಣ್ಣಮಂ ಬೆರಸಿಕೊಂಡು ಹುಣ್ಣಿನ ಮೇಲೆ ಬೊಟ್ಟಸಿಡುವುದು. ಅರಗುಹುಣ್ಣು ಮಾಣ್ಗುಂ.

ಶುಕ್ಲಸ್ತಂಭನಕ್ಕೆ :—ತಾಳೀಹಗಿನಂ ನೀರಲ್ಲರೆದು ಹೊಕ್ಕುಳಿಗೆ ಅರೆದು ತೊಡೆಯೆ ಶುಕ್ಲ ಸ್ತಂಭನ.

ವ್ರಣಕ್ಕೆ :—ಈಶ್ವರಿಯ ಬೇರ ತುಪ್ಪದಲ್ಲಟ್ಟು ಪೂಸುಗೆ. ವ್ರಣ ಮಾಣ್ಗುಂ, ಬ್ರಹ್ಮ ದಂಡೆಯ ಬೇರು, ದೇವದಾರು, ತುಪ್ಪದಲ್ಲಿ ಅರೆದು ಪೂಸುಗೆ, ವಿಕ್ಷತ ಕ್ಷುದ್ರವ್ರಣಗಳು ತೀರ್ಗುಂ. ಓಂ ನಮೋ ಭಗವತೇ ಪಾರ್ಶ್ವನಾಥಾಯ ಸರ್ವವ್ರಣಂ ವಿಧ್ವಂಸಯ, ಭೇದಯ, ಅಷ್ಟಾದಶ ವಿಷೂಚೀಃ ಆಹಾರಯ, ಓಂ ಕಂ, ಹಿಂ, ಸಃ, ಹುಂ ಫಟ್ ವ್ರಣಶಾಂತಿಂ ಕಾರಯ ಸಹಾಯ ಮಾತ್ರದಿಂ ... ... ... (ಅಪೂರ್ಣ).

## D 1394

.... ... ... ಜೀರಿಗೆ ಗ ೩, ಓಮ ಗ ೬, ಸೈಂಧವ ಗ ೭, ... ... ... ಗಡಗ ಗ ೨೦, ಅಂಗುರದ ಚೂರ್ಣ ಗ ೧೫, ಮಂಗರವಳ್ಳಿಯ ಗಿಡದ ಚೂರ್ಣ ... ... ... ತೊಪ್ಪೆ ಗ ೧೦, ಮಟ್ಟುಹುರುಳಿಯ ಸೊಪ್ಪು ಗಂ, ಮಂಗರವಳ್ಳಿಯ ಚೂರ್ಣ ಗ ೩೦, ಇಷ್ಟನ್ನೂ ಕೂಡಿ ಉಪಯ ಗ ತೂಕವ ಬಿಸಿನೀರಲ್ಲಿ ಕೊಂಬುದು. ರಾತ್ರಿಯಲ್ಲೂ ಊಟದಿಂ ಮೇಲೆ ಬಿಸಿನೀರಲ್ಲಿ ತ್ರಿಫಲ ಗ ೧ ಕೂಡಿ ಕೊಂಬುದು. ... .... ... ... ... .... ಕೊಂಬುದು.

ತಾಳೀಸಸತ್ರಂ ಮರಿಚಂ ನಾಗರಂ ಪಿಪ್ಪಲೀ ಸಮಂ ।
ತಥೋತ್ತರಂ ಖಗಾಚ್ಛೇಂಗುತ್ರಿವದ್ವಹ್ನಿವಚಾಸ್ತಥಾ ॥
ಶ್ಲೇಷ್ಮವಾತಪಿತ್ತಹರಂ ತಚ್ಚೂರ್ಣಂ ದೀಪನಂ ಪರಂ ।
ಸರ್ವಲೇಪರಸೋ ... ... ... ... ... ... ... ॥

ಶ್ಲೇಷ್ಮಕ್ಕೆ:—... ...ಸೊಪ್ಪಂ ಇವಂ ಜೇನುತುಪ್ಪದಲ್ಲಿ ಸೇವಿಸಲು ಶ್ಲೇಷ್ಮಹರ. ಅಣಿಲೆ, ಶುಂಠಿ, ಬೆಲ್ಲ, ಇವು ತ್ರಿದೋಷಹರ, ... ... ... ... ಮೂತ್ರಾದಿಗಳು ಚೆನ್ನಾಗಿ ಹೋಗು

ವುವು. ಶ್ಲೇಷ್ಮಕ್ಕೆ ವಿರೇಕವಮನಂ ಮಾಡಿಸುವುದು. ಇಂಗುಳದ ಬೇರ ತೊಪ್ಪೆ... ... ... .... ....ಲ್ಲಿ ಕಾಲ ಮೆಲ್ಲಲು ಕೆಮ್ಮು ಹರ.

ಬ್ರಹ್ಮದಂಡೆಯ ಬೇರಂ ಆ ಕಾಲಲ್ಲಿಕ್ಕಿ ಆಡಿಸಿಕೊಂಡರೆ ಗುರುಗುರು ಹರ. ... ... ... ಹುಣಸೇಗೊಟ್ಟೆಯಷ್ಟು ಬಾಯಲ್ಲಿರಲು ಉರಿಕೆಯು ಹರ.

ಕೆಮ್ಮಿಗೆ :— ಕೋಷ್ಠ ಗ ೪, ಅತಿಬಜೆ ಗ ೪, ಅಗಳುಶುಂಠಿ ಗ ೬, ಚಿತ್ರಮೂಲ ಗ ೮, .... .... ... ಅರೆದು ಇದರ ಚೂರ್ಣವಂ ಮಾಡಿ ತುಪ್ಪದಲ್ಲಿ ಅಟ್ಟು ಬತ್ತಿಯ ನೂಲ ಮಾಡಿ ಹುಣ್ಣಿನ ಒಳಗಿಕ್ಕಿ ಶೋಧಿಸಿ ದ್ರವವಂ ಕಳೆದು ಬ ... ... .... ....ರಸಾಂಜನ, ಬೇವಿನ ಎಲೆ, ಇವನ್ನರೆದು ಪೂಸುಗೆ, ದೋಷ ಮಾಣ್ಬುಂ.

ಮೂಲವ್ಯಾಧಿಗೆ :—ಗಣಜಿಲೆಯ ಬೇರು, ಅರಸಿನ, ದಂತಿ ... ... ... ಚಿತ್ರಮೂಲ, ಲಕ್ಕಿಯ ಬೇರು, ಶ್ರೀಖಂಡ, ಮಾತುಲುಂಗ, ಇಸಿತುಂ ಸಮಾನಂಗೊಂಡು ಎಣ್ಣೆಯಲಟ್ಟು ಪ ... ... ... ...ಕದ ತಿಗಡ, ಆಲದ ಎಲೆ, ಅಮುರದವಳ್ಳಿ, ಶುಂಠಿ, ಯಷ್ಟಿಮಧುಕ, ಇವಂ ಚೂರ್ಣವಂ ಮಾಡಿ ಎಣ್ಣೆಯಲ್ಲಿ ... .... .... ಮೂಲವ್ಯಾಧಿ ಉಳ್ಳವರು ಬ್ರಹ್ಮಚರ್ಯವ ಮಾಡಲು ... ... ಹಳೆಯ ರಾಜಾನ್ನದಕ್ಕಿ ... .. ಹೊನಗನ್ನೆ, ಚಕ್ರವರ್ತದ .... .... ಕುಂಬಳದಕಾಯಿ, ಪದ್ಮಕ, ಕಾಯ, ಪಥ್ಯ ಜೋಳಕರಗ ... .... ಳ ಲೇಸು ..........ಸುಟ್ಟು ಆ ಕರಿಯಂ ಪೂಸುವುದು. ೧೧ ದಿನ ಹುನು ......... ೩ ಹೆಗ್ಗಡಸಿಗೆಯ ಸೊಪ್ಪಂ ತಂದು ತುಳಿದು ರಸವಂಗೊಂಡು ಅಟ್ಟು ವಂ ... ... ... .

ಗುಲ್ಮಶೂಲೆಗೆ :—ಇಂಗು, ಶುಂಠಿ, ಸೈಂಧವ, ಓಮು, ಜೀರಿಗೆ, ಅಣಿಲೆ, ಇವಂ ಏರಂಡ ತೈಲದಲ್ಲಿ ಮೆಲ್ಲಲು, ಗುಲ್ಮಶೂಲೆ ಹರ.

ಶೂಲೆಗೆ :— ಪಿಟಲುಪ್ಪು......ವಾ ಎಣ್ಣೆಯಲ್ಲಿ ಅರೆದು ನಸ್ಯಂ ಮಾಡೆ ಅಜವಿಷದಿಂದ ಶೂಲೆ ಹರ. ತ್ರಿಕಟುಕ, ಇಂಗು, ಇವಂ ೧೮ ... ... ... ಶೂಲೆ ಹರ.

ನೊಡವಿಗೆ :— ಅವರೆಯ ಪಂಚಾಂಗವಂ ತಂದು ನೆಳಲಲ್ಲಿ ...... ಹಾಲು ಸಕ್ಕರೆ ಸಹಿತ ಕೊಂಬುದು. ಮುಷ್ಟಿಯ ಸೊಪ್ಪು ತಂದು... ... ... ...ಯಲಿ ಕಾಲ... ... ಪೂಸಲು ಮೊಡವಿ ಬಂಗು ಕೆಡುಗುಂ.

ವಿಸರ್ಪಕ್ಕೆ :—ಮೆಣಸು, ಸೈಂಧವ, ಚೂರ್ಣಂ ಮಾಡಿ ಪಲವಂ ಕಪ್ಪಡದಲ್ಲಿ ಕಟ್ಟಿ ಸೊ... .... .... ತಾಮ್ರ ಭಾಜನದಲ್ಲಿ ನಿಂಬೆಯಹಣ್ಣಿನ ರಸದಲ್ಲಿ ಚೆನ್ನಾಗಿ ಬಾರಿಸಿ ಕಲ್ಕವಂ ಮಾಡಿ ವಿಸರ್ಪವ ಬೆರಳಿನಲ್ಲಿ ಒರಸಿ ಪೂಸುಗೆ, ಉಂ ... ... ... ಷ್ಟು ವಿಸರ್ಪಂ ಕೆಡುಗುಂ.

ಬಿಕ್ಕುಳಿಗೆ :—ಖರ್ಜೂರಹೊಟ್ಟೆ ... ... ರಾಗಿ, ಸಕ್ಕರೆ, ಇವಂ ಹುರಿದು ಚೂರ್ಣವಂ ಮಾಡಿ ಜೇನುತುಪ್ಪದಲ್ಲಿ ಗುಳಿಗೆಯಂ ಮಾಡಿ ಆ ಹಾಲಲ್ಲಿ ಇರಿಸಿ......ಒಂದು ... ... ತುಪ್ಪ ಮಂಡಲ ಕೊಡೆ ಬಿಕ್ಕು ಮಾಂಬುದು. ........ಹುಲಿಗಿಲಬೀಜ, ಅರಿಸಿನ, ಇವಂ ಗೋಮೂತ್ರ ದಲ್ಲಿ ಕಲಸಿ ಉದ್ವರ್ತನ... ... ...ಬಿಕ್ಕು ಹರ. ಹುತ... ... ಕೋಷ್ಟ, ವಿಳಂಗ, ......

ನಂದ್ಯಾವರ್ತಕ, ಅರಿಸಿನ, ಇವಂ ಅಂಬಿಲದಲ್ಲಿ ಅರೆದು ಉದ್ವರ್ತನ ಮಾಡಿ ಮಂಡಲ ಕೊಂಬುದು. ಉಪ್ಪು, ಹಿಪ್ಪಲಿ, ... ... ಗೊಟ್ಟೆ, ಕಕ್ಕೆಯ ಬೇರು ಬೇವಿನ ... ... ಅಂಬಿಲ ದಲ್ಲಿ ಅರೆದು ತೆಗುರನಿಕ್ಕೆ ಬಿಕ್ಕು ಮಾಂಬುದು.

ದುಷ್ಟ ... .... ಪಿಗೆ .... ...., ಚಿತ್ರಮೂಲನ ಬೇರು, ಗರಗು ... ... ... ಗರುಗದ ... ... ... ಕೂಡಿ ಕಕ್ಕೆಯ ಕುಡಿ, ಹಿಪ್ಪಲಿ, ನಾಲಗುಲ್ಲಿಗೆಡ್ಡೆ, ಇವಂ ಎಲವದ ಹೂವಿನ ರಸದಲ್ಲಾಗಲೀ ಬೇಳೆಯ ಹಸುರ ರಸದಲ್ಲಾಗಲೀ ಅರೆದು ೧ ದು ಮಂಡಲ ಕೊಂಬುಂದು,

ಆನೆಗಚ್ಚಿಗೆ :—ಮುತ್ತಗದ ಬೀಜವನ್ನು ಇಪ್ಪೆಯಹಣ್ಣಿನ ರಸದಲ್ಲಿ ಅರೆದು ಪೂಸಲು ಆನೆಗಚ್ಚು ಮಾಂಬುದು.

ಕೃತ್ರಿಮಕ್ಕೆ :—ಕರಿಯ ಲೊಕ್ಕಿಯ ರಸದೊಳು ಲಾಂಗವಾರು, ಭೂದಾಳಿ ... .... ಮುತ್ತಗ ಕಾಯ ಒಳಗೆ ಹಾಕಿ ಮುಚ್ಚಿ ತಿಂಗಳಿಗೆ ಹೊಯ್ದು ತೆಗೆದು ಕೊಳವಿಯೊಳಗೆ ನಾಯ ವಿಷ್ಟೆ, ವಾಳಗಳಮರದ ಬಿತ್ತ ಚೂರ್ಣವ ಮಾಡಿ ಆ ಲಾಂಗಕ್ಕೆ ಅದರ ... ... ... ಬಿಳಿ ವಂಗ, ಕಿರುನೆಲ್ಲಿಯ ಬೇರನ್ನು ಶುಭದಿನವಾದ ಗ್ರಹಣದ ದಿನ ತಂದು ರಕ್ಷೆಯಂ ಕಟ್ಟುಗೆ. ಉಳಿದ ಠಾವಿಗೆ ಒತ್ತಿ ಇಡೆ ಇಳಿಯುವುದು. ಇವು ... ... ... ಮಾಂಬುದು.

ಕೆಮ್ಮಿಗೆ :— ... ... ...ಂ ಮಾಡಿ ಶಿಶುವಿಗೆ ತೈಲಮಂ ತೊಡೆದು ಆ ಕರಿಯಂ ೫ ದು ನಿಂಬದಿ ಕೊಡಲು ಮಾಂಬುದು.

ಕೆಮ್ಮಲಿಗೆ :—ಕಗ್ಗಿಯ ಸೊಪ್ಪನ್ನು ಮುರುದಾಳಿ, ನೋಲು .... .... .... ಗಯಿಂ ಮುರುಕೊಳ್ಳಲು ಕೆಮ್ಮಲು ಪರ.

ಕಿರುನಾಲಿಗೆಗೆ :—ಹುಣಸೆಯ ತೊಪ್ಪೆಯ ಬೂದಿ, ಸುಣ್ಣ, ಇವಂ ಕಲಸಿ ಅವುಡಲದ ಗುಟಿಗೆ ತೊಡೆದು ಕಿರುನಾಲಿಗೆಗೆ ಒರೆಸಲು ಕಿರುನಾಲಿಗೆ ಮೇಲಕ್ಕೆ ಹೋಗುವುದು. ಗೇರ ಎಣ್ಣೆಯ ಮಾದರಿ ಮಾಡಿ ಇಕ್ಕುವುದು. ತ್ರಿಕಟುಕ, ತ್ರಿಫಲೆ, ಏಲಕ್ಕಿ, ಲವಂಗದ ಸೆಕ್ಕೆ, ಆ ಪತ್ರೆ ಇವು ಪ್ರತ್ಯೇಕ ಸಮ ಗ ತೂಕ, ಸಮ ಸಕ್ಕರೆ, ಜೇನುತುಪ್ಪದಲ್ಲಿ ಕೊಂಬುದು.

ಮೂತ್ರರೋಗಕ್ಕೆ :—ಅವರೆಯಮೊಗ್ಗೆ, ಆ ತೋಯ, ಹಾಲು, ಸಕ್ಕರೆ, ಸಹ ಕೊಳ್ಳಲು ಮೂತ್ರಸಿಕ್ಕು ಮಾಣ್ಗುಂ. ಶುಂಠಿ, ಹಿಪ್ಪಲಿ, .... .... ನಬೇರು, .... .... ಕಡಸದ ತೊಪ್ಪೆ, ಹೊಂಗೆಯ ಸೊಪ್ಪು, ಆಣಿಲೆ, ಇವಂ ಚೂರ್ಣವಂ ಮಾಡಿ ಸಕ್ಕರೆ ಮಿಶ್ರವಾಗಿ ಉದಯದಲ್ಲಿ ಕೊಂಬುದು. ... ... ... ಬಜೆ, ನೈದಿಲಗೆಡ್ಡೆ, ಯಷ್ಟಿಮಧುಕ, ಖರ್ಜೂರದ ಹಣ್ಣು, ಲವಂಗ, ಲಾಮಂಚ, ನೇರಳೆಯ ಸೊಪ್ಪು, ಭದ್ರಮುಸ್ತೆ, ಶ್ರೀಗಂಧ, ಏಲಕ್ಕಿ, ಲವಂಗದ ತೊಕ್ಕು, ಆ ಪತ್ರೆ, ನಾಗಕೇಸರ, ಹಿಪ್ಪಲಿ, ಕೊತ್ತಂಬರಿ, ಇವು ಸಮಾನಂಗೊಂಡು ಚೂರ್ಣಂ ಮಾಡಿ ಸಮ ಸಕ್ಕರೆ ಬೆಣ್ಣೆಯಲ್ಲಿ ಕೊಂಬುದು.

ಅಂಡಜಕಾಟಕ್ಕೆ :—ಹಿಡಿಹಿಡಿಕೆ ದುಗ್ಗ, ದುಗ್ಗಗಣಿಕೆ, ಜತಿಹೊಡೆಮೂಲಂ, ಚಿತ್ರ ಮೂಲ, ಬಜೆ, ಇಷ್ಟು ಪುಡಿ ಮಾಡಿ ಇಂಗು, ಸೈಂಧವ, ಏರಂಡತೈಲ, ಸಹ ಗಡಿಗೆಯೊಳಗೆ ... ... ... ಸಹ ಎರೆದು, ಬಿಸಿನೀರ ಕೊಳ್ಳೆ ಅಂಡಜದ ಕಾಟ ಮಾಣ್ಗುಂ.

ಮುಡುಬುಶೂಲೆಗೆ :—ಹೊಸತರುತುಂಬಿಯ ನಿಲಾಭಿಯ ಹಣ್ಣಿನ ರಸದಲ್ಲಿ ಅರೆದು ಕಟ್ಟುವುದು. ಆ ... ಯ ನಿಕ್ಕುವುದು. ಮಡದ ಕೆಳಗೆ ನೆತ್ತಣಿಜಗಂಗಳೆಯು ವೀಸುವುದು. ಇಟ್ಟಿಗೆಯ ಕಾಸಿ ತಾಳೆಯ ಕೊನೆಯ ತನಕ ಎಲೆಗೆ ತೊಡೆಯೆ ... ... ... ಮುಡುಬು ಶೂಲೆ ಹರ.

ಅಡ್ಡಗೈಗೆ :—ಹಾಗಲಬೇರಂ ನೊಸರಲ್ಲಿ ಅರೆದು ಅವುಡಲದ ಎಣ್ಣೆಯಲ್ಲಿ ಕಲಸಿ ತೊಡೆಯುವದು. ಬಿಸಿನೀರ ಕೊಂಬುದು. ಅವುಡಲದ ಬೇರಂ ತಂದು ಬಿಸಿನೀರಲ್ಲಿ ಕದಡಿ ಅವುಡಲದ ಎಣ್ಣೆಯೊಳಗೆ ಕೊಂಬುದು. ಅಡ್ಡಗೈ ಹರ. ಹುರುಳಿಯ ಕಟ್ಟು, ಓಗರ ಪಥ್ಯ.

ಸರ್ವಪಿತ್ತಕೆಮ್ಮಲಿಗೆ :—ತವಸ, ತ್ರಿಕಟುಕ, ... ... ಚಿತ್ರಮೂಲ, ... ... ಓಮ, ಸೈಂಧವ, ಇಂಗು, ಮಜ್ಜಿಗೆಯಿಕ್ಕಿ ಕಾಸಿ ಕೊಂಬುದು. ಅರಿಸಿನ, ಬೇವು, ಹಿಪ್ಪಲಿ, ಮೆಣಸು, ಬಜೆ, ವಿಳಂಗ, ಭದ್ರಮುಸ್ತೆ, ಚಿತ್ರಮೂಲ, ಸೈಂಧವ, ಕೋಷ್ಠ, ಅತಿಬಜೆ, ಅಗುಳುಶುಂಠಿ, ಅಣಲೇಕಾಯಿ, ಇವಂ ಪ್ರತ್ಯೇಕ ಸಮವಾಗಿ ಆಮಜದೂಲಿನ ಬೇರು, ಗಣಜಿಲೆಯ ಬೇರು, ಇವು ಪ್ರತ್ಯೇಕ ೧ ಹಲ, ಇವಂ ಇಡಿದು ಕಾದ ಕಬ್ಬಿಣಕೊಪ್ಪರಿಗೆಯಲ್ಲಿ ಕಾಸಿ ಆ ಕಷಾಯ ಎಲ್ಲ ಬಾಗಿ ಹಳೇಬೆಲ್ಲ ೧೦೦, ಬೆಲ್ಲ ಸಮ, ದ್ರಾಕ್ಷೆಯ ಹಣ್ಣು,...ಲೋಹಭಸ್ಮ ಮೂರು ಹಲ, ಶುಂಠಿ ... ಹಲ, ಹಿಪ್ಪಲಿ ೨೦ ಹಲ, ಓಮ ೨೦ ಹಲ, ವಿಳಂಗ, ಹಿಪ್ಪೆಯ ಹೂವು ... ... ಕೊಡಸಿಗನ ಬೀಜ, ಅತಿಬಜೆ, ಗಣಿಗಲೆಯ ಬೇರು, ಏಲಕ್ಕಿ, ಲವಂಗಸಕ್ಕೆ, ಜಾಯಿಪತ್ರೆ, ಇವು ಪ್ರತ್ಯೇಕ ೫ ಹಲ, ಇವಂ ಚೂರ್ಣವಂ ಮಾಡಿ ಹಾಕಿ ಜೇನುತುಪ್ಪ ೨ ಪ್ರಸ್ಥಂ........ ಲೇಹ್ಯಪಾಕದಲ್ಲಿ ... ... .. ಬಿಂದಿಗೆಯ ತುಂಬಿ ಧಾನ್ಯರಾಸಿಯಲ್ಲಿ ೩ ತಿಂಗಳು ಇರಿಸಿ ದೇಹ ಶುದ್ಧಿಯ ಮಾಡಿ ೩ ತೂಕ ಲೇಹ್ಯವ ಕೊಂಬುದು. ಹತ್ತಿ ಹರಳ ರಸ ಒತ್ತರಿಸಿ ೮ ಕೊಳಗ ನೀರನ್ನು ಅಷ್ಟಾವಶೇಷವಾಗಿ ಕಷಾಯವ ಕಾಸಿ ಶೋಧಿಸಿ ಆ ಕಷಾಯದಲ್ಲಿ ೫೦೦ ಗೇರಹರಳ ಕತ್ತರಿಸಿ ಹಾಕಿ ಜೀರಿಗೆ, ಭದ್ರಮುಸ್ತೆ, ......... ಏಲಕ್ಕಿ, ನಾಗಕೇಸರ, ಲವಂಗ ತೊಪ್ಪೆ, ಆ ಪತ್ರೆ, ತ್ರಿಕಟುಕ, ಜಟಾಮಾಂಸಿ, ಇವು ಪ್ರತ್ಯೇಕ ೧ ಹಲವ ಚೂರ್ಣಂ ಮಾಡಿ ಹಾಕಿ ಕಾಸಿ ಇಳುಹಿ ದೇಹಶುದ್ಧಿಯ ಮಾಡಿಕೊಂಡು ... ... ... ಕೊಂಬುದು. ಇದು ಬಜೆಲೇಹ್ಯ. ಎಲಕ್ಕಿ, ಇಪ್ಪೆಹೂ ೧೨, ಜೀರಿಗೆ, ದ್ರಾಕ್ಷೆಯ ಹಣ್ಣು, ಅಮರದ ವಳ್ಳಿ, ........ ಸುಗಂಧಿ, ಬೆಲ್ಲವ .... .... ಅಗುಳುಶುಂಠಿ, ಲಿ ... ... ಬೇರು, ನೆಲದಾಳ, ಯಷ್ಟಿಮಧುಕ, ಹಿರಿಯಮದ್ದು, ಭದ್ರಮುಸ್ತೆ, ನೆಲ್ಲಿಯಚಟ್ಟು, ಅಣಲೇಕಾಯಿ, ಬೇವಿನ ಹಗಿನು, ಕೊತ್ತಂ ಬರಿಯ ಬೀಜ, ತಾವರೆಯ ಗೆಡ್ಡೆ, ಬೇವಿನ ತೊಪ್ಪೆ ......... ತವಕ್ಷೀರ, ಕೋಷ್ಟ, ಮುಡಿ ವಾಳ, ಬಿಟ್ಟಮುಡಿವಾಳ, ಶ್ರೀಗಂಧ, ರಕ್ತಚಂದನ, ಕಸ್ತೂರಿ, ಕುಂಕುಮ, ತಕ್ಕೋಲ, ಕಿರು ನೆಲ್ಲಿ, ಖಚೋರ, ಜಟಾಮಾಂಸಿ, ಲವಂಗಸಕ್ಕೆ, ಆಪತ್ರೆ, ..............ರ, ಜಾಯಿಪತ್ರೆ, ನೆಗ್ಗಿಲ ಹಗಿನು, ಕುಂಪಿಯ ಬೀಜ, ಎಲವದ ಹಗಿನು, ಕಳಕ, ನಾಗಕೇಸರ, ಇವು ಪ್ರತ್ಯೇಕ ಸಮ ಸಕ್ಕರೆ, ಜೇನುತುಪ್ಪದಲ್ಲಿ ಕಲಸಿ ಕೊಂಬುದು. ಬೆಣ್ಣೆಯಲ್ಲಿ ಕೇಸರ, ನಾಳ ಕೊಂಬುದು. ಒಳ್ಳೆನೀರು, ಕ್ಷೀರ, ಅನುಪಾನ. ಏಲಕ್ಕಿ, ಲವಂಗದ ತೊಪ್ಪೆ, ಆಪತ್ರೆ, ನಾಗ .... .... .... ... .... ಗೆಡ್ಡೆ, ಅರಗು, ಪ್ರಿಯಂಗು, ಭದ್ರಮುಸ್ತೆ, ಸುಗಂಧ, ಕರ್ಪೂರ,

ಇವಂ ಚೂರ್ಣವ ಮಾಡಿ ಬೆಣ್ಣೆ ಸಕ್ಕರೆಯಲ್ಲಿ ಕೊಂಬುದು. ಎಳನೀರು, ಅನುಪಾನ. ಸರ್ವ ಪಿತ್ತಕಿಮ್ಮಲಿಗೆ ಲೇಸು.

ಆಮಾದಿಶೂಲಿಗೆ :—ಕೊಡಸಿಗೆತೊಪ್ಪೆ ೩೦ ಹಲ, ... ... ... ಕಾಸಿ ... ... ಬಾಗಿ ಶೋಧಿಸಿ, ಆ ಕಷಾಯ ಪ್ರಸ್ತಕ್ಕೆ ಶೋಧಿಸಿ, ಹಿಪ್ಪಲಿ, ಮೆಣಸು, ಲೋಧ್ರ, ದಾಳಿಂಬದ ಹೀಚು, ಬೆಲ್ಲವತ್ತದ ಕಾಯಿ, ಎಲವದ ಹಗಿನು, ಭದ್ರಮುಸ್ತೆ, ಧಾತಕೀಕುಸುಮ, ... ... .... ಕೊಡಸಿಗೆಯ ತೊಪ್ಪೆ, ಪ್ರತ್ಯೇಕ ೮ ತೂಕ, ಬೆಲ್ಲ ಪಾಕವ ಮಾಡಿ ಪಾಕ ಲೇಹ್ಯವಾಗಲಟ್ಟು ಧಾನ್ಯರಾಸಿಯ ಲ್ಲಿ ೧ ತಿಂಗಳಿರಿಸಿ ತೆಗೆದು ... ...ಲು ಕೊಂಬುದು. ಆಮಾತಿಸಾರ, ...... ಶೂಲೆ, ಗ್ರಹಣಿ, ಅತಿಸಾರ ಮೂಲರೋಗ, ಕಾನೂಲೆ, ತಿಮಿರ ಹರ. ದುತ್ತೂರದ ಕಾಯ ಕೊರೆದು ಜಯಪಲದ ಕಾಯ ಹೋಳು ... ... ... ಜಜ್ಜಿ ಮುಚ್ಚಿ, ಉಮ್ಮತ್ತದ ಕಾಯ ಬೆಂದ ಹದದಲ್ಲಿ ತೆಗೆದು ನೊಸರಲ್ಲಿ ಕೊಡುವುದು. ಆಮಾದಿಶೂಲೆ ಹರ.

ರಕ್ತಾತಿಸಾರಕ್ಕೆ :—ಹತ್ತಿಹರಳ ನೆನೆಯಿಕ್ಕಿ ತುಳಿದು ಎಸರು, ಏಲಕ್ಕಿ, ಸಕ್ಕರೆ ಸಹ ಕೊಳ್ಳಲು, ರಕ್ತಾತಿಸಾರ ನಾಣ್ಗಂ.

ಸಂಗ್ರಾಣಿಗೆ :—ನವಸಾರ ತಿಂಬುದು, ಹತ್ತಿಹರಳ ನೆನೆಯಿಕ್ಕಿ ತುಳಿದು ಎಸರ ಹಿಂಡಿಕೊಂಡು ಎಸರು ೧ ಸೆರೆ, ತುಪ್ಪ ಅಲ್ಪವಾಗಿ ಅಡುಕೊಂಬಾಗ ನಿಂಬೆಯ ಹುಳಿಯ ಹಿಂಡಿಕೊಂಬುದು. ಏಲಕ್ಕಿ ... .... .... ಸಂಗ್ರಾಣಿ ನಿಲ್ಲುವುದು.

ಉಷ್ಣ ಬೊಕ್ಕೆಗೆ :—ಬೇವಿನಬೀಜ ೧ ಹಲ, ಬಾಗುಂಜಿಯಬೀಜ ೧ ಹಲ, ಕರೀಎಳ್ಳು ೧ ಹಲ, ಇವಂ ಆಕಳ ಹಸಿಯ ಹಾಲಲ್ಲಿ ಕೊಂಬುದು. ಹಾಲೋಗರ ಪಥ್ಯ. ಉಷ್ಣದಿಂದಾದ ಬೊಕ್ಕೆ ಒಡೆಯುವುದು. ಅದು ತಪ್ಪದು. ಸೀಸ ೨ ಹಲ, ನೀಲಾಂಜನ ೧ ಹಲ, ತುತ್ಥ ೧ ಹಲ, ಶುದ್ಧರಸ ೧ ಹಲ, ಇವಂ ಶುಷ್ಕ ಮರ್ದನೆಯಂ ಮಾಡಿ, ಮೂಷೆಯಲ್ಲಿಕ್ಕೆ, ಅರಿದಾಳ ... ... ... ಚಿಟ್ಟ ಆವುಡಲ, ಅದು ಭಸ್ಮವಹುದು. ಈ ಭಸ್ಮ ೮೨ ತೂಕವನು ಮುನ್ನಿನ ಅವುಷಧಿಯ ಸಂಗಡ ತೆಗೆದುಕೊಂಬುದು. ಹಾಲೋಗರ ಪಥ್ಯ.

ವಾತನೋವಿಗೆ :—ನೆಲ್ಲಿಕಾಯ ಮಡುವಾಗಲದಲ್ಲಿ ತಂದು ಅಡಕೆಯರ ತೊಡೆದು, ಅಶ್ವ ಗಂಧಿಯ ಬೇರು. ನೆಲಾವರೆಯ ಬೇರು, ನಿಂಬಬೇರು, ಬೋಳತೊಪ್ಪೆಯ ಬೇರು, ಮೆಣಸು, ... ... ... ... ಯ ಬೇರು, ಗುರುಗುಂಜಿಯ ಬೇರು, ಕಿರುಗಡಸಿಗೆಯ ಬೇರು, ಇಪ್ಪೆಯ ... ... ... ... ಬೀಜ, ಸಮುದ್ರಪಾಳದ ಬೀಜ, ಕತ್ತರಿಯ ಬೇರು, ನುಗ್ಗೆಯ ಬೇರು, ಕಲ್ಲುಕರನ ಬೇರು, ಚಿತ್ರಮೂಲನ ಬೇರು, ತಾವರೆ ...... ತಪಸದ ನಾರು, ಇಪ್ಪೆಯ ಬೀಜ, ಹೋರಿಉಪ್ಪಿನ ಬೇರು, ಈ ೨೦ ನ್ನೂ ಎಕ್ಕೆಯ ಹಾಲಲ್ಲಿ ಅರೆದು ಸಂದುಸಂದಿಗೆ ಅಡ್ಡ ಗಂಟು ವಾತಕ್ಕೆ ಪೂಸೆ ಮಾಂಬುದು. ಇಪ್ಪೆಯ ಬೇರ ಕೂಡಿ ಕೊಂಬುದು. ಆ ಬೇರಂ ತಂದು ನೆತ್ತಿಗೊತ್ತೆ ತಲೆಶೂಲೆ ಹರ.

ಬಿಳಿಯಕೋರಕ್ಕೆ :—ಅಂಬಲಿ, ... ... ಪ್ಪಕ್ಕೆ ... ... ಮುತ್ತಗದ ಬೇರು, ಕರಿಯ ಉಮ್ಮತ್ತದ ಬೇರು, ಹಿಡಿಹಿಡಿಕೆಯ ಬೇರು, ಮಂಗರುವಳ್ಳಿಯ ಬೇರು, ಎಕ್ಕೆಯ ಬೇರು,

ಲಕ್ಕಿಯ ಬೇರು, ಈ ಎಲ್ಲವ ಜೇನುತುಪ್ಪದಲ್ಲಿ ಪೂಸುವುದು. ಈ ಬಗೆಯ ಅಂಬಿಲದಲ್ಲಿ ಕೊಡಲು ಮೈಗೆ ಎಸೆಯವುದು. ಮೈಗೆ ಒತ್ತುವುದು. ಬಿಳಿಯ ಕೋರ ಹರ.

ಕಪ್ಪುಕೋರಕ್ಕೆ :—ಗೇರಗುಂಟೆ, ಎಳ್ಳು, ಅಣಿಲೆಯ ಕಾಯಿ, ಬೆಲ್ಲ, ಚಿತ್ರಮೂಲ ... ... ಸಿ, ಸಾಸುವೆ, ಇವಂ ಸಮಾನವಾಗರೆದು ಪೂಸೆ ಕಪ್ಪುಕೋರ ಹರ. ತಗಚೆಯ ಬೀಜ, ಎಳ್ಳು, ಅರಿಸಿನ ... ... ... ... ಂಜಿ, ಇವಂ ಗೋಮೂತ್ರದಲ್ಲಿ ನೆನೆಯಿಕ್ಕಿ ಅರೆದು ಎತ್ತಿ ಪೂಸುವುದು. ಕಪ್ಪು ಕೋರ ಮಾಣ್ಗುಂ.

ಹುಣ್ಣುಗಳಿಗೆ :—ಪಿಟಲುಪ್ಪು......ಚರ್ಮಂಗಳು, ಚಿತ್ರಮೂಲ, ಅಲ್ಪನವರು, ವಜ್ರ ಕ್ಷಾರದಲ್ಲಿ ತೀದು ಮೇಲಿಗೆ ಪೂಸಿ ... ... ... ಸೇನ, ಎರಗರುಕಾಯಂ ಇವಂ ಗೋಮೂತ್ರ ದಲ್ಲಿ ಅರೆದು ಪೂಸಲು, ಕುರಿ, ವಿಷಮ ... ... ... ... ತುಪ್ಪದಲ್ಲಿ ಮೊದಲುದಿನ ಗುಳಿಗೆ ಕ್ರಮ ವೃದ್ಧಿಯಾಗಿ ೧೭ ದಿನ ಕೊಳ್ಳುವುದು ... ... ... ... ಕ್ಷೀರದಲ್ಲಿ ತೀದು ಇಕ್ಕಲು, ಗಂಡಮಾಲೆ ಮಾಣುವುದು.

ಗಂಟಿಗೆ:—ಜಿಟ್ಟಮುಡಿನಾಳದ ಕಷಾಯವನ್ನು ಕಾಸಿ ... ... .... ಮೋನದಲ್ಲರೆದು ಪುಟವಿಕ್ಕಿ ಆ ಭಸ್ಮವ ಎಕ್ಕೆ ಹಾಲು, ತಾಳಿಯ ಹಾಲಲ್ಲಿ ಕಲಸಿ ಪೂಸಲಾ ಗಂಟು ಕರಗುವುದು.

ಗೆಂಡಮಾಲೆಗೆ :—ಮಡುವಾಗಲದ ಗೆಡ್ಡೆ, ಶುಂಠಿ, ಕೋಷ್ಠ, ಯಷ್ಟಿಮಧುಕ, ಎರ ಡರಿಸಿನ, ಗಣಜಿಲೆಯ ಬೇರು, ತ್ರಿಕಟುಕ, ಇಂಗು, ಉಚ್ಚೆಯಲಟ್ಟು, ನಸ್ಯಂಗೈಯ್ಯೆ ಗಂಡಾಮಲೆ ಹರ. ಆದಿತ್ಯವಾರ ೩ ಕಾಯ ಕೊಂಬುದು. ಮರುದಿನ ಆರು ಕಾಯ ಕೊಂಬು ವುದು. ೩ ನೆಯ ದಿನ ೯ ಕಾಯ ಕೊಳ್ಳಲು ಗಂಡಾಮಲೆ ಹರ.

ರಕ್ತಕೃಛ್ರಕ್ಕೆ :—ಮಡುವಾಗಲ ಗೆಡ್ಡೆ ಇದಂ ಅರೆದು ನೊಸರುನೀರಲ್ಲಿ ಕದಡಿ ಸಕ್ಕರೆ ಸಹ ಕೊಳ್ಳಲು, ರಕ್ತಕೃಛ್ರ ಹರ. ಗುಂಜಿಯಬೇರು ... ... ... ... ... ಹರಳವೆರಳು, ದ್ರಾಕ್ಷೆಯ ಹಣ್ಣು, ಪಾಷಾಣಭೇದಿ, ನೆಗ್ಗಿಲಬೇರು, ಅಮರದವಳ್ಳಿ, ಯ... ... ... ...ಗ ಸಿಂಧೂರ, ಸಹ ಲೇಹ್ಯ. ಹೂರದಬೇರ ತೊಪ್ಪೆಯ ಚೂರ್ಣವಂ ಮಾಡಿ ಆ ಚೂರ್ಣ ಅಮ ರದ ವಳ್ಳಿಯ ........ ... ಹಾಗತೂಕ, ಬೇವಿನಹಗಿನು ೨ ತೂಕ, ಇವಂ ಸೌತೆಯ ರಸ ದಲ್ಲಿ ಕೊಳ್ಳಲು ಅಶ್ಮರಿಯ ಮೂತ್ರಕೃಛ್ರ ಹರ.

## D 1395

ಜ್ವರಕ್ಕೆ :— ... ... ... ನೆಳಲಲ್ಲಾರಿಸಿ ಹಾಲು ಬೆಲ್ಲದಲ್ಲನುಪಾನದಿಂದ ಕೊಡಲು ಒಂದುಬಗೆಯ ಜ್ವರ ಹರ. ಬಿಸಿನೀರಿಂ ಸರ್ವಾಂಗಜ್ವರ ಹರ.

ದೀಪನಕ್ಕೆ :—ರಸ, ನಾಭಿ, ತೀಬು, ಗಂಧಕ, ಇವಂ ಪ್ರತ್ಯೇಕ ೧ ತೂಕ, ಮೆಣಸು ೨ ತೂಕ, ಖರ್ಜೂರಕಾಯಿ ೧ ತೂಕ, ಈ ಕ್ರಮದಿಂ ಕೂಡಿಕೊಂಡು ಹುಣಸೇಕಾಯ ರಸದಲ್ಲಿ ೧ ಜಾವ ಮರ್ದಿಸಿ ಉದ್ದಿನ ಪ್ರಮಾಣ ಗುಳಿಗೆಯಂ ಮಾಡಿ ಒಣಗಿಸಿ ತಾರೆ ಗ ಕಾಸಿ ರಸದಲ್ಲಿ ಕೊಳ್ಳಲು ಜಠರಾಗ್ನಿಯಕ್ಕುಂ.

ಸನ್ನಿಪಾತಕ್ಕೆ :—ನಾಭಿ ಗ ೧, ನಾಗಭಸ್ಮ ಗ ೧, ರಸ ೨, ಇವಂ ಅರ್ಕಕ್ಷೀರದಲ್ಲಿ ಚೆನ್ನಾಗಿ ಮರ್ದಿಸಿ ಗುಟಿಕೆಯಂ ಮಾಡಿ ನವಸಾರ, ಬಿಳುಗಾರ, ಇಲಿಪಾಷಾಣ, ಇವಂ ಪ್ರತ್ಯೇಕ ಗ ೧ ಕೂಡಿ ಚೂರ್ಣಮಾಡಿ ಒಂದು ಕೋನೆಯಲ್ಲಿ ಆ ಗುಟಿಕೆಯ ಅಧರೋತ್ತರ ವಿಕ್ಕಿ ಮುಚ್ಚಿ ಸಿರುಮಣ್ಣುಗೊಂಡು ಲಘುಪುಟವಿಕ್ಕಿ ಅವ ತೆಗೆದು ಚೂರ್ಣವಂ ಮಾಡಿರಿಸಿ ಸನ್ನಿಯಿಂದ ಮೈಮರೆತಿದ್ದವರಿಗೆ ಆಪಾದಮಸ್ತಕದಲ್ಲಿ ಶಸ್ತ್ರವ ಹಾಯ್ದು ರಕ್ತ ಒಂದ ತಾವಿಗೆ ಉಂಗುಷ್ಠನೆತ್ತಿಗೆ ಸಾಸುವೆಯಷ್ಟು ಔಷಧವಂ ತೆಗೆದುಕೊಂಡು ಕಾರಗೆಣಸಿನ ರಸವಾಗಲೀ, ಉಳ್ಳಿ ರಸವಾಗಲೀ ತೇದು ಇಕ್ಕುವುದು. ಒಡಲಿಗೆ ಶೈತ್ಯ ಉಪಚಾರ ಮಾಡುವುದು. [1]

ಬಾಯಿನಾರುವುದಕ್ಕೆ :—ದಾಳಿಂಬದ ಬೇರನ್ನು ಅರೆದು ಮುಕ್ಕಳಿಸಿದರೆ ಬಾಯಿ ನಾರುವುದು ಮಾಣ್ಗುಂ.

ಮೈ ನಾರುವುದಕ್ಕೆ :—ದಾಳಿಂಬದ ಬೇರು, ಶಂಖದ ಚೂರ್ಣಂ, ಹುಣಸೆ, ಹೇರುಳಿ, ... .... ... ಬೀಜವಂ ಸರಿಗೊಂಡು ನಿಂಬೇಹುಳಿಯಲ್ಲಿ ಮೇಲಿಗೆ ಪೂಸೆ ಮೈ ನಾರುವುದು ಮಾಣ್ಗುಂ.

ಗೆಡ್ಡೆಗೆ :—ನುಂಗುರ ... ... ಬಳ್ಳಿ, ರಕ್ಕಸಿಗೆಡ್ಡೆ, ಸೂರದಣಗೆಡ್ಡೆ, ಚಿತ್ರಮೂಲ, ಅಗುಳುಶುಂಠಿ, ಎರಡು ಬಗೆ ಗಣಜಿಲೆ, ಓಮ ೨ ಮಾನ, ಮೆಣಸು ೨ ಮಾನ, ಸಾಸುವೆ ೨ ಮಾನ, ಉ ... ... ಜೀರಿಗೆ ೨ ಮಾನ, ಶುಂಠಿ ೨ ಮಾನ, ಇವ ಸಮಾನಂಗೊಂಡು ಅರೆದು ಒಂದು ಬಳ್ಳ ಹಿಂಡಿಯ ಹಾಕಿ, ಒಂದು ಬಳ್ಳ ಎಣ್ಣೆಯನೆರೆದು ... ... ... ನವಂ ಹಾಕಿ ಕಲಸಿ ಔಷಧವ ನಿಂಬೆಯ ಕಾಯಷ್ಟು ಹಣ್ಣಿನ ರಸ ಮುಳುಗುವ ಹಾಗೆ ಹೊಯ್ದು ಹೊಸ ಮಡಕೆಯಲ್ಲಿ ಕಟ್ಟು ... ... ... ... ಯಲಿರಿಸಿ ತೆಗೆದು ನಿಂಬೇಕಾಯಷ್ಟು ... ... ... ಇಪ್ಪತ್ತನಾಲ್ಕು ದಿನ ಸೇವಿಸೆ ಹೊಟ್ಟೆಯಲ್ಲಿರುವ ಗೆಡ್ಡೆ, ಅಡ್ಡಗೈ, ಗರ, ವಾಯುಗುಲ್ಮಂ, ಇವು ಮಾಣುವುವು.

ಕೋವೆಗೆ :—ಬಿಳಿಯ ... ... ... ... ಬೇರು, ಹಾರೇಬೀಜ, ಗಿರಿಕರ್ಣಿಕೆಬೀಜ, ಅಂಕೋಲೆ ಬೇರಿನ ತಿಗಡು, ಇವಂ ಅರೆದು ಕಡಲೆ ... ... ... ಆಡಿನ ಹಾಲಲ್ಲಿ ಅರಿಸಿ ಕೊಡಲು ಕೋವೆ ಮಾಣ್ಗುಂ. ಬಲುಗಣಿಕೆ ತಿಗಡು, ಬೆಳ್ಳುಳ್ಳಿಯ ಬೇಳೆ, ಮೆಣಸು, ಇವಂ ಆಡಿನ ಹಾಲಿನಲ್ಲಿ ಕುಡಿಸೆ ಕೋವೆ ಮಾಣ್ಗುಂ. ಹೊನ್ನಾರಿಯ ಬೇರ ತಿಗಡು ವಜ್ರನೀಲಿಯ ಸೊಪ್ಪು, ಇವಂ ಚೂರ್ಣವಂ ಮಾಡಿ .ಎಣ್ಣೆಯಲ್ಲಿ ಮರಳುವ ಹಾಗೆ ಕಾಸಿ ತಳಿಗೆಯೊಳಗೆ ಇರಿಸಿ ಔಷಧವ ನಿಂಬೆಯಕಾಯಷ್ಟು ನೀರಲ್ಲರೆದು ಹಾಕಿ ಕೊಳ್ಳುವುದು. ಆ ಎಣ್ಣೆಯನ್ನು ಒಂದು ಒಂದು ಹನಿಯನ್ನೇ ಮೈಗಂ ಪೂಸುವುದು. ಇದು ದೃಷ್ಟ.

---

1 D-1397 ನಂಬರಿನ ತಾಳಪತ್ರ ಕೋಶದ ಅಂಶಗಳು 98 ನೇ ಪುಟದಲ್ಲಿವೆ. D-1398, D-1399 ಈ ನಂಬರಿನ ಕೋಶದ ವಿಷಯಗಳೂ D-1362, D-1364 ನಂಬರಿನ ಕೋಶದ ವಿಷಯಗಳೂ ತುಲ್ಯವಾಗಿವೆ.

ಕಣ್ಣುಹೂವಿಗೆ :—ಸುಟ್ಟೆಕರಿಯ ... ... ...ಳುವಂ ಹುರಿದು ಹುರಿಗಿಲ ಕೊನರ ರಸ ದಲ್ಲಿ ಅರೆದು ಆ ರಸದಲ್ಲಿ ತೇದು ಕಣ್ಣಿಗೆ ಹಚ್ಚಲು ಕಣ್ಣುಹೂವು ಮಾಣ್ಗುಂ.

ಶೀತಜ್ವರಕ್ಕೆ :—ಹಿಪ್ಪಲಿ ಗ ೩ ತೂಕ, ಇಂಗಲೀಕ ೨ ತೂಕ, ನಾಭಿ ಗ ೧ ತೂಕ, ಇವನ್ನು ನಿಂಬೇಹಣ್ಣಿನಲ್ಲಿ ಮರ್ದನೆಯಂ ಮಾಡಿ, ಗುಂಜಿಪ್ರಮಾಣ ಗುಳಿಗೆಯಂ ಮಾಡಿ, ಕಾದಾರಿದ ನೀರಲ್ಲಿ ಕೊಡುವುದು. ಶೀತಜ್ವರಂ ಮಾಣ್ಗುಂ.

ಜ್ವರಕ್ಕೆ :—ರಸ ೧ ತೂಕ, ಇಂಗಲೀಕ ೨ ತೂಕ, ಜೇಪಾಳ ಗ ೩ ತೂಕ, ಇದನ್ನು ದಂತೀಬೇರಿನ ಕಷಾಯದಲ್ಲಿ ಮರ್ದನೆಯ ಮಾಡಿ, ಗುಂಜಿಪ್ರಮಾಣ ಗುಳಿಗೆಯಂ ಮಾಡಿ, ಸಕ್ಕರೆಯಲ್ಲಿ ಕೊಡಲು ಎರಡು ಜಾವಕ್ಕೆ ಜ್ವರ ಬಿಡುವುದು.

ನವಜ್ವರಕ್ಕೆ :—ರಸ ೧, ನಾಭಿ ೧, ಗಂಧಕ ೧, ಮೆಣಸು ೧, ತಾಮ್ರದ ಭಸ್ಮ ೧, ಬಿಳು ಗಾರ ೧, ಇಷ್ಟನ್ನೂ ಮತ್ಸ್ಯಪಿತ್ತದಲ್ಲಾಗಲೀ ನಿಂಬೆಯ ಹಣ್ಣಿನ ರಸದಲ್ಲಿಯಾಗಲೀ ಮರ್ದಿಸಿ, ಹೆಸರ ಕಾಳಷ್ಟು ಗುಳಿಗೆಯಂ ಮಾಡಿ, ಅಲ್ಲದ ರಸದಲ್ಲಿ ಕೊಡುವುದು. ಪಥ್ಯ ಹಾಲೋಗರ.

ನೇತ್ರರೋಗಕ್ಕೆ :—ಶಂಖ, ಆನೆಯ ಓಡು, ಕಂಚು ... ... ಯ ಕೂಡಿ, ಮರ್ದಿಸಿ ಮೂರು ತೂಕ ಸೈಂಧವ, ನೀಲಾಂಜನ, ಹಿಪ್ಪಲಿ, ಶುಂಠಿ, ಮೆಣಸು, ತಾಮ್ರ, ಇವೆಲ್ಲವಂ ಎರಡುತೂಕದ ಲೆಖ್ಖದಲ್ಲೂ ಮೂರು ದಿನ ಮರ್ದನೆಯ ಮಾಡಿ ಕೆಂಪಿನ ಅಗಸೆಯ ರಸವನು ಕೂಡಿ ಕೊಂಬುದು. ಅಂಬಿಲದಲ್ಲಿ ಮೂರುದಿನ ಮರ್ದನೆ. ಕಾಳಾವಿನ ಮೂತ್ರದಲ್ಲಿ ಮೂರು ದಿನ ಮರ್ದನೆ. ಹೂವಿನ ರಸದಲ್ಲಿ ಮೂರು ದಿವಸ ಮರ್ದನೆ. ಈ ಪರಿಯಲ್ಲಿ ಚೆನ್ನಾಗಿ ಮರ್ದಿಸಿ ಗುಳಿಗೆಯಂ ಮಾಡಿ ಕಣ್ಣುಬೇನೆಗೆ, ನೀರು ಸುರಿವುದಕ್ಕೆ ಕಣ್ಣುಅರಿಗೆ, ಇಷ್ಟಕ್ಕೂ ಲೇಸು.

ಪಿತ್ತಜ್ವರಕ್ಕೆ :—ಹಿಪ್ಪಲಿ ಗ ೧೦ ತೂಕ, ರಸ ಗ ೧, ಇಲಿಪಾಷಾಣ ಗ ೧, ಕನಕದ ಸೊಪ್ಪಿನ ರಸವ ಖಲ್ವದಲ್ಲಿ ಹಾಕಿ ಅರೆದು ತುಗರಿತೋರ ಗುಳಿಗೆಯಂ ಮಾಡಿ, ಬೆಲ್ಲದಲ್ಲಿ ಒಂದು ಗುಳಿಗೆಯ ಕೊಡುವುದು. ಪಥ್ಯ ಹಾಲೋಗರ.

ಭೇದಿಗೆ :—ರಸ ೧, ನಾಭಿ ೧, ಗಂಧಕ ೧, ಬಿಳುಗಾರ ೧, ತಾಳಕ ೧, ಮಣಿಶಿಲೆ ೧, ಮೆಣಸು ೧, ಹಿಪ್ಪಲಿ ೧, ಶುಂಠಿ ೧, ಅಣಿಲೇಕಾಯಿ ೧, ನೆಲ್ಲಿಚಟ್ಟು ೧, ತಾರೇಕಾಯಿ ೧, ನೇಪಾಳ ೪, ಇಲಿಪಾಷಾಣ ಗ ೨, ಇದಂ ಹಿಪ್ಪಲಿ ಪ್ರಮಾಣ ಗುಳಿಗೆಯ ಮಾಡಿ, ಒಂದನ್ನು ಮೆಣಸಿನ ಚೂರ್ಣದಲ್ಲಿ ಕೊಡೆ ಭೇದಿಸುವುದು.

ವಾತಶ್ಲೇಷ್ಮಜ್ವರಗಳಿಗೆ :—ಚಾಳೀಸಪತ್ರೆ ಗ ೧ ತೂಕ, ಮೆಣಸು ಗ ೧ ತೂಕ, ಹಿಪ್ಪಲಿ ಗ ೨ ಹಲ, ಹಿಪ್ಪಲಿಮೂಲ ಗ ೧ ಹಲ, ಶುಂಠಿ ಮೂರು ವರಹ ತೂಕ, ಲವಂಗ ಪತ್ರೆ ೪ ತೂಕ, ಲವಂಗಸೆಕ್ಕೆ ೪ ತೂಕ, ನಾಗಕೇಸರ ೪ ತೂಕ, ಲಾಮಂಚ ೪ ತೂಕ, ಇವೆಲ್ಲ ವಂ ಕೂಡಿ ಚೂರ್ಣವ ಮಾಡಿ, ಮೂರುಪಾಲು ಬೆಲ್ಲವಂ ಕೂಡಿ ಪಾಕವಂ ಮಾಡಿ ಗುಳಿಗೆಯಂ ಕಟ್ಟಿ ಕೊಡೆ ವಾತಶ್ಲೇಷ್ಮಜ್ವರಂ ಮಾಣ್ಗುಂ. ಗ್ರಹಣಿ, ಪಾರ್ಶ್ವಶೂಲಿ ಮಾಣ್ಗುಂ.

ಪ್ರಮೇಹಕ್ಕೆ :—ಕಪೂರ್ರ, ಶಿಲಾಧಾತು, ಅಣಿಲೇಕಾಯಿ ಗ ೨ ತೂಕ, ತಾರೇಕಾಯಿ ಗ ೨ ತೂಕ, ನೆಲ್ಲಿಚಟ್ಟು ಗ ೨ ತೂಕ, ಆವರಿಕೆ ಬೀಜ ಗ ೨ ತೂಕ, ಇವಂ ಚೂರ್ಣವ ಮಾಡಿ ವಸ್ತ್ರಗಾಳಿತವ ಮಾಡಿ ಆಕಳ ಮಜ್ಜಿಗೆಯಲ್ಲಿ ಕೊಳ್ಳಲು ಪ್ರಮೇಹ ಮಾಣ್ಗುಂ.

... ... ... ಸುಣ್ಣನೀರಂ ಬಿಟ್ಟು ಹುಣಸೇಮರದ ತಿಗಡು, ಬಿಳಿಯ ದಾಸವಾಳದ ಪಟ್ಟೆ, ಕಲ್ಲನಾರು, ಸಕ್ಕರೆ, ಜೀರಿಗೆ, ಅರೆದು ಕುಡಿಯೆ ಪ್ರಮೇಹ ತೀರ್ಗುಂ. ಲವಣ ವರ್ಜಿತ. ತ್ರಿದೋಷ ಪಿರಿದಪ್ಪುದು, ಮೂತ್ರಕೆಚ್ಚನಪ್ಪುದು, ಪ್ರಮೇಹಮಪ್ಪುದು, ಕೈ ಕಾಲು, ಕಣ್ಣು ಉರಿಯಕ್ಕು ... ... ... ... ಇದು ವಾತಪ್ರಮೇಹವೆನಿಸಿಕೊಂಬುದು. ಶುಕ್ಲ ಬೇರೆಯಾವುದುಂ ಎಣ್ಣೆಯಂಥ ವರ್ಣ, ಸುಣ್ಣದ ನೀರಿನ ವರ್ಣ, ಇದು ಶ್ಲೇಷ್ಮಪ್ರಮೆಹ. ವಾತಪ್ರಮೇಹಕ್ಕೆ ವಿಳಂಗ, ಎರಡು ಅಣಿಲೆ, ಸಾಸುವೆ, ಶುಂಠಿ, ಮುತ್ತಿ, ಕಡಲೆ, ಬೆಟ್ಟಗರಿಕೆ, ಇವಂ ಕಷಾಯವಂ ಮಾಡಿ ಕೊಡುವುದು. ಇನ್ನು, ಶ್ಲೇಷ್ಮಪ್ರಮೇಹಕ್ಕೆ—ತಾವರೇಕಂದ, ಆಮರದ ವಳ್ಳಿ, ಅಣಿಲೆ, ಅಗುಳುಶುಂಠಿ, ಕಟುಕರೋಹಿಣಿ, ವಿಳಂಗ, ಮುತ್ತಿಯಬೇರು, ಇದರ ಕಷಾಯ ಲೇಸು. ಶ್ಲೇಷ್ಮಪ್ರಮೇಹಕ್ಕೆ—ಶ್ರೀಗಂಧ, ಅಗರು, ದೇವದಾರು, ಅಣಿಲೆ, ಕಚೋರ, ಇದರ ಕಷಾಯ ಲೇಸು.

## D 1399

ಶೀತಜ್ವರಕ್ಕೆ :—ರಸ, ಚಂದ್ರ ಗ ೪ ತೂಕ, ಬಿಳಿಯ ಇಲಿಪಾಷಾಣ ಗ ೮ ತೂಕ, ವತ್ಸನಾಭಿ ಗ ೧ ತೂಕ, ಇವಂ ಕೂಡಿ ನಿಂಬೆಯ ಹಣ್ಣಿನ ರಸ, ಹಸುವಿನ ಹಾಲು, ಎಳನೀರು, ಶ್ರೀಗಂಧದ ನೀರು, ಬಾಳೆಯ ಗೆಡ್ಡೆಯ ರಸ, ಜೀರಿಗೆ ರಸ, ಮುಡಿವಾಳದ ರಸ, ಕಿರುಕುಸಾಲೆಯ ರಸ, ಸೇವಂತಿಗೆ ಹೂವಿನ ರಸ, ಅತ್ತಿಪಾನ, ಆಸಾಡಿಯ ರಸ, ನೆಲದಾಳ ರಸ, ಹೊನ್ನಗನ್ನೆಯ ರಸ, ಈ ರಸಂಗಳಲ್ಲಿ ಪ್ರತ್ಯೇಕ ಒಂದೊಂದು ಜಾವ ಮರ್ದಿಸಿ ಆ ಕಲ್ಕವ ತಾಮ್ರದ ಪಾತ್ರೆಯಲ್ಲಿರಿಸಿ ಒಂದು ಮಡಕೆಯಲ್ಲಿ ಹಸುವಿನ ಹಾಲ ಇಂಗಿಸಿ ಪಾವಡೆಗಟ್ಟಿ ತಾಮ್ರಪಾತ್ರೆಯ ಸಿರಿಸಿ, ಮೇಲೊಂದು ಶ್ರಾವೆಯ ಮುಚ್ಚಿ ಒಂದು ವಿಘಳಿಗೆ ಪಾಕ ಮಾಡಿ, ಅದರ ಕೂಟಕ್ಕೆ ಪಚ್ಚೆಕಪೂರ್ರ ೧ ತೂಕ, ಕಸ್ತೂರಿ ೧ ತೂಕ, ಇವಂ ಕೂಡಿ ಚೂರ್ಣಂ ಮಾಡಿ ಜಂತದ ಭರಣಿಯಲ್ಲಿ ತುಂಬಿರಿಸಿಕೊಂಡು ೧ ತೂಕವನ್ನೂ, ಮೆಣಸಿನ ಚೂರ್ಣ, ಕೋಷ್ಠ, ಎಳನೀರಿಂ ಕೊಳ್ಳಲು ತಾಪಜ್ವರ, ಶೀತಜ್ವರ ಹರ. ಹಾಲು ಬೆಲ್ಲದಲ್ಲಿ ಕೊಳ್ಳಲು ಅಗ್ನಿಮಾಂದ್ಯ ಹರ. ಮಧುರಾಹಾರ ಪಥ್ಯ. ಬಾಣಂತಿಯರಿಗೆ ಕೊಡಬಹುದು.

ಬಿಳಿಯ ಇಲಿಯ ಪಾಷಾಣ, ಎಲೆಗಪ್ಪಲಿ, ಇವಂ ಸಮಾನಂಗೊಂಡು ಹಾಗಲದ ಸೊಪ್ಪಿನ ರಸದಿಂ ಮರ್ದಿಸಿ ಗುಂಜಾಪ್ರಮಾಣ ಗುಳಿಗೆಯಂ ಮಾಡಿ ಕಾರಗೆಣಸಿನ ರಸ, ಬೆಲ್ಲದಿಂ ಕೊಡೆ ಶೀತಜ್ವರ ಹರ.

ಕೆಂಪಿನ ಪಾಷಾಣವ ಕವಡೆ ತೋರಕ್ಕೆ ಕತ್ತರಿಸಿ ಬಿಸಿನೀರಲ್ಲಿ ೬ ಬಾರಿ ತೊಳೆದು ಅದನ್ನು ಪೊಟ್ಟಣವನ್ನು ಕಟ್ಟಿ ಸುಣ್ಣದ ಹರಳೊಳಗೆ ಇರಿಸಿ ನೀರ ಹೊಯ್ದರೆ ಬೆಂದು ಶುದ್ಧವಹುದು. ಅದನ್ನು ಬಿಸಿನೀರಲ್ಲಿ ೬ ಬಾರಿ ತೊಳೆದು, ಮತ್ತೆ ಹಾಗಲರಸದಲ್ಲಿ ಒಂದುಜಾವ

ಅರೆದು, ಹೆಸರತ್ತೋರ ಗುಳಿಗೆಯಂ ಮಾಡಿ, ಮೆಣಸಿನ ಚೂರ್ಣದಲ್ಲಿ, ಶುಂಠಿಯ ರಸದಲ್ಲಿ, ಜೀರಿಗೆಯಲ್ಲಾಗಲೀ ಕೊಡೆ ಛಳಿಜ್ವರ ಹರ.

ಆಮಾತಿಸಾರಕ್ಕೆ :—ತ್ರಿಕಟುಕ, ಅಳಲೇಕಾಯಿ, ಚಿತ್ರಮೂಲ, ಸೈಂಧವ, ಅಜಾಮೋದ, ಅತಿಬಜೆ, ಕೊಡಸಿಗೆಯ ಬೀಜ, ಗಜ್ಜುಗದ ತಿರುಳು, ಆಗುಳುಶುಂಠಿ, ಜಾಯಿಕಾಯಿ, ಜಾಯಿಪತ್ರೆ, ಕರಿಬೇವು, ಎಲಪದ ಹಗಿನು, ಲವಂಗ, ಜೀರಿಗೆ, ಇವೆಲ್ಲ ಬೆಚ್ಚನೆ ಮಾಡಿಕೊಂಡು ಆದರ ೯ ಭಾಗ ಭಂಗಿಯ ಹುಡಿ, ಇವೆಲ್ಲವನ್ನೂ ಕೂಡಿ ಬೆಲ್ಲದಲ್ಲಿ ಆಗಲೀ ಜೇನುತುಪ್ಪದಲ್ಲಿ ಆಗಲೀ ಅಡಕೆಯ ಪ್ರಮಾಣಮಂ ಕೊಳ್ಳಲು ಆಮಾತಿಸಾರ ಹರ, ರಕ್ತಹರ, ಸಿದ್ಧಾಂತ ತಪ್ಪದು.

ಮೂತ್ರಕೃಛ್ರಕ್ಕೆ :—ದಾಳಿಂಬದ ಹೀಚು, ಏಲಕ್ಕಿ, ಪಾಷಾಣಭೇದಿ, ಶಿಲಾಧಾತು, ಹಿಪ್ಪಲಿ, ಇವಂ ಚೂರ್ಣಂ ಮಾಡಿ ರಜಾನ್ನದ ಅಕ್ಕಿಗಚ್ಚಿನಲ್ಲಿ ಕುಡಿಯೆ ಮೂತ್ರಕೃಛ್ರಂ, ಮೂತ್ರಶರ್ಕರೆಯುಂ ಕೆಡುಗುಂ. ಅಥವಾ ಬೆಲ್ಲದಲ್ಲಿ ಲೇಹ್ಯಂ ಮಾಡುವುದು. ಕುಂಬಳದ ಬೀಜದ ತಿರುಳು ತೂಕ, ಪಾಷಾಣಭೇದಿ ಸಮೂಲ ಗ ೯ ತೂಕ, ಹಿಟ್ಟಿಳಿಕನ ಸಮೂಲ ಗ ೩ ತೂಕ, ನೆಗ್ಗಿಲಬೇರು ಗ ೩ ತೂಕ, ಇವಂ ಕಾಳಾಡಿನ ಹಾಲಲ್ಲಿ ಸಕ್ಕರೆ ಬೆರಸಿ ಕುಡಿಯೆ ಮೂರುದಿನಕ್ಕೆ ಪ್ರಮೇಹದ ಕಲ್ಲು ಕೊಡೆದು ಬೀಳ್ಗುಂ. ಮೊಲ್ಲೆಯಬೇರಂ ಆಡಿನ ಹಾಲಲ್ಲಿ ಅರೆದು ಕುಡಿಯೆ ಪ್ರಮೇಹ ಮಾಣ್ಗುಂ.

ಬಲವರ್ಧನಕ್ಕೆ :—ನೆಗ್ಗಿಲಬೇರು, ನೆಲ್ಲಿಯ ಚಟ್ಟು, ಅಮೃದ ಬಳ್ಳಿ, ಇವಂ ಚೂರ್ಣಂ ಮಾಡಿ ತುಪ್ಪ, ಜೇನುತುಪ್ಪವಂ ಸಮಾನಂಗೊಂಡು ಲೇಹ್ಯಂ ಮಾಡುಗೆ, ಬಲವರ್ಧನ.

ಇರುಳುಗಣ್ಣಿಗೆ :—ಮುತ್ತುಗದ ಹೂವಿನ ರಸದಲ್ಲಿ ಸೈಂಧವನೆಚ್ಚೆ, ಇರುಳು ಗಣ್ಣು ಮಾಣ್ಗುಂ.

ಕಿವಿಕೀವಿಗೆ :—ಕಡಲುನಾಲಿಗೆಯ ಚೂರ್ಣಂ ಮಾಡಿ ಕಿವಿಯಲ್ಲಿ ಇಕ್ಕಿ ನಿಂಬೆಯ ಹಣ್ಣಿನ ರಸಮಂ ಬಿಡಲು ಕಿವಿಯಲ್ಲಿ ಕೀವು ಸುರಿವುದು ಮಾಣ್ಗುಂ. ಸಬ್ಬಸಿಗೆ, ಸೈಂಧವ, ಶುಂಠಿ, ಬಜೆ, ಓಮಂ, ಇವಂ ಸಮಾನಂಗೊಂಡು, ಬೆಣ್ಣೆಯಲಟ್ಟು ಕಿವಿಯಲೆರೆಯೆ ಕಿವಿಯ ವಾತಂ ಮಾಣ್ಗುಂ. ಚಿತ್ರಮೂಲ, ಸಮುದ್ರಫಲ, ಸಾಸಿವೆ, ಸೈಂಧವ, ಕುರುಟಿಗೆಯ ಬೇರು, ಪ್ರತಿ ೨ ತೂಕವಂ ಪುಡಿ ಮಾಡಿ, ೨ ಮಾನ ತುಪ್ಪದಲ್ಲಿ ಅಟ್ಟು ಆ ತುಪ್ಪಮಂ ಬಿಸಿ ಮಾಡಿ ಸೂಳುಕಿವಿಯಲೆರೆದು ಕಿವಿಗೆ ಅರಳೆಯಂ ಮುಚ್ಚಿ ಗಾಳಿ ಹೋಗದ ಹಾಗೆ ಅರಳೆಯನಿಕ್ಕಿ ತುಪ್ಪಮಂ ಬಿಡಲು ಖಂಡ ಒಡೆದು ಕಿವಿ ಕೀವದು. ನಾಳಿ ಹೋದ ಹುಣ್ಣು, ಕೀವುರಸಿಗೆ ಸುರಿಯುವುದು ಮಾಣ್ಗುಂ.

## ನಾಲ್ಕನೆಯ ಪ್ರಕರಣ

## ಪ್ರಕೀರ್ಣವಿಷಯಗಳು

## D 1393

ಶ್ರೀ ಗುರುಭ್ಯೋ ನಮಃ. ಶುಭಮಸ್ತು.

### ಪಿಂಡೋತ್ಪತ್ತಿ

ಪಿಂಡೋತ್ಪತ್ತಿಂ ಪ್ರವಕ್ಷ್ಯಾಮಿ ಸ್ವರಸ್ಯೋದಯಕಾರಣಂ ।
ಯೇನ ಕ್ಷಿತೌ ತ್ರಿಧಾ ಜಾಸೀತ್ತತ್ಪುನಃ ಪಂಚಧಾ ಸ್ಫುಟಂ ॥ ೧ ॥
ಪಂಚಧಾ ಪುನರೇತಸ್ಯ ಪಂಚವಿಂಶತಿಕಃ ಪುಮಾನ್ ।
ಜಾಯತೇ ಪಾರ್ವತೀದೇವಿ ಯತ್ ಸ್ವರೋದಯಕಾರಣಂ ॥ ೨ ॥

ಟೀಕೆ :—ಆವುದಾದರೊಂದು ಸ್ವರ ಬರುವ ಮೊದಲು ಅದು ಮೂರು ರೂಪವಾಗಿತ್ತು. ಮತ್ತೆ ಅದೇ ಐದು ರೂಪವಾಯಿತು. ಮತ್ತೆ ಐದರೊಳಗೆ ಒಂದೊಂದು ಐದೈದು ರೂಪವಾಯಿತು. ಆಗಲಾಗಿ ಇಪ್ಪತ್ತೈದು ಭೇದವಾಯಿತು.

ಶರೀರೇ ಸ್ವರಸಂಭೂತಿಃ ಸ್ವರೋ ನಾಡೀಸಮಾಶ್ರಯಃ ।
ಸ್ವರನಾಡಿಸ್ವರೂಪಾರ್ಥಂ ಶರೀರಂ ತತ್ರ ಕಥ್ಯತೇ ॥ ೩ ॥

ಟೀಕೆ :—ಶರೀರದಲ್ಲಿ ಸ್ವರ ಹುಟ್ಟಿತ್ತು, ಆ ಸ್ವರವು ನಾಡಿಗಳನಾಶ್ರಯವಾಗಿ ಇರಲುಳ್ಳದು, ಅದು ನಿಮಿತ್ತವಾಗಿ ಸ್ವರದ ನಾಡಿಗಳ ಸ್ವರೂಪವನ್ನರಿವುದಕ್ಕೋಸ್ಕರ ಅಲ್ಲಿ ಶರೀರವು ಹೇಳಲ್ಪಡುತ್ತಿದ್ದಿತು.

ಶರೀರಂ ಪಿಂಡಮಿತ್ಯುಕ್ತಂ ತತಃ ಪಿಂಡಃ ಪ್ರಕಥ್ಯತೇ ।
ಶುಕ್ಲಶೋಣಿತಸಮ್ಮಿಶ್ರಂ ಚೈತನ್ಯೇನ ಪ್ರತಿಷ್ಠಿತಂ ॥ ೪ ॥

ಟೀಕೆ :—ಶರೀರವನ್ನೇ ಪಿಂಡವೆಂಬುದಾಗಿ ಪಿಂಡೋತ್ಪತ್ತಿಯಲ್ಲಿ ಹೇಳುತ್ತಿದ್ದಾರೆ. ಶುಕ್ಲಶೋಣಿತದೊಡಗೂಡಿ ಚೈತನ್ಯವಾಗಿ ಇಹುದು.

ದಿನೇನೈಕೇನ ಕಲಲಃ ಪಂಚಮಾದಪಿ ಬುದ್ಬುದಃ ।
ದಶಾಹಂ ಶೋಣಿತಂ ತಸ್ಮಾನ್ಮಾಂಸಪಿಂಡಂ ತು ಪಕ್ಷತಃ ॥ ೫ ॥

ಟೀಕೆ :—ಒಂದು ದಿನಕ್ಕೆ ಕಲಲಾಕಾರವಾಗಿ ಇಹುದು. ಐದು ದಿನಕ್ಕೆ ಬೊಬ್ಬುಳಿಕೆಯಹುದು. ಹತ್ತು ದಿನಕ್ಕೆ ರಕ್ತವಹುದು. ಹದಿನೈದು ದಿನಕ್ಕೆ ಮಾಂಸದ ಪರಿಯಹುದು.

ವಾಸರಾಣಾಂ ತು ವಿಂಶತ್ಯಾ ಘನಮಾಂಸಂ ಭವೇತ್ತತಃ ।
ದಿನಾನಾಂ ಪಂಚವಿಂಶತ್ಯಾ ತತ್ಸರ್ವಂ ಕುಲಿರೋ ಭವೇತ್ ॥ ೬ ॥

ಟೀಕೆ :—ಇಪ್ಪತ್ತು ದಿನಕ್ಕೆ ಮಾಂಸದ ಗಟ್ಟಿಯಹುದು. ಇಪ್ಪತ್ತೈದು ದಿನಕ್ಕೆಲ್ಲ ಅವಯವಂಗಳ ಮೊಳಕೆಗಳನುಳ್ಳದಹುದು.

ಪಂಚಭೂತಾನ್ವಿತಂ ಮಾಸೇ ಮಾಸಾಭ್ಯಾಂ ಮೇದಸಾನ್ವಿತಂ ।
ಮಾಸತ್ರಯೇಪಿ ಮಜ್ಜಾಸ್ಥಿ ತುರ್ಯೇ ಕೇಶಾಂಗಸಂಯುತಂ ॥ ೭ ॥

ಟೀಕೆ :—ಒಂದುತಿಂಗಳಿಗೆ ಪಂಚಭೂತಂಗಳನುಳ್ಳದಹುದು. ಎರಡು ತಿಂಗಳಿಗೆ ವಸೆಯನುಳ್ಳದಹುದು. ಮೂರು ತಿಂಗಳಿಗೆ ಕೊಬ್ಬು ಕೂಡಿಕೊಂಡಿದ್ದು, ಎಲುಬುಗಳನಳ್ಳದಹುದು. ನಾಲ್ಕುತಿಂಗಳಿಗೆ ಕೂದಲು ಬೆರಳುಗಳನುಳ್ಳದಹುದು.

ಪಂಚಮೇ ಮಾಸಿ ಕರ್ಣಾಕ್ಷಿನಾಸಾವಕ್ತ್ರಾದಿರಂಧ್ರಕಃ ।
ಕರಪಾದಗುದಾಶ್ಯಾಂಸಿ ಮಾಸೇ ಷಷ್ಠೇ ಪ್ರಜಾಯತೇ ॥ ೮ ॥

ಟೀಕೆ :—ಐದನೆಯ ತಿಂಗಳಿಗೆ ಕಿವಿ, ಮೂಗು, ಬಾಯಿ, ನೊಸಲಾದಂತಪ ತಂತುಗಳುಳ್ಳದಹುದು. ಆರನೆಯ ತಿಂಗಳಿಗೆ ಕೈ ಕಾಲು ಹೊಟ್ಟೆಯ ತಂತುಗಳನುಳ್ಳದಹುದು.

ವಾಯ್ವಾ ಯುತಂ ಸಪ್ತಮೇಥ ಚಾಷ್ಟಮೇ ಸರ್ವಶಕ್ತಿತಃ ।
ನವಮೇ ಮಾಸಿ ಸಂಜಾತಂ ಸ್ಮರಣಂ ತಸ್ಯ ಜಾಯತೇ ॥ ೯ ॥
ನವಮೇ ದಶಮೇ ವಾಪಿ ಪ್ರಾಣಾರ್ಥೀ ಗರ್ಭಮುತ್ಸೃಜೇತ್ ।

ಟೀಕೆ :—ಏಳನೆಯ ತಿಂಗಳಿಗೆ ಪ್ರಾಣವಾಯು ಪ್ರವೇಶವಾಗಿ ಅಲುಗಾಡ ಮೊದಲ್ಗೊಂಡು ಇಹುದು. ಎಂಟನೆಯ ತಿಂಗಳಿಗೆ ಸರ್ವಶಕ್ತಿಯನುಳ್ಳದಹುದು. ಒಂಭತ್ತನೆಯ ತಿಂಗಳಿಗೆ ತನ್ನ ಜನ್ಮದ ನೆನಹನುಳ್ಳದಹುದು. ಒಂಭತ್ತನೆಯ ಯಾ ಹತ್ತನೆಯ ತಿಂಗಳಿಗೆ ಆಗಲೀ ಅತ್ಯಂತ ಕ್ಲೇಶವನುಳ್ಳದಾಗಿ ಗರ್ಭದಿಂದ ಪೊರಮಡುವುದು.

ಸಪ್ತಮೇ ಮಾಸಿ ಸಂಪ್ರಾಪ್ತೇ ಸಮುತ್ಪನ್ನೋಪಿ ಜೀವತಿ ॥ ೧೦ ॥
ಅಲ್ಪಾಯುರಲ್ಪಸತ್ವಶ್ಚ ಕ್ಷೀಣಧಾತುಶ್ಚ ರೋಗವಾನ್ ।

ಟೀಕೆ :—ಏಳನೆಯ ತಿಂಗಳಿಗೆ ಹುಟ್ಟಿದರೆ ಪಿಂಡ ಬದುಕುವುದು, ಅಲ್ಪಾಯು ಅಲ್ಪಸತ್ವ, ಕ್ಷೀಣಧಾತು, ರೋಗವನುಳ್ಳದಹುದು.

ಅಷ್ಟಮೇ ಮಾಸಿ ಸಂಜಾತಃ ಕಥಂ ಗರ್ಭೋ ನ ಜೀವತಿ ॥ ೧೧ ॥
ಮಾತುರಪಿ ಸ್ವದೇಹೇ ಚ ಚಲನಂ ತಸ್ಯ ಜಾಯತೇ ।

ಟೀಕೆ :—ಎಂಟನೆಯ ತಿಂಗಳಿಗೆ ಹುಟ್ಟಿದ ಗರ್ಭವು ಬದುಕದು. ತಾಯಿ ದೇಹದೊಳಗೆಯೂ ತನ್ನ ದೇಹದೊಳಗೆಯೂ ತಿರುಗುವುದು. ತನ್ನ ದೇಹದೊಳಗೆ ಇದ್ದರೆ ತಾನೇ ಹೋಗುವುದು. ಅಲ್ಲವೇ ತಾಯ ಕೊಂಡು ಹೋಗುವುದು.

ಷೋಡಶ ದಿವಸಾಃ ಸ್ತ್ರೀಣಾಂ ತಸ್ಮಿನ್ ಯುಗ್ಮಾಸು ಸಂವಿಶೇತ್ ॥ ೧೨ ॥
ಯುಗ್ಮಾಸು ಪುತ್ರಾ ಜಾಯಂತೇ ಸ್ತ್ರಿಯೋಯುಗ್ಮಾಸು ಚ ಸ್ತ್ರಿಯಃ ।

ಟೀಕೆ :—ಸ್ತ್ರೀಯರುಗಳಿಗೆ ಹೊಲೆಯಾದುದು ಮೊದಲಾಗಿ ಹದಿನಾರು ದಿವಸ ಪರಿಯಂತರ ಕಲೆ ಹೆಚ್ಚುವುದು. ಮೇಲೆ ಹದಿನಾಲ್ಕುದಿನ ಕಲೆ ಉಳಿಯದು. ಅದು ಕಾರಣವಾಗಿ ಸಮದಿವಸಂಗಳಲ್ಲಿ ಪುರುಷರು ಕೂಡುವುದು. ಸಮ ದಿವಸಂಗಳಲ್ಲಿ ಪುತ್ರರು ಹುಟ್ಟುವರು. ವಿಷಮದಿವಸಂಗಳಲ್ಲಿ ಕೂಡಿದರೆ ಹೆಣ್ಣುಮಕ್ಕಳು ಹುಟ್ಟುವರು.

ತಸ್ಮಾದ್ಯುಗ್ಮಾಸು ಪುತ್ರಾರ್ಥೀ ಸಂವಿಶೇದಾರ್ತವೇ ಸ್ತ್ರಿಯಾಂ ॥ ೧೩ ॥
ಸ್ತ್ರಿಯಃ ಶೋಣಿತಕೇ ಸ್ತ್ರೀ ಸ್ಯಾತ್ ಪುಂಸಃ ಶುಕ್ಲಾಧಿಕೇ ಪುಮಾನ್ ।

ಟೀಕೆ :—ಅದು ಕಾರಣ ಗಂಡುಮಕ್ಕಳ ಬಯಸುವಾತನು ಸ್ತ್ರೀಯರ ಹೆಚ್ಚುಗೆಯರಿತು ದಿವಸಂಗಳೊಳಗೆ ಸಮದಿವಸಂಗಳಲ್ಲಿ ಕೂಡುವುದು. ಸ್ತ್ರೀಯ ಶೋಣಿತ ಅಧಿಕವಾದರೆ ಸ್ತ್ರೀಯಹಳು. ಪುರುಷನ ಶುಕ್ಲ ಅಧಿಕವಾದರೆ ಪುರುಷನಹನು.

ರಾತ್ರೌ ಚತುರ್ಥೇ ಪುತ್ರಶ್ಚ ಅಲ್ಪಾಯುರ್ಧನವರ್ಜಿತಃ ॥ ೧೪ ॥
ಪಂಚಮೇ ಪುತ್ರಿಣೀ ನಾರೀ ಷಷ್ಠೇ ಪುತ್ರಸ್ತು ಮಧ್ಯಮಃ ।

ಟೀಕೆ :—ಸೂತಕವಾದ ನಾಲ್ಕನೆಯ ದಿವಸದ ರಾತ್ರಿಯಲ್ಲಿ ಗರ್ಭ ನಿಂತರೆ ಗಂಡಹುದು. ಅದು ಅಲ್ಪಾಯು, ನಿರ್ಧನಿಕನು. ಐದನೆಯ ದಿವಸದ ರಾತ್ರಿಯಲ್ಲಿ ಗರ್ಭ ನಿಂತರೆ ಮಕ್ಕಳ ಹಡೆಯುವಂಥಾ ಹೆಣ್ಮಗಳು ಅಹಳು. ಆರನೆಯ ದಿವಸದ ರಾತ್ರಿಯಲ್ಲಿ ಗರ್ಭ ನಿಂತರೆ ಅದು ಗಂಡಹುದು, ಮಧ್ಯಮ ಭಾಗವುಳ್ಳವನು.

ಸಪ್ತಮೇ ಚ ಪ್ರಜಾ ಯೋಷಿದಷ್ಟಮ್ಯಾಮೀಶ್ವರಸ್ಸುತಃ ॥ ೧೫ ॥
ನವಮ್ಯಾಂ ಪುತ್ರಿಭಾಗ್ಯಂ ವಾ ದಶಮ್ಯಾಂ ತು ವರಃ ಪುಮಾನ್ ।

ಟೀಕೆ :—ಏಳನೇ ದಿವಸ ರಾತ್ರಿಯಲ್ಲಿ ಗರ್ಭ ನಿಂತರೆ ಹೆಣ್ಣಹುದು. ಆ ಶಿಶು ಬಂಜೆಯಹಳು. ಎಂಟನೆಯ ದಿವಸದ ರಾತ್ರಿಯಲ್ಲಿ ಗರ್ಭ ನಿಂತರೆ ಅದು ಗಂಡಹುದು. ಒಂಭತ್ತನೆಯ ದಿವಸದ ರಾತ್ರಿಯಲ್ಲಿ ಗರ್ಭ ನಿಂತರೆ ಅದು ಹೆಣ್ಣಹುದು. ಹತ್ತನೆಯ ರಾತ್ರಿಯಲ್ಲಿ ಗರ್ಭ ನಿಂತರೆ ಅದು ಗಂಡಹುದು.

ನವಮ್ಯಾಂ ಪತಿವ್ರತಾ ಸ್ತ್ರೀ ದಶಮ್ಯಾಂ ಪುತ್ರಸ್ತು ವರ್ಧಕಃ ॥ ೧೬ ॥
ಏಕಾದಶ್ಯಾಮಧಮಾ ಸ್ತ್ರೀ ದ್ವಾದಶ್ಯಾಂ ಪುರುಷೋತ್ತಮಃ ।
ತ್ರಯೋದಶ್ಯಾಂ ಸಾ ವಧೂಃ ಸ್ಯಾದ್ವರ್ಣಸಂಕರಕಾರಿಣೀ ॥ ೧೭ ॥

ಟೀಕೆ :—ಒಂಭತ್ತನೆಯ ದಿವಸದ ರಾತ್ರಿಯಲ್ಲಿ ಗರ್ಭ ನಿಂತರೆ ಆಕೆ ಪತಿವ್ರತೆ. ಗಂಡನ ಮೇಲೆ ಪ್ರೀತಿಯುಳ್ಳವಳು, ಹೆಣ್ಣುಮಕ್ಕಳ ಪಡೆವಳು. ಹತ್ತನೆ ದಿವಸದ ರಾತ್ರಿಯಲ್ಲಿ ಗರ್ಭ ನಿಂತರೆ ಅದು ಗಂಡು. ಅವನು ತಂದೆ ತಾಯ ಕುಲವನ್ನುದ್ಧರಿಪನು. ಹನ್ನೊಂದನೆಯ ದಿವಸದ ರಾತ್ರಿಯಲ್ಲಿ ಗರ್ಭ ನಿಂತರೆ ಅದು ಹೆಣ್ಣಹುದು, ಅವಳು ಅಧರ್ಮದಲ್ಲಿ ನಡೆವಂತವಳಹಳು. ಹನ್ನೆರಡನೆಯ ದಿವಸದ ರಾತ್ರಿಯಲ್ಲಿ ಗರ್ಭ ನಿಂತರೆ ಅದು ಗಂಡು. ಅವನು ಪುರುಷರಲ್ಲಿ ಶ್ರೇಷ್ಠ

ನಹನು. ಹದಿಮೂರನೆಯ ದಿವಸದ ರಾತ್ರಿಯಲ್ಲಿ ಗರ್ಭ ನಿಂತರೆ ಅದು ಹೆಣ್ಣು, ಆಕೆ ಮಹಾ ದುಸ್ಥಿತಿ, ಜಾತಿಭೇದದಲ್ಲಿ ನಡೆವಂಥವಳು.

ಧರ್ಮಧ್ವಜಃ ಕೃತಜ್ಞಶ್ಚಾಪ್ಯಾತ್ಮವೇದೀ ದೃಢವ್ರತಃ ।
ಜಾಯತೇ ಚ ಚತುರ್ದಶ್ಯಾಂ ಗುಣವ್ರಾತೈರ್ಜಗತ್ಪತಿಃ ॥ ೧೮ ॥

ಟೀಕೆ :—೧೪ ನೆಯ ದಿವಸ ರಾತ್ರಿಯಲ್ಲಿ ಗರ್ಭ ನಿಂತರೆ ಅದು ಗಂಡಹುದು. ಆತನು ವೇದಾರ್ಥಗಳ ಬಲ್ಲವನಹನು, ದೃಢವಾದ ವ್ರತವ ಬಲ್ಲವನಹನು, ಗುಣಂಗಳ ಸಮೂಹದಿಂ ಜಗತ್ತಿಗೆ ಒಡೆಯನಾಹಂತಹನು.

ರಾಜಪತ್ನೀ ಮಹಾಭಾಗ್ಯಾ ರಾಜವಂಶಗತಿಸ್ತಥಾ ।
ಜಾಯತೇ ಪಂಚದಶ್ಯಾಂ ತು ಬಹುಪುತ್ರಪರಿವೃತಾ ॥ ೧೯ ॥

ಟೀಕೆ :—ಹದಿನೈದನೆಯ ದಿನದ ರಾತ್ರಿಯಲ್ಲಿ ಗರ್ಭ ನಿಂತರೆ ಅದು ಹೆಣ್ಣಹುದು. ಆಕೆ ಜಗತ್ತಿಗೆ ಒಡೆಯಳಹಳು, ಅಧಿಕವಾದ ಭಾಗ್ಯವುಳ್ಳವಳಹಳು. ದೊಡ್ಡ ರಾಜವಂಶಗಳನ್ನೈದುವಳು, ಹಲವು ಮಕ್ಕಳ ಹಡೆಯುವಳು.

ವಿದ್ಯಾಲಕ್ಷಣಸಂಪೂರ್ಣಃ ಸತ್ಯಬುದ್ಧಿರ್ಜಿತೇಂದ್ರಿಯಃ ।
ಸಮಃ ಸ್ಯಾತ್ಸರ್ವಭೂತೇಷು ಷೋಡಶ್ಯಾಂ ಜಾಯತೇ ಪುಮಾನ್ ॥ ೨೦ ॥

ಟೀಕೆ :—ಹದಿನಾರನೆಯ ದಿನದ ರಾತ್ರಿಯಲ್ಲಿ ಗರ್ಭ ನಿಂತರೆ ಅದು ಗಂಡಹುದು. ಸಂಪೂರ್ಣವಾದ ವಿದ್ಯಂಗಳು, ಸಂಪೂರ್ಣವಾದ ಲಕ್ಷಣಂಗಳುಳ್ಳವನು, ಸತ್ಯವಂತನೂ, ಜಿತೇಂದ್ರಿಯನೂ, ಸಮಸ್ತ ಪ್ರಾಣಿಗಳೊಳು ದಯೆ ಉಂಟಾತನಹನು.

ಅಸ್ಥಿ ಮಜ್ಜಾ ಶುಕ್ಲಮಿತಿ ಪಿತುರಂಶೋ ಭವಿಷ್ಯತಿ ।
ರಕ್ತರೋಮಾಣಿ ಪಿಶಿತಃ ಮಾತುರಂಶೋ ಭವಿಷ್ಯತಿ ॥ ೨೧ ॥

ಟೀಕೆ :—ಎಲುಬು, ಕೊಬ್ಬು, ಶುಕ್ಲವು, ತಂದೆಯ ಭಾಗವು. ರಕ್ತವು, ರೋಮಂಗಳು, ಮಾಂಸವು, ತಾಯ ಭಾಗವು.

ಲೋಮತ್ವಕ್ಪಲಲಾನ್ಯಸ್ಥಿ ಪಾರ್ಥಿವಾಂಶಾಃ ಪ್ರಕೀರ್ತಿತಾಃ ।
ಅಬಂಶಾಃ ಶುಕ್ಲವಿಣ್ಮೂತ್ರನಿದ್ರಾಲಸ್ಯಾದಿ ಕಥ್ಯತೇ ॥ ೨೨ ॥

ಟೀಕೆ :—ರೋಮವು, ಮಾಂಸವು, ಎಲುಬು, ಪೃಥಿವಿಯ ಅಂಶ. ಮಲ, ಮೂತ್ರ, ನಿದ್ರೆ, ಆಲಸ್ಯ, ಇವು ಅಪ್ಪುವಿನ ಅಂಶಂಗಳು.

ಕ್ಷುಧಾ ತೃಷ್ಣಾ ಚ ಕಾಂತಿಶ್ಚ ಭವೇದಂಶಾಶ್ಚ ತೇಜಸಃ ।
ಆಕುಂಚಿತಂ ಪ್ರಸರಣಂ ಧಾವನಂ ವಲನಂ ತಥಾ ॥ ೨೩ ॥

ಟೀಕೆ :—ಹಸಿವು, ನೀರಡಿಕೆ, ದೇಹದ ಕಾಂತಿ, ಇವು ತೇಜದ ಅಂಶಗಳು. ಮುದುಡುವಣ, ನಿಡುವಣ, ಅಡುವಣ,

ಏಕಾದಶೈತೇ ಕಥಿತಾ ವಾಯೋರಂಶಾ ಅಮೀ ಮತಾಃ ।
ದ್ವೇಷೋ ಲಜ್ಜಾ ಭಯಂ ಮೋಹ ಆಕಾಶಾಂಶಶ್ಚ ತಾದೃಶಃ ॥ ೨೪ ॥

ಟೀಕೆ :—ಇವು ಮೊದಲಾದುವು ವಾಯುವಿನ ಅಂಶಗಳು. ಕೋಪ, ಲಜ್ಜೆ, ಅಂಜಿಕೆ, ಅಜ್ಞಾನ, ದ್ವೇಷವು, ಆಕಾಶದ ಅಂಶಂಗಳು.

ಜಿಹ್ವಾತ್ವಕ್ಕರ್ಣನಾಸಾಕ್ಷೀಣಿ ಜ್ಞಾನೇಂದ್ರಿಯ ಪಂಚಕಂ ।
ಉಪಸ್ಥಗುದವಾಕ್ಪಾಣಿಪಾದಂ ಕರಣೇಂದ್ರಿಯಂ ಮತಂ ॥ ೨೫ ॥

ಟೀಕೆ :—ನಾಲಿಗೆ, ತೊಗಲು, ಕಿವಿ, ಕಣ್ಣು, ಮೂಗುಗಳು, ಇವು ಜ್ಞಾನೇಂದ್ರಿಯ ಗಳು ಎನಿಸಿಕೊಂಬುವು. ಉಪಸ್ಥ, ಗುದ, ವಾಕ್, ಕೈ, ಕಾಲುಗಳು, ಇವು ಕರಣೇಂದ್ರಿಯ ಗಳು ಎನಿಸಿಕೊಂಬುವು.

ಚತುರ್ದಳಂ ಸ್ಯಾದಾಧಾರೇ ಸ್ವಸ್ಥಾನೇ ಚ ಷಡಂಗುಳಂ ।
ನಾಭೌ ದಶದಳೋಪೇತಂ ಸೂರ್ಯಸಂಖ್ಯಾದಳಂ ಹೃದಿ ॥ ೨೬ ॥

ಟೀಕೆ :—ಆಧಾರದಲ್ಲಿ ಚತುರ್ದಳಪದ್ಮವು, ಯೋನಿಸ್ಥಾನದಲ್ಲಿ ಆರು ದಳದ ಪದ್ಮವು, ನಾಭಿಯಲ್ಲಿ ಹತ್ತುದಳದ ಪದ್ಮವು, ಹೃದಯದಲ್ಲಿ ೧೨ ದಳದ ಪದ್ಮವು.

ಕಂಠೇ ಸ್ಯಾತ್ ಷೋಡಶದಳಂ ಭ್ರೂಮಧ್ಯೇ ದ್ವಿದಳಂ ತಥಾ ।
ಸಹಸ್ರದಳಮಾಖ್ಯಾತಂ ಬ್ರಹ್ಮರಂಧ್ರೇಷು ಪಂಕಜಂ ॥ ೨೭ ॥

ಟೀಕೆ :—ಕೊರಳಲ್ಲಿ ಹದಿನಾರುದಳದ ಪದ್ಮವು. ಹುಬ್ಬುಗಳ ಮಧ್ಯದಿ ಎರಡುದಳದ ಪದ್ಮವು. ಬ್ರಹ್ಮರಂಧ್ರದಲ್ಲಿ ಸಹಸ್ರದಳದ ಪದ್ಮವು.

ಏತಾನಿ ಸಪ್ತಪದ್ಮಾನಿ ಚಕ್ರಾಖ್ಯಾನಿ ಪ್ರಚಕ್ಷತೇ ॥ ೨೮ ॥

ಟೀಕೆ :—ಈ ಏಳು ಪದ್ಮಂಗಳನ್ನು ಸಪ್ತಚಕ್ರಗಳೆಂಬರು.

ದೇಹಮಧ್ಯೇ ಸ್ಥಿತಾ ನಾಡ್ಯೋ ಬಹುರೂಪಾಶ್ಚ ವಿಸ್ತರಾತ್ ।
ಜ್ಞಾತವ್ಯಾಸ್ತು ಬುಧೈರ್ನಿತ್ಯಂ ಸ್ವದೇಹಜ್ಞಾನಹೇತವೇ ॥ ೨೯ ॥

ಟೀಕೆ :—ದೇಹಮಧ್ಯದಲ್ಲಿ ಇದ್ದಂಥಾ ನಾಡಿಗಳು ಹಲವುರೂಪವಾಗಿ ವಿಸ್ತರದೊಡಗೂಡಿ ಇಹವು. ......ಅವರುಗಳಿಂದಾದ ಕರ್ಮ ದೇಹದೊಳಗಣ ಅರಿಕೆಗೋಸುಗ ಎಲ್ಲ ಹೊತ್ತು ಅರಿಯಬೇಕು.

ಸಪ್ತವಿಂಶತಿ ನಕ್ಷತ್ರಂ ಸಪ್ತದ್ವೀಪಂ ನವಗ್ರಹಾಃ ।
ಶರೀರಾಭ್ಯಂತರೇ ದೇವಿ ದರ್ಶಯೇತ್ಸ ಭವೇದ್ಗುರುಃ ॥ ೩೦ ॥

ಟೀಕೆ :—ಇಪ್ಪತ್ತೇಳು ನಕ್ಷತ್ರಂಗಳನ್ನು, ಸಪ್ತದ್ವೀಪಂಗಳನ್ನು, ನವಗ್ರಹಂಗಳನ್ನು ಶರೀರದೊಳಗೆ ಆವನು ತೋರಬಲ್ಲನೋ ಆತನೇ ಗುರು.

ಸಾಗರಾನ್ ಸಪ್ತ ವೇದಾಂಶ್ಚ ಚತುರೋಷ್ಟದಿಶಸ್ತಥಾ ।
ಶರೀರಾಭ್ಯಂತರೇ ದೇವಿ ಯದೀಕ್ಷೇತ್ ಸ ಭವೇದ್ಗುರುಃ ॥ ೩೧ ॥

ಟೀಕೆ :—ಸಪ್ತಸಾಗರಂಗಳನ್ನೂ, ವೇದಂಗಳನ್ನೂ, ಎಂಟು ದಿಕ್ಕುಗಳನ್ನೂ, ಶರೀರದೊಳಗೆ ಬಲ್ಲೊಡೆ ಆತನೇ ಗುರು.

ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಬಾಸ್ಕರಶ್ಚಂದ್ರಮಾ ಮರುತ್ ।
ಶರೀರಾಭ್ಯಂತರೇ ದೇವಿ ಯದೀಕ್ಷೇತ್ ಸ ಭವೇದ್ಗುರುಃ ॥ ೩೨ ।

ಟೀಕೆ :—ಬ್ರಹ್ಮ, ವಿಷ್ಣು, ರುದ್ರ, ಆದಿತ್ಯ, ಚಂದ್ರ, ವಾಯುಗಳನ್ನು ಶರೀರದೊಳಗೆ ಬಲ್ಲೊಡೆ ಆತನೇ ಗುರು.

ನಾ ಡೀ ಪ ರೀ ಕ್ಷೆ.

ಪಿತ್ತೋದ್ರೇಕತಟಿತ್ಪ್ರಕಾಶಗಮನಂ ತೀವ್ರೋಷ್ಣಮಧ್ಯಾಂಗುಳಿಃ
ಶ್ಲೇಷ್ಮಾನ್ಮಂದಗತಿಶ್ಚ ಕುಕ್ಕುಟಗತಿಃ ಶೀತಾಂಗವಾನಾಮಿಕಾ ।
ಅಂಗುಷ್ಠಾಮಣಿಬಂಧಮೂಲತ ಇದಂ ವಾತಂ ಚ ಪಿತ್ತಂ ಕಫಂ
ತ್ರಿಸ್ಥಾನೇಷು ಕರಾಗ್ರದಕ್ಷಿಣಸ್ತ್ರುತಿರ್ನಾಡೀಕ್ರಮಃ ಕಥ್ಯತೇ ॥
... ... ... ... ... ... ... ... ... ... ... ... ...
..............ರೋಗಮಿತಿ ಪ್ರಕಾಶಪ್ರಭವೋ ಜಾತಸ್ತು ಲೋಕೇ ಚಿತಾಂ ।
ಸೂಕ್ಷ್ಮಂ ಲಾಘವಮಂದವೇಗ ... ... ... ಷು ಬ ಧ್ಯಾವಿಧಾನ್
ಏತೇ ಹೃದ್ಯವಿದಂ ಚ ನಾಡಿಸುಲಭಂ ಶ್ರೀಗುಮ್ಮಟೇನೋದಿತಂ ॥
ದೂತನ ನಾಮಾಕ್ಷರಮಂ
ಸಂಘಾತಮ ವೆರಳಲಿ ಗುಣಿಸಿ ಮೂರ್ಗೆ....... ।
... ... ... ಳವ ... ... ... ... ...
ಉಳಿಯುದದು ... ... .... ... ... ... ... ... ॥
... ... ... ... ಗ್ರಾಸಲಕ್ಷ್ಯಂ ತ್ವರಿತಗತಿಮಲಂ ತ್ಯಾಜ್ಯ ... ... ...
.... .... .... ... ... ... ಗಲಯೋಃ ಸ್ನಿಗ್ಧ ಮೋವಾದಿಶೀತಂ ।
ಕಾಲಂ ಹನ್ಯಾತ್ತು ಶೀಘ್ರಂ ಚಲ ಚಪಲಗತೋ..........ಕರಾತ್ರಂ
ವಕ್ರಂ ಚಕ್ರಂ ಚ ರೂಕ್ಷಂ ಭ್ರಮರಪಮಯಂ ಶ್ವಾಸಘೋಷೋಪಸರ್ಗಂ ॥
...........ಹನ್ಯಾಚ್ಚ ಸಪ್ತಂ ದಿನದಿನಮಿಲಿತಂ ನಾಡಿಸೂಕ್ಷ್ಮಂ ಚ ದೃಷ್ಟಂ
ಕಾಸಂ ಶ್ವಾಸಗ್ರಹಣ್ಯ .... .... .... .... .... ಕಂಠಕರ್ಣ್ಯಕ್ಷಿಶೀತಂ ।
ಘ್ರಾಣಂ ಪೈತ್ಯಸ್ವರೂಪಂ ಕರಚರಣ ಉರೋ ... ... ...
... ... ... ಲಲಾಟಂ ಜಲಜನಿತಭೃಶಂ ನಾಡಿಸ್ಫುತ್ಯೋದಯಂ ಚ ॥
ತೀವ್ರಶ್ವಾಸೇಕ್ಷಣಾಕ್ಷಿ ಕ್ಷಯಚಿರ ... ... ... ...
ನಾಭಿಶ್ಚಕ್ರಾಂಡಶೂಲಂ ಕರತಲಹಿಮವಾಕ್ಪಾದಶಾಖಾಂತರಾಲಂ ।
ಲಕ್ಷ್ಯಂ ವೈದ್ಯೋತ್ತಮಾ ಯನ್ನಿಜವಿಧಿಲಿಖಿತಂ ಪಶ್ಯತೀಶಂ ಜಿನೇಂದ್ರಂ
ಸಾಕ್ಷಾತ್ ಶ್ರೀ ಗುಮ್ಮಟೇಶಂ ವಿರಚಿತಸಮಯಗ್ರಂಥದೃಷ್ಟಂ ಮನೋಜ್ಞಂ ॥

ಕರ್ಮವಿಪಾಕ :—

ಶಿಶುಹಂತಾಪ್ಯತೀಸಾರೀ ಬ್ರಹ್ಮಹಂತಾ ಚ ಮೇಹಿನಂ ।
ನಿತ್ಯವಾದೀ ಶ್ವಾಸರೋಗೀ ಅರ್ಶಾಂಸಿ ಜೀವಹಿಂಸಕಃ ॥
ಕಾಂತಾಹಸ್ತ ರಾಜರೋಗೀ ವಿನಿಂದ್ಯ ಜಿಹ್ವರೋಗಕಂ ।
ಯತಿಂ ನಿಂದ್ಯ ವಿಸರ್ಪಂ ಚ ಮಾತರಂ ನಿಂದ್ಯ ಗಂಡಮಾಲಕಂ ॥
ಪಿತರಂ ನಿಂದ್ಯ ಸನ್ನಿಪಾತಂ ವಿಷ್ಣುಂ ನಿಂದ್ಯ ಚ ಅಂಧತಾಂ ।
ಶಿವಂ ನಿಂದ್ಯ ಕಾಸರೋಗೀ ಮಾತರಂ ನಿಂದ್ಯ ಮಹೋದರೀ ।
ವೇದಂ ನಿಂದ್ಯ ಮುಖರಾಗ್ರಂ ಬಧಿರತ್ವಂ ಚ ಜಾಯತೇ ॥
ಅಶೀತಿರ್ವಾತರೋಗಾಣಾಂ ಚತ್ವಾರಿಂಶತ್ತು ಪೈತ್ತಿಕಂ ।
ಶ್ಲೇಷ್ಮಾ ಚ ವಿಂಶತಿ ಜ್ಞೇಯೋ ಗುಲ್ಮ ಅಷ್ಟವಿಧಃ ಪರಃ ॥
ಶ್ವಾಸಃ ಪಂಚವಿಧಃ ಕಾಸ ಉದರಾಷ್ಟಕಮೇವ ಚ ।
ದ್ವಾದಶ ಕ್ಷಯರೋಗಶ್ಚ ಶೋಫ ಏಕಾದಶಸ್ತಥಾ ॥
ಕುಷ್ಠ ಅಷ್ಟಾದಶಶ್ಚೈವ ಮೇಹೋ ವಿಂಶತಿಕಸ್ತಥಾ ।
ಅರ್ಶಾಂಸಿ ಸಪ್ತಾತಿಸಾರಾಣಿ ಸಪ್ತವಿಂಶತಿಕಾ ಜ್ವರಾಃ ॥
ಷಣ್ಣವತ್ಯಕ್ಷಿರೋಗಾಶ್ಚ ಉನ್ಮಾದಶ್ಚಾಷ್ಟಕಸ್ತಥಾ ।
ಗ್ರಹಣೀ ಚತುರ್ವಿಧಾ ಚೈವ ಸನ್ನಿಪಾತಾಸ್ತ್ರಯೋದಶ ॥
ತ್ರಯಃಷಷ್ಟಿ ಮಹಾರೋಗಾ ಇತ್ಯೇತೇ ಕರ್ಮರೋಗಕಾಃ ।

## D 1359

ವಶ್ಯಕ್ಕೆ :—ಗಂಡುಗುಬ್ಬಿಯ ಕರುಳಂ ತೆಗೆದು ಅದರೊಳಗೆ ತನ್ನ ಇಂದ್ರಿಯವನಿಕ್ಕಿ ಅದ ಮಡಕೆಯೊಳಗಿಕ್ಕಿ ಮೂತ್ರಗ್ರಿದು ಮತ್ತೊಂದು ಮಡಕೆಯ ಮುಚ್ಚಿ ೭ ದಿನ ಮಹಾ ರಾತ್ರಿ ಮಂತ್ರಿಸಿ ಅದನ್ನು ಮಲಗುವ ವಸ್ತುಗಳೊಳಗೆ ಇಕ್ಕಲು ಆಕರ್ಷಣವಶ್ಯ. ಸಿದ್ಧನ ಹೆಂಡತಿಯಾದರೂ ವಶಮಾಗುವಳು.

“ಓಂ ನಮೋ ಭಗವತಿ ಇಂದ್ರಾಣಿ ಮನೋತಿ ಸ್ವಾಹಾ” ಈ ಮಂತ್ರದಿಂ ಉತ್ತ ರಾಣಿಯ ಕಡ್ಡಿಯ ೨೧ ಸಾರಿ ಮಂತ್ರಿಸಿ ದಂತಧಾವನ ಮಾಡಿಕೊಳ್ಳೆ ರಾಜವಶ್ಯ.

ನೆಲಾವರೆಯಂ ಹಾವಿನ ಪೊರೆಯಂ ಚೂರ್ಣವಂ ಮಾಡಿ ದೀಪಿಗೆಯ ಹೊತ್ತಿಸೆ ಆ ದೀವಿಗೆ ಕಂಡವರು ಮತವ ಬಿಟ್ಟು ಚಿತ್ರಾಳಿ ಆದುವರು. ಹಾವರಿ ಹುತ್ತದ ಬೀಜದ ತಿರುಳಂ ತಳಿಗೆಯ ಮೇಲೆ ತೂಡೆದು ಸೂರ್ಯಪುಟದಲ್ಲಿ ತೈಲವ ತೆಗೆದು ಮುಟ್ಟಿಸೆ ವಶ್ಯ.

ಅಂಗುರದ ಬೇರು, ಬ್ರಹ್ಮದಂಡೆಯ ಬೇರು, ಈಶ್ವರಿಯ ಬೇರು, ಇವಂ ಸಮಾಸಂ ಗೊಂಡು ಅರೆದು ಇಂದ್ರಗೋಪದ ಮಗುವಿನ ಪಿಷ್ಟೆಯನ್ನು ತನ್ನ ವೀರ್ಯದಲ್ಲಿ ಕಲಸಿ ಮಣ್ಣ ವಲ್ಲಿ ಇಕ್ಕಲು ಮರಣಾಂತಿಕವಶ್ಯ.

ದೃಷ್ಟಿದ್ರಾವಣಕ್ಕೆ :—ಬಿಮುರಲೆ, ಮೊಸ್ಟ್, ಕೆಂಪಿನ ಅಗಸೆಯ ಹೂ, ನಾಂಗುಲಿಕ, ಪಾದರಸ, ಇವನ್ನು ಕೂಡಿ ಮರ್ದಿಸಿ ತಿಲಕವಿಡಲು ದೃಷ್ಟಿದ್ರಾವಣ ಮಾಣ್ಣುಂ.

ಹಾಲೆಯ ಹೂ. ಈಶ್ವರಿಯ ಸಮೂಲ್ಯ. ಇವಂ ಸಮಾಸಂಗೊಂಡು ಚೂರ್ಣ ಮಾಡಿ ಬಟ್ಟೆಯಲ್ಲಿ ಬಹಳ ಜಿಸ್ನ ಹುಳಿ ತೆಗೆದು ಜಿಸ್ನಲ್ಲಿ ಬಕ್ಕು.

ಮುಚ್ಚಿಕೊಂಡಿಪ್ಪ ಕಪ್ಪೆಯ ಚಿಪ್ಪನ್ನು ಮೂಷೆಯೊಳಗೆ ಇರಿಸಿ ತೈಲ ಬಕ್ಕು. ಆ ತೈಲ ಮೊಳು ಸುಣ್ಣ ಕಲ್ಲ ಹಾಕಿ ಆ ಸುಣ್ಣವ ಸ್ತ್ರೀಗೆ ಇಕ್ಕಲು ಇಂದ್ರಿಯ ಬಲಿಸೆಯಕ್ಕು.[1]

ವಶ್ಯಕ್ಕೆ :—ರಸ ನ ತೂಕ ಹಾಗಲದ ಕಾಯ ರಸವಲ್ಲ ಬಿರಿಸಿ ಸನುಗುಸ್ಸಿ ಜೀರ ತೇಮ ಭರಣಿಯ ತುಂಬಿ ಗುಳ್ಳದ ರಸದಲ್ಲಿ ಲೇಪ ಮಾಡುವುದು.

ಕರಿ ಉಮ್ಮತ್ತದ ಕಾಯಿಗೆ ಅಡಕೆ ಪರ ತುಂಬಿ ಮೂಷೆಯ ಮುಚ್ಚಿಸಿ ಹಾಕಿ ತಿಪ್ಪೆಯಲ್ಲಿ ಹೂತ ಮಾರನೇ ಆವರ್ತ್ಯಾಂತರ ತೆಗೆದು [illegible] ತಲೆ ಓದೆ ಒಡದ ಕಪ್ಪ ಎತ್ತಿ ಸ್ತ್ರೀಯರ ಸರಗಿಗೆ ತೊಡೆಯುವುದು.

ಮರು ಉಮ್ಮತ್ತದ ಬೀಜ, ನಾಗಕಣಿ [illegible] ಬೀಜ. [illegible] ತೂ ಕದಳಿ ಗಾತ್ರ ಗುಳಿಗೆಯಂ ಮಾಡಿ [illegible] ಇಕ್ಕೆ ಸ್ತ್ರೀವಶ್ಯ.

ಹಾಗಲದ ಕಾಯ ಬೀಜವ ತೆಗೆದು [illegible] ತುಂಬಿ [illegible] ಸುತ್ತಿ ತನ್ನ ಮೂತ್ರದಲ್ಲಿ ಎರಡು ಘಳಿಗೆ [illegible] ರಸದಲ್ಲಿ ಸೇರಿಸಿ ಪ್ರಮಾಣದಲ್ಲಿ ಗುಳಿಗೆಯಂ ಊಟದಲ್ಲಿ ಇಕ್ಕೆ ವಶ್ಯ.

ಕರಿ ಉಮ್ಮತ್ತದ ಕಾಯ ಬೀಜವ ತೆಗೆದು [illegible] ತುಂಬಿ ಉಮ್ಮತ್ತದ ಸೊಪ್ಪಿನ ರಸದಲ್ಲಿ ಒಂದು ಜಾವ ಅರೆದು [illegible] ಪ್ರಮಾಣ ಗುಳಿಗೆಯಂ ಮಾಡಿ ಮೂತ್ರದಲ್ಲಿ ನೆನೆಯಿಸಿ ಊಟದಲ್ಲಿ ಇಕ್ಕುವುದು ಪುರುಷವಶ್ಯ.

ಕಿರುಸಿಲ್ಲಿಯ ಅರ್ಚನೆ ಮಾಡಿ ತಂದು ಚೂರ್ಣಿಸಿ ಸಣ್ಣನಾದ ಪಾವಡೆಯಲ್ಲಿ ಪೊಟ್ಟಣ ಗಟ್ಟಿ ಸೂತಕವಾದ ನಾಲ್ಕು ದಿನ [illegible] ಇರಿಸಿಕೊಂಡಿದ್ದು ಅದನ್ನು ತುಪ್ಪದಲ್ಲಿ ಕಲಸಿ ತುಪ್ಪವ ಕಾಸಿ ಊಟದಲ್ಲಿ ಆ ತುಪ್ಪವನಿಕ್ಕಲು [illegible] ಪುರುಷನೊಲಿವನು. ಪುರುಷವಶ್ಯ ತಪ್ಪದು.

ಘೀರ್ಯಸ್ತಂಭನಕ್ಕೆ :—ತಿಪಿತ್ಯಾದ [illegible] ದಂಟಿಕೆ ಹೂವಿನ ಗುಂಡಿಗೆಯ ರಕ್ತವ ಪಚ್ಚ ಪಚ್ಚೆಕರ್ಪೂರದ ರಸ, ಮಲ್ಲಿಗೆಸೊಪ್ಪಿನ ರಸ, ಕುಡುಕೆಯಿಂದು [illegible] ಮಾಣಿಕ್ಯವನ್ನು ಮತ್ತಷ್ಟು ಎಸರತ್ತಿ ಹಣ್ಣಿನ ಹಾಗೆ ಅರೆದು ಇದರ ಗುಳಿಕೆ ಮಾಡಿ ಒಂದಿಷ್ಟು ಹಾಲಲ್ಲಿ ನೆನಿಸುವುದು. ಜೇನುತುಪ್ಪದಲ್ಲಿ ಹಾಕಿದರೆ ಹಾಲು ಉಗುಳುವುದು. ಈ ಗುಳಿಕೆಯ ಬೆಳ್ಳಿಯ ಬಳೆಯೊಳಗೆ ಹಾಕಿಕೊಂಡು ಅದನ್ನು ಸೊಂಟಕ್ಕೆ ಕಟ್ಟಿಕೊಂಡು ಸ್ತ್ರೀಕೂಟದಲ್ಲಿ ಹಿಡಲು ಶತ ಸ್ತ್ರೀಯರ ಸಂಭೋಗ ಮಾಡಬಹುದು.

---

1 ಇದರ ನಂತರ ಮೂಲಕೋಶದಲ್ಲಿ ಈ ಅರ್ಧಶ್ಲೋಕವಿದೆ :—'ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ।'

ಹಾವುಮೆಕ್ಕೆಯ ಕಾಯೊಳಗೆ ೧೦ ತೂಕ ಪಾದರಸವ ತುಂಬಿ ಏಳುಸಿರೆ ಮಣ್ಣುಗೊಂಡು ಚೆನ್ನಾಗಿ ಒಣಗಿಸಿ ಗುಡಾಣದೊಳಗೆ ಎರಡು ಕೊಳಗ ಸುಣ್ಣವ ಹೊಯ್ದು ಅದರ ಮೇಲೆ ಆ ಕಾಯಂ ಇರಿಸಿ ಅದರ ಮೇಲೆ ಎರಡು ಕೊಳಗ ಸುಣ್ಣವ ಕಾಯಿಸಿ ಇರಿಸಿದಲ್ಲಿ ಒಂದು ಬಳ್ಳ ಹಸುವಿನ ಹಾಲ ಹೊಯ್ದು, ಹಸು ಕರು ಒಂದೇ ವರ್ಣದ ಹಾಲು, ಅದರ ಮೇಲೆ ನೀರು ಹೊಯ್ದು ಮುಚ್ಚಿ ಬೆಂದ ಬಳಿಕ ಆರಿದ ಮೇಲೆ ತೆಗೆದು ಗುಟಿಕೆಯಕ್ಕು. ಅದಂ ಕೊಳ್ಳೆ ಶತ ಸ್ತ್ರೀಯರ ಮೆರೆಯಬಹುದು.

ಸ್ತಂಭನಕ್ಕೆ :—

ಇಕ್ಷೂರಣತುರಮಾನರಬೀಜಂ ಮುಸಲಿಶತಾಪರಿಶಾಲ್ಮಲಿಸಾರಂ ।
ಶರ್ಕರಗೋಘೃತಮಧುಸಂಮಿಶ್ರಂ ಶತಾವರಜಯಕರಮಿತಿ ಸಿದ್ಧಂ ॥
ಪುನರ್ನವತಿಲಮಾಷಾ ಅಶ್ವಗಂಧಶತಾವರೀ ।
ಕುನಟೀ ತಾಳಮೂಲೀ ಚ ಸರ್ವಂ ಭಾಗಂ ಸಮಾಂಶಕಂ ॥
ಭಕ್ಷಯೇತ್ ಕ್ಷೀರಸಂಯುಕ್ತಮನ್ವಹಂ ಪಾರಕದ್ವಯಂ ।
ಪುಷ್ಟಿಕಾಮಪ್ರವೃದ್ಧಿಂ ಚ ವೃದ್ಧಾನಾಂ ಕಾಮಕಾರಕಂ ॥

ಬಿಳಿಕೊಮ್ಮೆ, ಜೇನು, ಎಳ್ಳು, ಉದ್ದು, ಹಿರಿಮದ್ದಿನ ಬೇರು, ಆಷಾಢಿಯ ಗೆಣಸು, ನಸು ಗುನ್ನಿಯ ಬೀಜ, ನೆಲದಂಸಿನ, ಗೆಣಸು, ಇವಂ ಸಮಾನಂಗೊಂಡು ಚೂರ್ಣಿಸಿ ವಸ್ತ್ರ ಗಾಳಿತವಂ ಮಾಡಿ ೧೪ ದಿನ ತ್ರಿಯಂಗುಲ ಚೂರ್ಣವ ಹಾಲಿನಲ್ಲಿ ಕೊಳ್ಳೆ ವೀರ್ಯವರ್ಧನ. ವೃದ್ಧನಾದರೂ ಕಾಮಪರಸಂತ ಸ್ತಂಭನ.

ವಶ್ಯಕ್ಕೆ :—ದೊಡ್ಡ ಗುಳ್ಳದ ಹಣ್ಣ ತಂದು ಅದರ ಬೀಜವಂ ತೆಗೆದು ರಸವ ತುಂಬಿ ಸಿರುಮಣ್ಣುಗೊಂಡು ಪುಟಕ್ಕೆಟ್ಟು ಕಟ್ಟಿ ಆ ನೋಲೆ ಜೇನುತುಪ್ಪದಿಂದ ಮೇಢ್ರಲೇಪ ಮಾಡೆ ಸ್ತ್ರೀವಶ್ಯ.

ಮರಣಾಂತಿಕವಶ್ಯಕ್ಕೆ :—

ತಿಲಪುಷ್ಪವಿಡಂಗಾನಿ ಕರ್ಪೂರಂ ಚಂದನಂ ಗುಡಂ ।
ಆತ್ಮೇಂದ್ರಿಯಸಮಾಯುಕ್ತಂ ಲೇಪನಂ ಮರಣಾಂತಿಕಂ ॥
ಕರವೀರಸ್ಯ ನಿರ್ಯಾಸಂ ಪಿಪ್ಪಲೀ ತಂಡುಲಂ ತಥಾ ।
ಮಧುನ್ಯೈವ ಚ ಸಂಯುಕ್ತಂ ಲೇಪನಂ ಮರಣಾಂತಿಕಂ ॥

ಕಿರುನೆಲ್ಲಿಯ ಬೇರು ಎಷ್ಟುದ್ದವಿಷ್ಟಿತೋ ಅಷ್ಟುದ್ದವನು -ತಂದು ಅಗೆದುಕೊಂಡಿಟ್ಟು ನಕ್ಷತ್ರ ಬೀಳುವುದನ್ನು ನೋಡಿಕೊಂಡಿದ್ದು ಆ ನಕ್ಷತ್ರ ಬೀಳುವ ಕಡೆಗೆ ಆ ಗಿಡವಂ ಕಿತ್ತು ಕೊಂಡು ಯಾವ ಕಡೆಗೆ ಬೀಳುವುದೋ ಆ ಗಿಡವಂ ಕಿತ್ತುಕೊಂಡು ಹಿಂದೆ ನೋಡದೇ ಬರುವುದು. ಆ ಬೇರನ್ನು ತಾಮ್ರದ ತಗಡಿಗೆ ಹುದುಗಿಸಿ ಹಲ್ಲು ನುಲಿಯೆ ಏಳನೆಯ ಉಪ್ಪರಿಗೆಯಲ್ಲಿ ಇದ್ದ ಸ್ತ್ರೀಯಾದರೂ ದ್ರಾವಣ ತಪ್ಪದು.

ಸ್ತಂಭನಕ್ಕೆ :—ಕೃಷ್ಣೋನ್ಮತ್ತದ ಕಾಯೊಳಗೆ ಒಂದು ತೂಕ ರಸವಂ ತುಂಬಿ ಮೇಣವ ತೊಡೆದು ಕಾಯಂ ಬಲಿತ ಬಳಿಕ ಕೊಯ್ದು ಆ ಬೀಜವ ಮೂತ್ರದಲ್ಲಿ ತೇದು ಕೊಡಲು ಸ್ತಂಭನ.

ವಶ್ಯಕ್ಕೆ :— ಬೆಲ್ಲವತ್ತದ ಬೀಜವಂ, ಜೇನುತುಪ್ಪದಲ್ಲಿ ತೇದು ಭಗಕ್ಕೆ ಪೂಸಲು ಸ್ತ್ರೀಯರು ತನಗಲ್ಲದೆ ಅನ್ಯರಿಗೆ ಒಲಿಯರು.

ಸ್ತನ ದೊಡ್ಡದಾಗುವುದಕ್ಕೆ :—ಬಜೆ, ಹೆಗ್ಗಣಿಕೆ, ಯಷ್ಟಿಹುಲ್ಲು, ತುರುಚಿ, ಇವೆಲ್ಲವಂ ಕೂಡಿ ಎಣ್ಣೆಯಲ್ಲರೆದು ಸ್ತನಂಗಳಿಗೆ ಪೂಸೆ ಸ್ತನ ದೊಡ್ಡಿತಕ್ಕು.

ಅಗುಳಿಕೆ ತೆಗೆಯುವುದಕ್ಕೆ :—ಬಿಳಿಯ ಹೂಲಿಯ ಬೇರು, ವ್ಯಾವರ್ತದ ಬೇರು, ಇವನ್ನು ತೇದು ಮೈಗೆ ಪೂಸಿಕೊಂಡರೆ ಅಗುಳಿಕೆ ತೆಗೆಯುವುದು.

[1]ರಾಜವಶ್ಯಕ್ಕೆ:—ಕುಂಕುಮ, ಶ್ರೀಗಂಧ, ಕರ್ಪೂರ, ಇವಂ ಹಸುವಿನ ಹಾಲಿನಲ್ಲಿ ತೇದು ತಿಲಕವಿಡೆ ರಾಜವಶ್ಯ.

ಗರ್ಭಕ್ಕೆ :—ಮುತ್ತುಗದ ಬೀಜವನ್ನು ಜೇನುತುಪ್ಪದಲ್ಲಿ ಅರೆದು ಲಿಂಗಕ್ಕೆ ಲೇಪಿಸಿ ಕೊಂಡು ಸ್ತ್ರೀಸಂಭೋಗವಂ ಮಾಡಲು ಗರ್ಭವಕ್ಕು.

ಸರ್ಪಬಾಧಾಬಂಧನ :—ಕೆಂಪಿನ ಕಣಗಿಲ ಬೇರು ... ... .... ಯ ಬೇರೂ ಕೈಯಲ್ಲಿರೆ ಸರ್ಪಬಾಧಾಬಂಧನ. ಸಮುದ್ರಪಾಳದ ಬೀಜವನ್ನು ಆಡಿನ ಹೋತನ ಮೂತ್ರ ದಲ್ಲಿ ಅರೆದು ಕೊಳ್ಳೆ, ವಿಷ ತೀರ್ಗುಂ.

ಸಂಕೋಲೆ ಮುರಿಯುವುದಕ್ಕೆ :—ಆದಿತ್ಯಭಕ್ತನ ಬೇರ ರಸವ ಹಿಂಡಿಕೊಂಡು ಪಾದ ರಸದಿಂ ಮರ್ದಿಸಿ ಪೂಸೆ ಸಂಕೋಲೆ ಮುರಿಯುವುದು.

ಮದ್ದುಕುಣಿಕೆಯುಂ ಕಳ್ಳಿಹಾಲಲ್ಲರೆದು ಅರಳೆ ಬತ್ತಿ ಗೂಡಿ ದೀಪವ ಹೊತ್ತಿಸಿ ನೋಡೆ .........ಬಿಟ್ಟು ಓಡುವರು.

---

1 ಮೂಲಕೋಶದಲ್ಲಿ ಇದರ ಹಿಂದೆ ಈ ಶ್ಲೋಕವಿದೆ :—

ಸತ್ಪ್ರಾತಿಹಾರ್ಯವಿಭವಾಷ್ಟಕಭಾಸಮಾನಂ
ಶ್ರೀವರ್ಧಮಾನಜಿನಪಂ ಪ್ರಣಮಾಮಿ ನಿತ್ಯಂ ॥
ಯಾವಂತಿ.........ವಿದ್ಯಂತೇ ಭುವನತ್ರಯೇ ।
ತಾವಂತಿ ಸತತಂ ಭಕ್ತ್ಯಾ ತ್ರಿಃ ಪರೀತ್ಯ ಸಮಾಮ್ಯಹಂ ॥

೧೦೭-ನೇ ಪತ್ರದ ಆರಂಭದಲ್ಲಿ ಹೀಗಿದೆ :—

ಪ್ರಸನ್ನವದನಂ ಧ್ಯಾಯೇತ್ಸರ್ವವಿಘ್ನೋಪಶಾಂತಯೇ ॥
ಶ್ರೀಮದ್ಗೀರ್ವಾಣಚಕ್ರೇಶ್ವರಮಕುಟತಟಪ್ರೋಲ್ಲಸತ್ಪದರಾಗೋ
ದ್ದಾಮಪ್ರೋದ್ಯತ್ಸಮಾನಾರುಣಚರಣಸರೋಜಂ ಶುನಾಸೀರವೈರಿ ।
ಸ್ತೋಮಾದ್ಯಕ್ರೂರಝುಂಝಾನಿಲನಗಣಿತಸದ್ಭಕ್ತಪಾರಾಶಿಚಂದ್ರಂ
ಶ್ಯಾಮಾಂಗಜ್ಯೋತಿಲಕ್ಷ್ಮೀರಮಣನೆಮಗೆ ಸಂಸಿದ್ಧಿಯಂ ಮಾಳ್ಕೆ ದೇವಂ ॥

ಈ ಪದ್ಯವು "ಪದ್ಮಣಪಂಡಿತ" ವಿರಚಿತ "ಹಯಸಾರ ಸಮುಚ್ಚಯ"ದಲ್ಲಿದೆ.

ಅಂಬು ಹೊರಡುವುದಕ್ಕೆ:—ಸಂದ್ಯಾವರ್ತದ ಬೇರು, ಆಷಡಿಯ ಬೇರು, ಇವಂ ಅರೆದು ನುಂಗಲು ಅಂಬು ಮೈಯ್ಯ ... ... .. ಸಿಕ್ಕಿದರೆ ಸಮುದ್ರಪಾಳವಂ ಗೋಮೂತ್ರದಲ್ಲರೆದು ಪೂಸಲು ಅಂಬು ಹೊರಡುವದು.

ಅಂಬುಕಟ್ಟಿಗೆ :—ಬಿಳಿಯ ತೊಟ್ಟೆಯ ಬೇರಂ ಸಿದ್ಧದಿನದಲ್ಲಿ ತಂದು ಬಾಯೊಳಿರಲು ಅಂಬು ತಡೆಯುವದು.

ಖಡ್ಗಸ್ತಂಭನಕ್ಕೆ :—ಬಿಳಿಯ ಕೊಳವಳಿಕೆಯ ಸಮೂಲವಂ ನೀರಲ್ಲರೆದು ಕುಂಬಳದ ಕಾಯ ಪೂಸಿ ಕತ್ತಿಯಲ್ಲಿ ಹೊಯ್ಯಲು ರೇಕೆ ತಾಗದು. ಇಂಗನ್ನು ಜೇನುತುಪ್ಪದಲ್ಲಿ ತೇದು ಅಲಗಿನ ಬಾಯಿಗೆ ಪೂಸಲು ಖಡ್ಗಸ್ತಂಭನ. ಬೆಕ್ಕೆಯ ಬೇರ ತಂದು ಧೂಳಿಯಂ ಮಾಡಿಕೊಂಡು ಕೋಣನಕಾಯ ಮೊಸರಸಲ್ಲಿ ಕೊಳ್ಳಲು ಅಡ್ಡಹೊಯ್ದು ಮೇಲೆ ನೆನೆಸೆ ನಿಲ್ಲುವುದು.

ಒಲುಮೆಗೆ ಗಂಡಾದರೂ ಹೆಣ್ಣಾದರೂ ಒಲ್ಲದಿರೆ :—ಮರುಳುಮ್ಮತ್ತದ ಕಾಯ ತಂದು ಕದಕಿ ಕುಡುಕೆಯಲ್ಲಿರಿಸಿ ನೆಲದಲ್ಲಿ ಹೂಳಿ ರವಿವಾರ ಮೊದಲಾಗಿ ಹೆಣ್ಣಿಗೆ ಗಂಡಿನ ಮೂತ್ರ, ಗಂಡಿಗೆ ಹೆಣ್ಣಿನ ಮೂತ್ರ, ಈ ಪರ್ಯಾದೆಯಲ್ಲಿ ಕ್ರಮವರಿತು ಜಲವ ಬಿಟ್ಟು ಮುಂಚೆ ಎಂಟು ದಿನದ ಮೇಲೆ ತೆಗೆದು ಅದರಲ್ಲಿ ಆದ ಉಪ್ಪನ್ನು ತೆಗೆದುಕೊಂಡು ತಿಲತೈಲದಲ್ಲಿ ನೆತ್ತಿಗೊತ್ತುವುದು, ಒಲಿಯುವರು ಸಿದ್ಧಾಂತ. ತಪ್ಪಬಾರದು. ಹೊನ್ನುಮ್ಮತ್ತಕಾಯ ತೋಡಿ ಹೋಳು ಮಾಡಿ ಮುರುಳಿಯ ಬೀಜವ ತುಂಬಿ ಆದಿತ್ಯವಾರ ಮೊದಲಾಗಿ ಏಳುದಿನ ಮೂತ್ರಿಸಿ ತೆಗೆದುಕೊಂಡು ಮತ್ತು ಮೂತ್ರದಲ್ಲಿ ಅರೆದು ನಾಯ ಹಾಲಲ್ಲಿ ಕಲಸಿ ಸುಣ್ಣದಲ್ಲಿಟ್ಟು ಪೂಸೆ ವಶ್ಯವಾಗು, ತಪ್ಪಬಾರದು, ಸಿದ್ಧಾಂತ. ಕರಿ ಉಮ್ಮತ್ತ, ಕರಿ ಗುರುಗಂಜಿ, ಇವಂ ಸಮಾನಂಗೊಂಡು ಕತ್ತೆ ಮೂತ್ರದಲ್ಲಿ ಕುಡಿಕೆಯ ತುಂಬಿ ನೆಲದಲ್ಲಿ ಹೂಳಿ ಆದ ತೆಗೆದು ಆರಿಸಿ ಅಂಬಿಲದಲ್ಲಿ ಹದಮಾಡಿ ಭಗಮಂ ಪೂಸೆ ಆ ಪುರುಷನನಲ್ಲದೆ ಮತ್ತೊಬ್ಬನನ್ನು ಒಲ್ಲಳು. ಅಡ್ಡತೂಕ ಕೆಂಪಿನಲ್ಲಿ ಗಣಿಯ ಕಪ್ಪ ಸೀರೆಗೆ ಪೂಸೆ ಸ್ತ್ರೀ ವಶ್ಯ.

ಕಾದ ಕಬ್ಬಿಣವ ಕಚ್ಚಿ ಎತ್ತುವುದಕ್ಕೆ:—ಬೋಳೆ ಕರಗವ ಶುಂಠಿ ಕೂಡಿ ಅಗಿದು ಮೆದ್ದು ಕೂಡೆ ಕಾದ ಕಬ್ಬಿಣವ ಕಚ್ಚಿ ಎತ್ತುವುದು.

ಅಗ್ನಿಸ್ತಂಭನಕ್ಕೆ :—ನೆಲಗುಳ್ಳ, ಹೊಸ ಸುಣ್ಣ, ನೀರಲ್ಲರೆದು ಒಬ್ಬನಿಗೆ ತಿಲಕ ವಿಡಲು ಅವರ ನೋಡುತ ಹಾರೆಯನ್ನುಜ್ಜಲು ಕೈ ಬೇಯದು. ಬಿಳಿಯ ಗಣಿಜಿಲೆಯ ಬೇರನ್ನು ಮೆದ್ದು ಕೆಂಡವ ಬಾಯಲ್ಲಿ ಕಚ್ಚಿದರೆ ಬಾಯಿ ಬೇಯದು. ಮತ್ತಿಯ ಮರದ ತೈಲ, ಗೌಲವದ ಮರದ ತೈಲ, ಈ ಎರಡರ ತೈಲವಂ ತಂದು ಕೈಗೆ ಪೂಸಿಕೊಂಡು ಹಾರೆಯ ತೆಗೆಯಲು ಅಗ್ನಿಸ್ತಂಭನ. ಹಾಲುಮಾಣಿಕದ ಒಡಗು ಹರಿದ ಬೇರಂ ಸಿದ್ಧದಿನದಲ್ಲಿ ತಂದು ಮೊಲೆಹಾಲಲ್ಲಿ ತೇದು ತಿಲಕವಿಟ್ಟು ಹಾರೆಯ ತೆಗೆಯಬಹುದು.

ಕೊಡಮಳೆಗೆ :—ಮಾಯಸದ ಎಡದ ಕಣ್ಣಂ ತಂದು ಚಿನ್ನದಲ್ಲಿ ಉಂಗುರವ ಮಾಡಿ ಬೆರಳಲ್ಲಿ ಇಡಲು ಕೊಡಮಳೆಯಕ್ಕು.

ಕೊಡೆಮಳೆಯ ಮಂತ್ರ: —"ಓಂ ನಮೋ ಭಗವತಿ, ಗರ್ಭಿಣೀ ವಿಷ್ಣುರಿ, ರುದ್ರಾಣಿ, ರೌದ್ರಿ, ಚಂಡಿ, ಮಹಕಾಳಿ, ಸಾರಣಿ, ಧಾರಣಿ, ವಿಶ್ವಕರ್ಮಿ, ನಿರಂಜನಿ, ತ್ರಿಪುರಾಂತಕಿ,

ಜಾಟರಿ, ವಾಸುಕಿ, ಮದನಕರ್ಕಶಿ, ಉಗ್ರಮೂರ್ತಿ, ಜ್ಞಾನೇಶ್ವರಿ, ನಾರಾಯಣಿ, ಕುಂಭಿನಿ, ಇಂತು ಎಪ್ಪತ್ತೆಂಟುಕೋಟಿ ದೇವತೆಯಂ ನೆನೆದು ಕಟ್ಟಿದ್ದೇನೆ, ಕಾಹಂ ಇಕ್ಕಿದ್ದೇನೆ," ಈ ಮುದ್ರೆಯಂ ಅರುವತ್ತೆಂಟು ಬಾರಿ ಪಠಿಸಿ ಹೊಳೆಯಲ್ಲಿ ಮುಳುಗಿ ಒಂದು ಬಾರಿಯುರೆದ ಬೆಣಚಿನ ಕಲ್ಲನ್ನು ತಂದು ಈ ಮಂತ್ರದಿಂ ಮಂತ್ರಿಸಿ ಇಪ್ಪೆಯ ಎಣ್ಣೆಯಲ್ಲಿ ಮಂತ್ರಿಸಿ, ಎಣ್ಣೆಯಲ್ಲಿ ಹಾಕಿ ಎಣ್ಣೆಯಲ್ಲಿರಲು ಮಳೆ ಹೊಯ್ಯುವುದು. ಬಾಯೊಳಗಿರಲೂ ಕೊಡಮಳೆಯಕ್ಕು.

ಅಗ್ನಿಸ್ತಂಭನಕ್ಕೆ :—ಕೊಳವಳಿಕೆಯ ಜೇರು, ಆ ಬೀಜ, ಸಾಸಿವೆ, ಇವಂ ತಿಲತೈಲದ ಲ್ಲರೆದು ಕಲಸಿ ಮೈಗೆ ಪೂಸಿಕೊಂಡರೆ ಅಗ್ನಿಸ್ತಂಭನ.

ಸ್ತ್ರೀವಶ್ಯಕ್ಕೆ :—ಉತ್ತರಣೆಯ ಬೀಜ, ಕೊಳನಳಿಕೆಯ ಬೀಜ, ಇವಂ ಅರೆದು ತುಪ್ಪ ದಲ್ಲಿ ಕಲಸಿ ವೀಳ್ಯದೆಲೆಯೊಳಗೆ ಮಡಿಸಿ ಅಣಲೊಳಿಟ್ಟುಕೊಂಡು ಸ್ತ್ರೀಸಂಭೋಗವ ಮಾಡೆ ಸ್ತ್ರೀವಶ್ಯ. ಕರ್ಪೂರ, ಸೈಂಧವ, ಎಮ್ಮೆಕಿವಿ, ಗುಗ್ಗು, ಹೊಮ್ಮುಗುಳು, ಇವಂ ಸಮಾಸಂ ಗೊಂಡು ಅರೆದು ಲೇಪವಂ ಮಾಡುವುದು. ಆದಿತ್ಯವಾರ ಗುಬ್ಬಿ ಮೈಥುನ ಮಾಡುವಾಗ ಕೊಂಬನ್ನು ನೋಡಿಕೊಂಡಿದ್ದು ಆ ಕಟ್ಟಿಗೆಯನ್ನು ಸುಟ್ಟು ಕೈಗೆ ಪೂಸಿಕೊಂಡು ಸ್ತ್ರೀಯ ಕೈಯಂ ಪಿಡೆಯ ವಶ್ಯ. ಬಜೆ, ಕೋಷ್ಠ, ಅಂಗುರ, ಗುಳ್ಳದ ಬೇರು, ಸಾಸಿವೆ, ಇವಂ ಸಮಾಸಂ ಗೊಂಡು ಅರೆದು ಲಿಂಗಲೇಪವಂ ಮಾಡೆ ಸ್ತ್ರೀವಶವಕ್ಕು. ಬಿಳಿಕೊಳವಳಿಕೆಯ ಜೇರು ನೋನವಲ್ಲಿ ಅಷ್ಟವಿಧಾರ್ಚನೆ ಮುಂತಾಗಿ ಮಾಡಿ ತಂದು ರಕ್ಷೆಯಂ ಕಟ್ಟಿ ಉಡಿಯಲ್ಲಿ ಸುತ್ತ ಕಟ್ಟೆ ಸ್ತಂಭನ.

ಕೋಣನ ಕಿವಿಯ ಗುಗ್ಗೆ, ರಸ, ಕರ್ಪೂರ, ಜೇನುತುಪ್ಪದಲ್ಲಿ ಸಮವಾಗಿ ಕಲಸಿ ಅಂಗೈ ಯಲ್ಲಿ ಪೂಸಿ ಆವಳ ಕೈಯ್ಯ ಹಿಡಿಯೆ ಹಸ್ತದ್ರಾವಣ.

'ತೇಜ ಸ್ವಾಹಾ ಓಂಸ ವಾರುಣ ವಾ ಸ್ವಾಹಾ' ಎಂಬ ಮಂತ್ರದಿಂ ಕೆಂಪಿನ ಅಗಸೆಹೂವಂ ತಂದು ಬೆಣ್ಣೆಯಲ್ಲಿ ಕೂಡಿ ಮರ್ದಿಸಿ ಅದಂ ತನ್ನ ಹೊಕ್ಕುಳಿಗೆ ಲೇಪವಂ ಮಾಡಿ ಸ್ತ್ರೀಸಂಭೋ ಗವಂ ಮಾಡೆ ಬಹಳ ಸತ್ವವಹುದು.

ಪಾದರಸ, ಹಿಪ್ಪಲಿ, ತಾವರೆಯ ಹೂವು, ಕುರುಟಿಗೆಯ ಹಾಲು, ಜೇನುತುಪ್ಪದಲ್ಲಿ ಕಲಸಿ ಲಿಂಗಲೇಪವಂ ಮಾಡೆ ವಶ್ಯ. ಜಿಲ್ಲದ ಬೀಜವನ್ನು ಗಜುಗದ ರಸದಲ್ಲಿ ತೇಮು ಜೇನು ತುಪ್ಪದಲ್ಲಿ ಮರ್ದಿಸಿ ಲ ತೂಕ ರಸದಲ್ಲಿ ಮರ್ದಿಸಿ ಲೇಪವಂ ಮಾಡೆ ಮೂರ್ಛೆ ವಶ್ಯ.

'ಓಂ ಸ್ವರೂಪಿ ಮೂಲವಾರಾಹಿ, ಕುಮಾರಿ ಚಾಂಡಾಳಿ ಸ್ವಾಹಾ'. ಈ ಮಂತ್ರದಿಂದ ೧೦೮ ಬಾರಿ ಶ್ಮಶಾನದ ಬೂದಿಯ ಮಂತ್ರಿಸಿ ಸ್ತ್ರೀಯ ಮೇಲೆ ತಳಿಯೆ ವಶ್ಯ.

'ತೇಜ ಸ್ವಾಹಾ ಓಂ ವಾರುಣಿ ಸ್ವಾಹಾ' ಎಂಬ ಮಂತ್ರದಿಂದ... ... ... ಪ್ಪ ತಂದು ಬೆಣ್ಣೆಯನ್ನು ಕೂಡಿ ಮರ್ದಿಸಿ ಅದಂ ತನ್ನ ಹೊಕ್ಕಳಿಗೆ ಲೇಪ ಮಾಡಿಕೊಂಡು ಸಂಭೋಗವಂ ಮಾಡೆ ಎಷ್ಟು ಮಂದಿ ಸ್ತ್ರೀಯರಾದರೂ ಮೇಲೆಯಲಕ್ಕು. ಟಂಕಣಕಾರ, ಪಾದರಸ, ಗುಳ್ಳದ ಹಣ್ಣಿನ ರಸದಲ್ಲಿ ಮರ್ದಿಸಿ ಲೇಪವಂ ಮಾಡೆ ವಶ್ಯ. ಕೆನ್ನೈದಿಲಗೆಡ್ಡೆಯ ಹಾಲಲ್ಲಿ ಅರೆದು ಕುಡಿಕೆಯಲ್ಲಿ ಹೂಳಿ ಕೆಳಗಿಕ್ಕಿ ಗೊಬ್ಬರದೊಳಗೆ ಹೂಳಿ ಎಂಟುದಿನವಿರಿಸಿ ತೆಗೆದು ಎಣ್ಣೆಯಲ್ಲಿ ಇಟ್ಟು ಲಿಂಗಲೇಪಂ ಗೈಯ್ಯೆ ಕಾವುಗಾತ್ರವಕ್ಕು. ಪಂಚಬಾಣನ ಗಿಡುವಿನ ಸಮೂಲ, ಹೊರ ಲಿಗ, ಚಿಕ್ಕಹೊರಲಿಗನ ಸಮೂಲ, ಭಂಗಿಯ ಪುಡಿ, ಯೆಡುದುಂಬಿ, ಏಲಕ್ಕಿ, ಇಷ್ಟನ್ನೂ

ಕೂಡಿ ಅರೆದು ಬಲೆಯ ಮೇಣವ ಹಾಕಿ ಅರೆದು ಕರಡಿಗೆಯಲ್ಲಿ ತುಂಬಿಕೊಂಡಿದ್ದು ಸಾಸಿವೆ ಯಷ್ಟು ಸುಣ್ಣದಲ್ಲಿ ಕಲಸಿ ಇಕ್ಕೆ ಸ್ತ್ರೀ ವಶ್ಯ.

ಸ್ತ್ರೀಗೆ ಮಂಡೆಗೆ ಒತ್ತುವ ಎಣ್ಣೆ :—ಸಹಸ್ರವೇದಿ, ಬಳಿಗುರುಗುಂಜಿ ೮ ತೂಕ, ಬಿಳು ಗಾರ ೯ ತೂಕ, ಮರಳು ಉನ್ಮತ್ತ ೯ ತೂಕ, ಮೂತ್ರದಲ್ಲಿ ಮರ್ದಿಸಿ ಒಂದು ದಿನ ಅಗಸರ ಕಲ್ಲಲ್ಲಿ ಇರಿಸಿ ಮೂತ್ರ ಎಣ್ಣೆಯಲ್ಲಿ ಮರ್ದಿಸಿ ಸ್ತ್ರೀಯರ ಮಂಡೆಗೊತ್ತೆ ಸ್ತ್ರೀವಶ್ಯ ತಪ್ಪದು.

ಎರಡು ವರಹ ತೂಕ ದೊಡ್ಡಗುಳ್ಳದ ಹಣ್ಣಿನೊಳಗೆ ಇದ್ದ ಬೀಜವ ತೆಗೆದು ಆ ಹಣ್ಣಿ ನೊಳಗೆ ಆ ರಸವ ತುಂಬಿ ಜೇನುಮೇಣವ ಮುಚ್ಚಿ ಮೂರು ಹೊರೆ ಅರುವೆಯ ಸುತ್ತಿ, ಕೆಮ್ಮಣ್ಣು, ಇದ್ದಲು, ನೆಲ ಹೊಟ್ಟೆಸ್ನು ಹಾಕಿಕೊಂಡು ಸಣ್ಣನಾಗಿ ಅರೆದು ಮೂರು ಹದ ಸಿರುಮಣ್ಣುಗೊಂಡು ನೆಳಲೊಳು ಆರಿಸಿ ಆ ಮೇಲೆ ದೊಡ್ಡ ತಳಿಗೆಯೊಳಗೆ ೫ ಸೇರು ಸುಣ್ಣವ ಹಾಕಿ ಅದರ ಮೇಲೆ ಸಿರುಮಣ್ಣುಗೊಂಡು ಇರಿಸಿ ಅದರ ಮೇಲೆ ೫ ಸೇರು ಸುಣ್ಣದ ಹರಳು ಸುರಿದು ಆ ಹೆಗ್ಗುಳ್ಳದ ಲೇಪಂ, ರಸದ ಲೇಪ, ಗುಳ್ಳದ ಲೇಪ ಮಾಡಿ ಸ್ತ್ರೀಯ ಭೋಗಿಸಿ ೩ ದಿನ ಕಾಣಿಸಿಕೊಳ್ಳಬೇಡ, ಬರುವಳು. ಸೈಂಧುಪ್ಪು, ಹುಣಸೇಹಣ್ಣಿನ ನಾರು, ನಿಂಬೇತಿರುಳು, ಇಪ್ಪಿಬೀಜ, ಇವಂ ನಿಂಬೇಹುಳಿಯಲ್ಲಿ ತೇದು ಲೇಪವು ಮತ್ತು, ಬಿಳಿಗುಂಜಿ, ಮುತ್ತುಗದ ಬೀಜ, ಇಪ್ಪಿಬೀಜ, ಹೆಂಗರೇಬೀಜ, ಇವಂ ಬೆಣತಕ್ಕಿಗಂಜಿಯಲ್ಲಿ ಅರೆದು ಆರಿಸಿ ನೀರಲ್ಲಿ ತೇದು ಲೇಪ ೩ ಹದವು. ಕೊಳವಳಿಕೆಬೀಜ ೧ ತೂಕ, ಹಂಗರೆಬೀಜ ೧ ಸೊಲ್ಲಗೆ, ಪುರುಷ ರತ್ನ ಸೊಲ್ಲಗೆ, ಜಾಯಿಕಾಯಿ ೧ ತೂಕ, ಪತ್ರೆ ಗ ೧ ತೂಕ, ಲವಂಗ ಗ ೧ ತೂಕ, ಮದ್ದು ಗ ೧ ತೂಕ ಪನೆಬೆಲ್ಲದಲ್ಲಿ ರೊಟ್ಟೆಯ ಸುಟ್ಟು ಗಜ್ಜುಗದ ಪ್ರಮಾಣ ಮೆಲ್ಲುವುದು. ಮಧುರಾಹಾರ ಪಥ್ಯ: ನಿಂಬೇಹುಳಿಯಿಂ ಶಾಂತಿ. ಕೊಳವಳಿಕೆ ಬೀಜ, ಹಂಗರೇಬೀಜ, ಪುರುಷರತ್ನ, ಇವ ಸಮ ಯಪ್ಪಿಬೀಜ, ಪನೆಬೆಲ್ಲ ೩, ಎಳನೀರಲ್ಲಿ ಅಡಿಸಿ ರೊಟ್ಟಿ ಸುಟ್ಟು ಗಜ್ಜು ಗಪ್ರಮಾಣ ಸೇವಿಸುವುದು. ಪಥ್ಯ ಮಧುರಾಹಾರ. ಲವಣಾಮ್ಲ ವರ್ಜ್ಯ. ನಿಂಬೇಹುಳಿಯಿಂ ಶಾಂತಿ. ಒಂದು ಬೆಂದ ನುಗ್ಗೇಕಾಯಿಗೆ ಗ ೧ ತೂಕ ಮದ್ದು ಹಾಕಿ ಅದರ ಮೇಲೆ ಬೆಲ್ಲಗಣಿಕೆ ರಸವ ಬಿಟ್ಟು ೩ ತೊಟ್ಟು ಕೈಯೆಣ್ಣೆಯ೦ ಬಿಟ್ಟು ಕೆಂಡದಲ್ಲಿ ಬೇಯಿಸಿ ಕಾಯ ಅಗಿದು ರಸವ ನುಂಗಿ ಸಿಪ್ಪೆ ಉಗುಳುವುದು. ಪಥ್ಯ ಮಧುರಾಹಾರ. ಲವಣಾಮ್ಲ ವರ್ಜ್ಯ. ಹುಳಿಯಿಂದ ಶಾಂತ. ೧ ಸೊಲ್ಲಿಗೆ ವಾದಕ್ಕಿಯನ್ನು ಉದಯದಲ್ಲಿ ಎಣ್ಣೆಯಲ್ಲಿ ನೆನೆಯಿಕ್ಕಿ ಪ್ರಸ್ಥಮಾನದಲ್ಲಿ ಮೆದ್ದು ಮೂರು ತುತ್ತು ಹಾಲೋಗರ ಪಥ್ಯ.

## D 1361 & D 1366

ವಶ್ಯಕ್ಕೆ :—ಗೋರೋಚನ, ಅಡಕೆಯ ಪ್ರಮಾಣಂಗೊಂಡು ಬೆಣ್ಣೆ, ಮೊಸರಲ್ಲಿ ಗುಳಿ ಗೆಯ ಮಾಡಿ ಮುಖಕ್ಕೆ ಪೂಸೆ ಸರ್ವಜನವಶ್ಯ. ಅದ ಮೈಗೆ ಪೂಸೆ ಸ್ತ್ರೀವಶ್ಯ. ಅದು ಬಾಯೊಳಿರೆ ಜನವಶ್ಯ.

ಚಕ್ಷುಬಂಧನಕ್ಕೆ :—ಕೋಳಿವಿಷ್ಟೆಯ ಜೇನುತುಪ್ಪದಲ್ಲಿ ತಿಲಕವಿಡೆ ಚಕ್ಷುಬಂಧನ.

ದನದ ಹುಳು ಉದುರಲು :—ಬೆಳಲಕ್ಕಿಯ ಬೇರು ನೋನದಲ್ಲಿ ತಂದು ಪೊಟ್ಟಣ ಮಂ ಕಟ್ಟಿ ದನದ ಕೊಟ್ಟಿಗೆಯಲ್ಲಿ ಕಟ್ಟಲು ದನದ ಹುಳು ಉದುರುವುದು.

ಮೈಯನ್ನು ಕೆಂಪಾಗಿಸಲು :—ಜಗಜೆಯ ಬೀಜ, ಅರಸಿನ, ನಿಂಬೆಯ ಹಣ್ಣಿನ ರಸ ದಲ್ಲಿ ತೇದು ಮೈಗೆ ಪೂಸೆ ಮೈ ಕೆಂಪಾಗುವುದು.

ವಾದಿ ಮೂಗನಾಗಲು :—ಆಲದ ಬಿಳಿಲ ತುದಿಯು ತಂದು ಎಳದಾಗಿ ಇದ್ದ ಮೂರು ಹಿಡಿ ಹಿಡಿಹಿಡಿಕೆಯ ಸೊಪ್ಪು, ಮೂರು ಹಿಡಿ ನವಿಲುಗರಿ, ಮಯೂರಶಿಖಿ, ಇವ ತಿಲಕವಿಡೆ ವಾದಿ ಮೂಗನಕ್ಕು.

ವಶ್ಯಕ್ಕೆ :—ಆಕಲಕರೆ, ಪಚ್ಚೆಕರ್ಪೂರ, ಪುಣುಗು, ಇವುಗಳ ಲೇಪನಂ ಮಾಡಿದರೆ ಸ್ತ್ರೀವಶ್ಯ.

ದನ ಬರುವುದಕ್ಕೆ :—ಬಿಳಿಯ ಹೂಲಿಯ ಕೋಲಂ ಎರಡುಗೈದು ಅದಕ್ಕೆ ಹುತ್ತದ ಮೇಲಣ ಅಂಕೋಲೆ, ದಾಗುಡಿ, ಸುಡುಗರೆ, ಅವರೆ, ಈ ನಾಲ್ಕನ್ನೂ ಕೈಯಲ್ಲಿ ' ಓಂ ರಂ... ರ...' ಎಂದು ಮಂತ್ರಿಸಿ ಪೂಸುವುದು. ಆ ಕೋಲಿಂದ ಕೆಲವು ದನವ ಕೋಲು ಹಿಡಿದು ಹಾಕಿದರೆ ಎಲ್ಲಾ ದನವೂ ಹಿಂದೆ ಹತ್ತಿ ಬರುವುದು.

ಸ್ತ್ರೀವಶ್ಯಕ್ಕೆ :—ಕರ್ಪೂರ, ಗೋರೋಚನ, ಉನ್ಮತ್ತ, ಬಿಳಿಯ ಸಾಸಿವೆ, ಅಗಸೆಯ ಹೂವಿನ ರಸ, ಗುಳ್ಳದ ಬೀಜ, ಅಳಲೆ, ಮಯೂರಶಿಖಿ, ಮ ...... ಲ್ಲಕೆ, ಜೇನುತುಪ್ಪ, ಹಿಪ್ಪಲಿ, ಯಷ್ಟಿಮಧುಕ, ಪಾರಿವಾಣದ ಹಿಕ್ಕೆ, ಕಾಂತಭಸ್ಮ, ಮಹಾರಾಷ್ಟ್ರ ಮೊದಲದ ರಸ, ಜೇನುತುಪ್ಪ, ಇವು ಸಮಾನ.........ಲತ್ವ ದೃಢ.

ವಶ್ಯಕ್ಕೆ :—ಗೋರೋಚನ, ನೀಲಿ, ನವಣೆ, ಪುಷ್ಯನಕ್ಷತ್ರದಲ್ಲಿ ತಂದು ಶಂಖಪುಷ್ಪಿ, ಉನ್ಮತ್ತದ ರಸದಲ್ಲಿ ಮರ್ದಿಸಿ ತಿಲಕವಿಟ್ಟು ತನಗೆ ಬೇಕಾದವಳ ನೋಡಲು ದೃಷ್ಟಿದ್ರಾವಣ.

ಆಟ್ಟ ಹತ್ತುವ ಬೀಜ, ಕರಿಯ ಕನಕದ ಬೀಜ, ಇವಂ ತನ್ನ ಮೂತ್ರದಲ್ಲಿ ಅರೆದು ಸುಣ್ಣದಲ್ಲಿ ಇಕ್ಕೆ ಸ್ತ್ರೀ ವಶ್ಯ.

ವಿಷ್ಣುಕ್ರಾಂತಿಯಂ ಮೋನದಲ್ಲಿ ತಂದು ಹಸಿ ಹಾಲಲ್ಲಿ ಅರೆದು ಕೈಯಂ ಪೂಸಿ ತನಗೆ ಬೇಕಾದವಳ ಕೈಯ ಮುಟ್ಟೆ ಹಸ್ತದ್ರಾವಣ.

ವಿಷ್ಣುಕ್ರಾಂತಿಯಂ ಅಂಬಿಲದಲ್ಲಿ ಕಲಸಿ ಸುಣ್ಣವಾಗಲೀ,ಎಣ್ಣೆಯಾಗಲೀ ಇಕ್ಕೆ ಸ್ತ್ರೀವಶ್ಯ.

ಪಾತಾಳಗರುಡನ ಬೇರಂ ಆದಿತ್ಯವಾರ ಮೋನದಿಂದ ತಂದು ಹಾಲಲ್ಲಿ ನೆನೆಯಿಕ್ಕಿ ಉಂಗುರವ ಕಟ್ಟಿ ಕರಿಯ ನೂಲನ್ನು ಸುತ್ತಿ ಆ ಉಂಗರ ಮುಟ್ಟಿಸೆ ಸ್ತ್ರೀವಶ್ಯ.

ಆರ್ದ್ರದಲ್ಲಿ ಕೆಂಪಿನ ಕಣಿಗಿಲೆಯ ಬಂದಣಿಕೆಯ ತಂದು ಕೈಯಲ್ಲಿ ಕಟ್ಟೆ ಸರ್ವ ಜನ ವಶ್ಯ.

ಸ್ವಾತಿಯಲ್ಲಿ......ಸಿಗೆಯ ಬಂದಣಿಕೆಯ ಕೈಯಲ್ಲಿ ಕಟ್ಟೆ ಸ್ತ್ರೀವಶ್ಯ.

ಪುಷ್ಯನಕ್ಷತ್ರದಲ್ಲಿ, ಮೇಣು ರೇವತಿಯಲ್ಲಿ ಈಶ್ವರಿಯ ಬೇರಂ ತಂದು ಮುಖನುಂ ಪೂಸೆ ಜನವಶ್ಯ.

ಆ ಬೇರಂ ಗೋರೋಚನ, ಕಾದ ಇಟ್ಟೆಯ ಬೇರು ತಿಲಕಂ ಮಾಡೆ ಜನವಶ್ಯ.

ಖಡ್ಗಸ್ತಂಭನಕ್ಕೆ :—ಗರುಗ, ಹುರುಳಿ, ನೀಲಿ, ಈ ಮೂರನ್ನು ಜವಳಂಗೊಳ್ಳಿ ಕಳರಿ ಎಂಟು ಹಲ ನೀರಿಂದ ನೆನೆಯಲಿಡುವುದು. ಬಿಳಿಯ ಕೊಳವಳಿಕೆಯ ಸಮೂಲವಂ ತಂದು ನೀರಲ್ಲಿ ಅರೆದು ಕುಂಬಳಕಾಯ ಪುಷ್ಪಮಂ ನೋಡುವುದು. ಇರಿದರೆ ಹರಿಯದು.

ಇದಿರುಕಣ್ಣು ಕೆಡುವುದಕ್ಕೆ :—ಅರಸಿನ, ಕುಂಕುಮ, ಅರಿದಳ, ಗೋರೋಚನ, ಶಂಖ ಪುಡಿ, ಇವಂ ಸಮಾನಂಗೊಂಡು ಕದಡಿ ನೊಸರು ತುಪ್ಪದಿ ಮರ್ದಿಸಿ ತನ್ನ ಅಂಗಕ್ಕೆ ತಿಲಕ ವಿಡೆ ಇದಿರುಕಣ್ಣು ಕೆಡುಗುಂ.

ಜೂಜು ಗೆಲುವುದಕ್ಕೆ :—ಪಾದರಸ, ನಾಂಗುಲಿಕ, ಭೂಸಕ್ಕರೆ, ಇವಂ ಸಮಾನಂ ಗೊಂಡು ಅರೆದು ಕೈಯಂ ಪೂಸಿ ಹಾಸಂಗಿಯಂ ಹಿಡಿದು ಆಡಲು ಜೂಜು ಗೆಲುವುದು.

## D 1372 & D1373

ದೀವಿಗೆಗೆ :—ವಿಷ್ಣುಕ್ರಾಂತಿಯ ಸಮೂಲವಂ ಎಣ್ಣೆಯಲ್ಲರೆದು ಬೆರಳಿಂ ದೀವಿಗೆಯ ಹೊತ್ತಿಸಬಹುದು.

## D 1386

ಸರ್ಜನ ವಶ್ಯ, ರಾಜವಶ್ಯಕ್ಕೆ :—

ಶ್ವೇತಾರ್ಕಮೂಲಂ ಶಿಖಿವಿಷ್ಣುಕ್ರಾಂತಿಗೋರೋಚನಂ ಕುಂಕುಮಚಂದನಂ ಚ ।
ಏತಾನಿ ಸದ್ಯಸ್ತಿಲಕಂ ಲಲಾಟೇ ತ್ರಿಲೋಕವಶ್ಯಂ ಮದನಾವೃತಂ ಚ ॥

ತಿಲಕಕ್ಕೆ :— ಕರೀಆಕಳದ ಪಂಚಗವ್ಯ, ಬಿಳಿಗಣಜಿಲ ಬೇರು, 'ಯದದ್ಯಕಚ್ಚ ವೃತ್ರಹನ್' ನಿತ್ಯ ಹತ್ತು ಆವೃತ್ತಿ ಜಪ. ಈ ಕ್ರಮದಲ್ಲಿ ಹೇಳಿದ ಮಂತ್ರದಲ್ಲಿ ಇಟ್ಟು ಕೊಂಬೋಣ.

ಶ್ರೀ ಗುರುವೇಗತಿ. ಇಂದ್ರಜಾಲವಂ ಪೇಳ್ವೆ:—ಕೊಡಸಿಗೆ ಬೀಜ, ಅಂಕೋಲೇಬೀಜ, ಇವ ಸುರುಗಿಯಲ್ಲಿ ಇಕ್ಕಿ ಆ ಸುರಗಿಯ ತಲೆಕೆಳಗಾಗಿ ಬಿಸಿಲಲ್ಲಿ ಇರಿಸೆ ತೈಲ ಬರುವುದು. ಆ ತೈಲವ ಭರಣಿಯಲ್ಲಿ ಮಡಗಿ ಆ ತೈಲವಂ ಕಟರಿಗೆ ಚಿಮ್ಮಿಸಿ ... ... .... ... ... ಆ ತೈಲವಂ ಕೈಯಂ ಮುಟ್ಟಿಸಿ ಸ್ತ್ರೀಯರ ಕೈಯ್ಯಂ ಪಿಡಿಯೆ ವೊಂದುಮ ... ... ... ... ತೈಲವಂ ಪೂಸಿ ಕಿವಿಯಂ ಪಿಡಿಯೆ ನೊಲವಹುದು. ಮರದ ... ... ... ...ದು ನೀರ ತಳಿಯೆ ಮಾಣುವುದು. ಆನೆ, ಕುದುರೆ ನಾನಾರೂಪವಹುದು. ಅದ ಚಿಮ್ಮಿಸೆ ಜಡದ ರೂಪ ವೆಲ್ಲ ಚೈತನ್ಯವಹುದು. ನೀರ ತಳಿಯೆ ......... ಮಾಣುವುದು. ಗೋಸಮಾನ ಆದವಳು ಕರುಮಂಡಲಕ್ಕೆ ಹೋಪುದು.

ಶ್ರೀ ಗುರುವೇ ಗತಿ. ವಜ್ರತೈಲವ ತೆಗವರೆ:—ನರವಿಷ್ಟೆ, ಕೊಡಗವಿಷ್ಟೆ, ನರಿಯ ವಿಷ್ಟೆ, ಕಾಳಹಯವಿಷ್ಟೆ, ಸುವರ್ಣವಿಷ್ಟೆ, ... ... ... ... ಯವಿಷ್ಟೆ, ಸುಡುಪುಟವಿಕ್ಕಿ ಆ ತೈಲವಂ ತೆಗೆದು ಆ ತೈಲದಿ ದೀಪವಂ ಹೊತ್ತಿಸಿ, ಆ ತೈಲವಂಬುಕ ಹೊಡೆದವರಿಗೆ ಇಡೆ ಒಂದು ನಾಡಿ ಹೋಪುದು. ಆ ತೈಲವಂ ಇಡೆ ಪಜ .... .... ವಂ ಇರುವಲ್ಲಿಟ್ಟು ಪೋಗೆ ಭಯವಿಲ್ಲ. ತನ್ನ ಮಂತ್ರಿಸಿ ಕಟ್ಟಿಕೊಂಡು ಆ ತೈಲವಂ 'ಮರುದ್ಯ ತೂ... ... ... ಮಯೂರವೇಣಿ ಯಾಂತ್ರಿ ಓಂ, ಹ್ರೀಂ, ಪ್ರಳಯಭೈರವಾಯ, ಹುಂ ಫಟ್ ಸ್ವಾಹಾ' .... ... ... ... ಬೂರಾದ ಆವೆ ಸಹ ಬಾರದು. ಆ ತ್ರಿವರ್ತಮಾನಗಳಾಗಲೀ ಹೇಳುವನು. ಉಚ್ಚರಿಸಲು ಆಗಲೇ ಹೆಣ್ಣು

ದೇವತೆಯು ಕಣ್ಣಿಗೆ ಇರುಳು ಸಂಜೆ ಮುಗಚಿಸಿ... ... ... ... ...ಮುರಿಯುವುದು. ಬೆತ್ತಲೆ ಹರಿದು ಬಿಸುಡುವುದು. ತೊಳೆದರೆ ಮಾಣುವುದು. ಆ ತೈಲವಂ ಅಂಕೋಲೆ, ನೆಲದಾಳಿಸೆಟ್ಟು, ಬಿಳಿಯ ಬೇರು, ಬ್ರಹ್ಮದಂಡೆಯ ಪಂಚಕವುಂ, ಬಿಳಿಯ ಅಗಸೆ, ಬಿಳಿಯ ಗರಿಕೆ, ನಂದಿವರ್ತ, ಕಂಚುಕಾರ, ಪಾದರಿ, ಇನಿತರ ಬೇರು ಚೂರ್ಣಂ ಮಾಡಿ ಆಕಳದ ಮಜ್ಜಿಗೆಯಲ್ಲಿ ಹಾಕಿ ಅಂಬಿಲ ಯಾ ಸಟ್ಟು ಜೇನು ಹಾಕಿದರೆ ಅದಕ್ಕೆದುರನಾಡದು. ಇದು ತಪ್ಪದು. ಕುಂಬಳ ಕಾಯೊಳಗಿಕ್ಕಿ ಪ್ರತಿ ಸುಡುವುದು.

ರಸವ ನಿಲ್ಲಿಸುವ ಮಂತ್ರ :—“ಒಂಬಾಳು, ಗುರುಬಾಳು, ಒಡೆದರೆ, ಬಡೆದರೆ, ಹರಿಯಾಣೆ, ಬ್ರಹ್ಮನಾಣೆ,” ಇನಿತು ಅಂಗೈಯ್ಯಲಿರಿಸಿ ಐದು ಬಾರಿ ಮಂತ್ರಿಸಿ ನೊಗಸಿಟ್ಟು ಹೆಸರು, ಹಾಲು, ಬೆಣ್ಣೆಯ ಕೊಂಬುದು. ರಸವ ಕೊಂಬುದು. ರಸವ ತೆಗೆಯಬೇಕಾದರೆ ನಿಂಬೆಯ ಹುಳಿಯ ಕಲ್ಲುಪ್ಪು ಕೊಂಬುದು.

ಇಂದ್ರಜಾಲ:—“ಓಂ ಪಿಶಾಚಿದೇವಿ ಸ್ವಾಹಾ” ಈ ಮಂತ್ರಮಂ ಉಚ್ಚರಿಸಲು ಇದ ೨೫ ಸಲ ಮಂತ್ರಿಸುತ್ತಿರೆ ಆ ದೇವತೆ ಹೊನ್ನು ಮತ್ತು ಹಣವ ಕೊಡುವಳು. “ಓಂ ಕರ್ಣ ಪಿಶಾಚಿನಿ, ಪಿಂಗಳಲೋಚನಿ,’ ಈ ಮಂತ್ರದಿಂ ಪಿಂಡೆಯಂ ತಿಂದು ಒಂದು ಲಕ್ಷ ಜಪ ಮಾಡೆ ಕರ್ಣಪಿಶಾಚಿ ಬಂದು ಕಿವಿಯೊಳು ಬಗೆದ ಕಾರ್ಯವುಂ ತ್ರಿಲೋಕದೊಳು ನಡೆದುದಖಿಲಂ ಪೇಳುಂ.

“ಓಂ ಪಿಶಾಚಿದೇವಿ ಸ್ವಾಹಾ” ಈ ಮಂತ್ರದಿ ಉಚ್ಚರಿಸಲು ಇದು ಕೃಷ್ಣಚತುರ್ದಶಿ ಮೊದಲಾಗಿ ಮತ್ತೊಂದು ಕೃಷ್ಣಚತುರ್ದಶಿ ತನಕ ಜಪಂಗೈಯ್ಯೆ ಆ ದಿನ ಇರುಳು ಆ ದೇವತೆ ಪ್ರತ್ಯಕ್ಷಮಕ್ಕು. ನಿತ್ಯವೂ ಪಣ ಕೊಡುವಳು.

“ಓಂ ಕಾಳಿದೇವಿ ಸ್ವಾಹಾ” ಈ ಮಂತ್ರದಿ ಸೋಮವಾರ ಬಿಳಿಯ ಗಿರಿಕರ್ಣಿಕೆಯ ಬೇರ ಕರಿಯ ಕನಕನ ರಸದಲ್ಲಿ ತಿಲಕವನಿಡೆ ಕಾಣಿ:ತಮಕ್ಕು.

ಪರ್ಪಟ, ಅರಿಸಿನವಂ ಅಕ್ಕಿಗಚ್ಚಿನಲ್ಲರೆದು ಸಕ್ಕರೆ ಬೆರಸಿ ನಸ್ಯಂಗೈಯ್ಯೆ ನವಗ್ರಹ ಬಿಟ್ಟುಪೋಪುದು.

ಅಂಗುರ, ಬ್ರಹ್ಮದಂಡೆ, ಬೆಣ್ಣೆಗರುಗ, ಇಷ್ಟಂ, ಇವ ಸಮಾನಂಗೊಂಡು ಮದಣೆಯ ಕಣ್ಣ ಪೂಸೆ ಮದಣೆ ಅಂಜಗು. ಅದರಿಂ ತಿಲಕವಿಡೆ ಬ್ರಹ್ಮರುದ್ರನಾದೊಡಂ ಅಂಜಗು. ನಸ್ಯಗೈಯ್ಯಲು ಒಂದು ... ... ...

ಕರಿಯ ನಾಯ ಹುಳು .......... ತೋಳಿ .........ಆ ಕೋಳಿಯ ವಿಷ್ಠೆಯ ತಿಲಕವಿಟ್ಟು ಉಂಬ ಪಂದಿಯ ನೋಡಲು ಆಗಲೇ ಕ್ರಿಮಿಯಕ್ಕು. ಆ ತಿಲಕವಂ ತೊಡೆಯಲು ಬಾಯ.ಲ ... ... ... ... ... ...ಕೋಟಾ ಈ ಸ್ವಾಹಾ’ ಎಂದು ಕೃಷ್ಣ ಚತುರ್ದಶಿಯಲ್ಲಿ ನವಿಲ ತಲೆಯೊಳಗೆ ಬಸ್ಸಿಯ ಬೀಜವ ಇಟ್ಟು ನೆಲದಲ್ಲಿ ಬಿತ್ತಿ ಸಲಹಿ ಆ ಮರದ ನಾರನ್ನು ದಾಳವ ಮಾಡಿ ಕೊರಳಲ್ಲಿ ಕಟ್ಟಲು ನವಿಲಂತಕ್ಕು. ಈ ಪರಿಯಲ್ಲಿ ನಾಯಿ, ನರಿ, ಹಾವು, ಕರಿ ಆಡುಗಳ, ತಲೆಯಲ್ಲಿ ಕಟ್ಟಲು ಆ ಜಂತುಗಳಕ್ಕು.

ಕರಿಯ ಬೆಕ್ಕಿನ ತಲೆಯೊಳಗೆ ಚಿಟ್ಟವುಡಲದವ ಬಿತ್ತಿ ಬೆಳೆದು ಆ ಬೀಜವನ್ನು ಬಾಯೊಳಗೆ ಹಾಕಿಕೊಳ್ಳೆ ಆ ಬೆಕ್ಕಿನಂತಕ್ಕು.

ಕೆಂಚಿನ ಗುಂಜಿಯ ಹೆಂಗಸಿನ......ಮಲದಲ್ಲಿ ಬಿತ್ತಿ ಬೆಳೆದು ಆ ಬೀಜವನ್ನು ತೆಗೆದು ತಿಲಕವಿಡೆ ಪುರುಷ ಸ್ತ್ರೀಯಕ್ಕು. ಹೆಗ್ಗಣನ ಹಿಡಿದು ಅದರ ಮೇಗಣ ಇದು ಹನ ... ... ಯಲ್ಲಿರಿಸಿ ಮೂರುದಿನ ಉಪವಾಸವಿರಿಸಿ ಮಾಯಿಸಿ ಅದರ ವಿಷ್ಟೆಯ ಮನುಷ್ಯನ ಮೂಗಿಗೆ ತೊಡೆಯೆ ಮಾಣ್ಗುಂ.

ಮಂಗಳವಾರ ಸತ್ತವರ ಸುಟ್ಟ ಇದ್ದಲಿಯನರೆದು ಕೈಯ್ಯಲ್ಲಿ ಪಿಡಿದುಕೊಂಡು ನೀರ ನೀಜಲಹುದು.

ಶಸ್ತ್ರಸ್ತಂಭನಕ್ಕೆ:—ಕೃಷ್ಣಸರ್ಪ ಕಚ್ಚಿದ ಮಾನವನ ತಲೆಯ ಮಾಂಸವನು ಆ ಹಾವಿನ ರಕ್ತದಲ್ಲಿ ಅರೆದು ಶಸ್ತ್ರಂಗಳಿಗೆ ಲೇಪಿಸೆ ಶಸ್ತ್ರಸ್ತಂಭನ. ಹಾಲಾಹಲವೆಂಬ ವಿಷ, ವತ್ಸನಾಭಿಗೆ ಕೋಳಿಕುಟುಮನ ಗೆಡ್ಡೆ, ಚಿತ್ರಮೂಲನ ಬೇರು, ನೆಲದೊಳು ಜೇಡನ ಹುಳುವಿನ ರಕ್ತದಲ್ಲಿ ಉಡುವನರೆದು ಶಸ್ತ್ರಲೇಪವಂ ಮಾಡಲು ಶಸ್ತ್ರಸ್ತಂಭನ.

ವಶ್ಯಕ್ಕೆ:–ಸಿದ್ಧದಿನದಲ್ಲಿ ಮಯೂರಶಿಖಿ, ವಿಷ್ಣುಕ್ರಾಂತಿ, ಸಹದೇವಿ ಈ ೩ ಬಂಗಾರದಲ್ಲಿ ಹುದುಗಿ ಅಷ್ಟವಿಧಾರ್ಚನೆಯ ಮಾಡಿ ಅಂಗುಲಿಯಲ್ಲಿ ಇಕ್ಕಿ ಹೋಗೆ ಸರ್ವಜನವಶ್ಯ.

ಶ್ರೀಗಂಧ, ಗೋರೋಚನ, ರಾಜಾನ್ನದಕ್ಕಿ, ನಂದ್ಯಾವರ್ತ, ಇವಂ ಸಮಂಗೊಂಡು ಚೂರ್ಣವಂ ಮಾಡಿ ಆಲದ ತಿಗೆಯೊಳಗಿಕ್ಕಿ ಬತ್ತಿಯ ಮಾಡಿ ಕೆಂದಾವರೆನೂಲ ಸುತ್ತಿ ಗರುಗದ ರಸದಲ್ಲಿ ಭಾವಿಸಿ ಒಣಗಿಸಿ ಕಪಿಲೆ ಹಸುವಿನ ತುಪ್ಪದಲ್ಲಿ ಕೃಷ್ಣಾಷ್ಟಮಿಯಲ್ಲಿ ಕಾಡಿಗೆ ಹಿಡಿದು ಹಚ್ಚಲು ರಾಜವಶ್ಯ, ಸ್ತ್ರೀವಶ್ಯ, ಪುರುಷವಶ್ಯ.

ಶ್ರೀಗಂಧಮಂ, ಗೋರೋಚನಮಂ, ಕಸ್ತೂರಿ, ಚಂದನ, ಕೋಷ್ಠ, ಮುತ್ತು, ಹವಳ, ತಗರ, ಏಲಕ್ಕಿ, ನಾಗಕೇಸರ, ಮಣಿಶಿಲೆ, ಮಣಿಮಂ ... ... ದಂ, ಸೀಸ, ಕೃಷ್ಣೆ, ತಪಸಿ, ಸುರದಾರು, ಕೆನ್ನೈದಿಲಗೆಡ್ಡೆ, ಲವಂಗ, ಶ್ವೇತಾರ್ಕ, ದೇವದಾರು, ತಾಳಕ, ಬನ್ನಿ, ದೇವದಾರು, ಉತ್ತರಣಿ, ... ... ... ...ಎತ್ತುನಾಲಿಗೆ, ವಿಷ್ಣುಕ್ರಾಂತಿ, ಇವಂ ಒಂದೊಂದಾಗಿ ಮರ್ದಿಸಿ ತಿಲಕವಿಡೆ ತ್ರೈಲೋಕ್ಯಮೋಹಿನಿ.

ಶುಕ್ಲಸ್ತಂಭನಕ್ಕೆ :—ಅಂಕೋಲೆಯ ಹಣ್ಣ ಕಾಳಹಸುವಿನ ತುಪ್ಪದಲ್ಲಿ ಸೊಡರ ಎತ್ತಿ ಕೊಡಲು ಶುಕ್ಲಸ್ತಂಭನ.

ತಾರೇಹಗಿನಂ ನೀರಲ್ಲರೆದು, ಪೊಕ್ಕುಳಿಗೆಲ್ಲ ಏರ ತೊಡೆಯೆ ಶುಕ್ಲಸ್ತಂಭನ.

ವಶ್ಯಕ್ಕೆ :— ಪಾದರಸ, ಸೂಜಿಕಲ್ಲು, ಪಿಟಲುಪ್ಪು, ಸದ್ಯಕ್ಷಾರ, ಯವಕ್ಷಾರ, ಟಂಕಣ, ಹೆಗ್ಗುಳ್ಳಹಣ್ಣಿನ ರಸ, ವೀಳೆಯದೆಲೆಯ ರಸ, ಗಜಪಿಪ್ಪಲಿ, ಯಷ್ಟಿಮಧುಕ, ಪಚ್ಚಕರ್ಪೂರ, ಇವಂ ಸಣ್ಣನಾಗರೆದು ಜೇನುತುಪ್ಪದಲ್ಲಿ ಅಂಗಲೇಪಂ ಮಾಡುವುದು. ಸ್ತ್ರೀವಶ್ಯ, ಮೋಹನ.

ಅಗಸೆಯ ಹೂವ ಹುಡಿ ಮಾಡಿ, ಕಿರುಕಸಾಲೆರಸದಲ್ಲಿ ತೇದು, ಲಿಂಗಲೇಪಂ ಮಾಡಿ ಕೊಡೆ ವಶ್ಯ. ಕುರುಟಿಗೆಯ ಬೀಜ, ಏಲಕ್ಕಿ, ಬೆಳುಗಾರವಂ ಸಮಾನಮಂ ಕೂಡಿ, ಕರಿಯಾವಿನ ತುಪ್ಪದಲ್ಲಿ ಲಿಂಗಲೇಪಂ ಮಾಡಲು ಸ್ತ್ರೀಯರಿಗೆ ಕುಂಭದ್ರೋಣ ತಪ್ಪದು.

—೦-೦—

GENERAL INDEX

# ಸಾಮಾನ್ಯ ಅಕಾರಾದಿ ಸೂಚಿ

---

ಸ

# SUBJECT INDEX

# ರೋಗಗಳ ಅಕಾರಾದಿ ಸೂಚಿ

ಪುಟ

### ಅಪಸ್ಮಾರ



### ಅಮ್ಲಪಿತ್ತ



### ಅರೋಚಕ



### ಅಶ್ಮರೀ



### ಅರ್ಶೋರೋಗ



### ಉದರರೋಗ

### ಗ್ರಹಣಿ



### ಛರ್ದಿ



### ಜ್ವರ

## ERRATA

# ಶುದ್ಧಾಶುದ್ಧಪತ್ರಿಕೆ

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 4 | 16 | ಚಿಟ್ಟ್ಬಾಕಾಡಲ | ಚಿಟ್ಟ್ಬಾಡಲ |
| 7 | 23 | ಅರೆದು ಬಿಕ್ಕಲು | ಅರೆದು ಕೊಳ್ಳಿ ಬಿಕ್ಕಲು |
| 11 | 19 | ರಕ್ತ ಪಿತ್ತ | ರಕ್ತಪಿತ್ತ |
| 16 | 9–10 | ಕನಕಂಧರರಸ | ಕನಕಸುಂದರರಸ |
| 17 | 9 | ಗೆರಹರಳ | ಗೇರಹರಳ |
| 20 | 8 | ಕೆಡಸುಗುಂ | ಕೆಡಿಸುಗಂ |
| 23 | 6 | ಬೀಳಿನ ಆಲದ ಬಿಳಿದ | ಆಲದ ಬೀಳಿನ |
| 26 | 8 | D-1373 & D-1374 | D-1371 & D-1374 |
| 27 | 23 | ದಾಹಮಸೃಗ್ಧರಾನ್ | ದಾಹಮಸೃಗ್ದರಾನ್ |
| 34 | 2 | ಹೋವಿನ | ಹೂವಿನ |
| 36 | 7 | ೧ ತೂಕ, | ರಸ ೧ ತೂಕ, |
| ,, | 17 | ಸವಣೀಗೆಡ್ಡೆ | ನವಣೀಗೆಡ್ಡೆ |
| ,, | 20 | ಕೆಡಸುಗಂ | ಕೆಡಿಸುಗಂ |
| 38 | 12 | ಪಿತ್ಥ | ಪಿತ್ತ |
| 39 | 20 | ಇವುಗಳು | ಇವುಗಳ |
| 41 | 29 | ಪಂಚಾಕ್ಷರ | ಪಂಚಕ್ಷಾರ |
| 42 | 7 | ಬೆಳದಕಿಲ | ಬೆಳಡಕಿಲ |
| ,, | 10 | ಕಿರುಸಾಲೆ | ಕಿರುಕಸಾಲೆ |
| 48 | 12 | ನೆಲವ● | ನೆಲಾವರೆ |
| 49 | 16 | D-1373 & D-1374 | D-1371 & D-1374 |
| 50 | 15 | D-1391 & D-1396 | D-1392 & D-1396 |
| 57 | 30 | ಹರಿದ್ವಾರವಟಕ | ಹರಿದ್ರಾವಟಕ |
| 58 | 8 | ಇಷ್ಟಿಲ | ಅಷ್ಟಿಲ |
| ,, | 9 | ನಾಸವಾತ, ಶೂಲೆ | ಕಾಸ, ವಾತಶೂಲೆ |
| 60 | 21 | D-1359 | D-1350 |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 61 | 23 | ಸರ್ಪವಿಷಹರ | ಸರ್ವವಿಷಹರ |
| 63 | 28 | ಕಿರುಗುನಟ | ಕಿರುಗುಮಟ |
| 64 | 22 | ಹಲಕುರುವಿಗೆ | ಹಲ್ಲ ಕುರುವಿಗೆ |
| 65 | 3 | ಅಪಸ್ಮಾರ | ನಾಡೀಪರೀಕ್ಷೆ |
| ,, | 9 | ಸಮ್ಯಕ್ಸ | ಸಮಜ್ಞ |
| 68 | 29 | ಪದಕ | ಪದ್ಮಕ |
| 71 | 27 | ತೀದಿ | ತೀದು |
| ,, | 28 | ಹಿಟ್ಟೆಳಿಕನ | ಹಿಟ್ಟೆಳಿಕನ |
| 76 | 21 | ಹೊಟ್ಟೆಶೂಲಿ | ಹೊಟ್ಟೆಶೂಲಿ |
| 78 | 3 | R-1361 | D-1361 |
| ,, | 7 | ಇದಿರೋಕರಿಗೆ | ಇದಿರೋಕರಿಕೆಗೆ |
| ,, | 24 | ಹೊನ್ನೆಗೆ | ಹೆನ್ನೆಗೆ |
| ,, | 27 | ಹೊನ್ನೆ | ಹೆನ್ನೆ |
| ,, | ,, | ಕಿರುಸಾಲೆ | ಕಿರುಕಸಾಲೆ |
| ,, | 28 | ಹೊನ್ನೆಗೆ | ಹೆನ್ನೆಗೆ |
| ,, | 29 | ಹೊನ್ನು | ಹೆನ್ನೆ |
| 79 | 15 | ಎಡೆಬಾವಿಗೆ | ಎದೆಬಾವಿಗೆ |
| ,, | 16 | ಎಡೆಬಾವು | ಎದೆಬಾವು |
| 86 | 7 | ಅದೆರೊಳಗೆ | ಅದರೊಳಗೆ |
| 89 | 15 | ಮಗವಿನ | ಮಗುವಿನ |
| 91 | 1 | ನಷ್ಟವಾವರೆ | ನಷ್ಟವಾದರೆ |
| 92 | 20 | ಪ್ರಪೃತ್ತಿಯಾಗಿ | ಪ್ರವೃತ್ತಿಯಾಗಿ |
| 100 | 5 | ನಷ್ಟೇಂದ್ರಿಯಕ್ಕೆ | ಗರ್ಭ ನಿಲ್ಲುವರೆ |
| 112 | 29 | ಯಿವಸಿಂಹಿ | ಯವಸಿಂಹಿ |
| 116 | 15 | ಜಪಸ್ನುಪ್ರತ್ರಮುಪಾಪ್ನುಯಾತ್ | ಜಪಸ್ನುಪ್ರತ್ರಮುವಾಪ್ನುಯಾತ್ |
| ,, | 16 | ಆಹಿರ್ಬುರ್ಧ್ನ್ಯೋ | ಅಹಿರ್ಬುರ್ಧ್ನ್ಯೋ |
| 120 | 32 | ಗೋಡಗೆ | ಗೋಡೆಗೆ |
| 130 | 7 | ಹಲಕುರುವಿಗೆ | ಹಲ್ಲಕುರುವಿಗೆ |
| 136 | 14 | ಕಣ್ಣುಹುಳು | ಕಣ್ಣುಹುಳುಕು |
| 144 | 1 | ಪಂಚಸಾದಕ್ಕೆ | ಪಂಚಸಾರಕ್ಕೆ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 167 | 25 | ಶಿಧಿಲವಾಗೆ | ಶಿಥಿಲವಾಗೆ |
| 175 | 12 | ಕಜ್ಚಿಗೆ | ಕಜ್ಜಿಗೆ |
| 182 | 1 | ದ್ವಿತಿಯ | ದ್ವಿತೀಯ |
| 183 | 6 | ವಪುಷ್ಪಃ | ವಪುಷಃ |
| 183 | 31 | ಧಾತ್ರ್ಯಲಾಶ್ಮ | ಧಾತ್ರ್ಯೀಲಾಶ್ಮ |
| 184 | 8 | ಕೃಮಿಕೋಟಶತಂ | ಕೃಮಿಕೋಟಿಶತಂ |
| 191 | 26 | ಸೂಬೀ | ಸೂಚೀ |
| 200 | 8 | ಈಪಂಕ್ತಿಗೆ ಮೇಲೆ D-1400ಎಂದು ಸೇರಿಸಿ ಓದುವುದು | |
| 202 | 14 | D-1399 | D-1393 |
| 213 | 15 | ಸಮಾಮ್ಯಹಂ | ನಮಾಮ್ಯಹಂ |

---